# ಉಪಾಧಿಖಂಡನ

## ಕನ್ನಡ ಅನುವಾದ



ಅನುವಾದ :

ಡಾ|| ಕಾಂತೇಶಾಚಾರ್ಯ ಕದರಮಂಡಲಗಿ

ಪ್ರಕಾಶನ :

[illegible]ಪರಿಷತ್, [illegible]

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 139

# ಉಪಾಧಿಖಂಡನ

ಕನ್ನಡ ಅನುವಾದ

... ಅನುವಾದ ...

ಡಾ|| ಕಾಂತೇಶಾಚಾರ್ಯ ಕದರಮಂಡಲಗಿ

... ಪ್ರಕಾಶನ ...

ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ, ಬೆಂಗಳೂರು

# ಉಪಾಧಿಖಂಡನ

ಕನ್ನಡ ಅನುವಾದ

ಅನುವಾದ : ಡಾ|| ಕಾಂತೇಶಾಚಾರ್ಯ ಕದರಮಂಡಲಗಿ

ಮೊದಲ ಮುದ್ರಣ : ಏಪ್ರಿಲ್ 2014

ಪ್ರತಿಗಳು : 1000

ಪುಟಗಳು : 176



ಬೆಲೆ : ರೂ. 60/-

**Vishva Madhwa Maha Parishat**
#11 2nd Floor Uttaradimath Building.
UttaradiMath Road, Shankarpuram,
Basavanagudi BANGALORE - 4
Phone : 080 26603692

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

ಮುಖಪುಟ ವಿನ್ಯಾಸ : ಗೋಪಾಲಕೃಷ್ಣ ದಾವಣಗೇರಿ

ಮುದ್ರಣ : ವಾಗರ್ಥ, ಬೆಂಗಳೂರು-೧೯. vagartha@yahoo.com



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀ ದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ ಶ್ರೀ ಶ್ರೀ ೧೦೦೮
ಶ್ರೀ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

# ಅನುಗ್ರಹಸಂದೇಶ

**ವಾದಾದಯಃ ಪ್ರಕರಣಸ್ಫುಲಿಂಗಾಃ ತನವೋಽಪ್ಯಲಮ್ ।**
**ವಿಪಕ್ಷಕಕ್ಷಂ ಕ್ಷಿಣ್ವಂತಿ ಮಾರುತೇನ ತ್ವಯೇರಿತಾಃ ॥**

ಎಂಬ ನಾರಾಯಣಪಂಡಿತಾಚಾರ್ಯರ ಉಕ್ತಿಯಂತೆ ಶ್ರೀಮದಾಚಾರ್ಯರ ಒಂದೊಂದು ಪ್ರಕರಣಗ್ರಂಥಗಳು ಪ್ರತಿಪಕ್ಷವೆಂಬ ಅರಣ್ಯವನ್ನು ಸುಡುವುದರಲ್ಲಿ ಪ್ರಜ್ವಲಿಸುವ ಕಿಡಿಗಳಂತೆ ಇವೆ. ಅವುಗಳಲ್ಲಿ ಒಂದಾದದ್ದು ಉಪಾಧಿಖಂಡನ. ಸರ್ವಜ್ಞನಾದ ಬ್ರಹ್ಮನಿಂದ ಅಭಿನ್ನನಾದ ಜೀವನಿಗೆ ಅಜ್ಞಾನಾದಿದೋಷಗಳು ಉಪಪನ್ನವಾಗುವುದಿಲ್ಲವೆಂದು, ಅದ್ವೈತಿಗಳು ಉಪಾಧಿಯನ್ನು ಅಂಗೀಕಾರ ಮಾಡುತ್ತಾರೆ. ಜೀವ-ಬ್ರಹ್ಮರಲ್ಲಿ ಸ್ವಾಭಾವಿಕ ಅಭೇದವಿದ್ದರೂ ಔಪಾಧಿಕಭೇದವಿದೆ ಎಂಬುದಾಗಿ ಹೇಳುತ್ತಾರೆ.

ಅದ್ವೈತಮತದಲ್ಲಿ ಈ ಉಪಾಧಿಕಲ್ಪನೆಯು ಉಪಪನ್ನವಾಗುವುದಿಲ್ಲ, ಅನವಸ್ಥಾದಿದೋಷಗಳು ಬರುತ್ತವೆ ಇತ್ಯಾದಿವಿಷಯಗಳನ್ನು ಈ ''ಉಪಾಧಿ ಖಂಡನ''ವೆಂಬ ಗ್ರಂಥದಲ್ಲಿ ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ಪುಟ್ಟದಾದರೂ ಈ ಕೃತಿಯು ಗಂಭೀರವಾದ್ದರಿಂದ ಶ್ರೀಮದಾಚಾರ್ಯರ ಹಾರ್ದವನ್ನು ತಿಳಿಯಲು ಅಸಾಧ್ಯವಾದಾಗ, ಶ್ರೀಮಟ್ಟೀಕಾಕೃತ್ಪಾದರು ಟೀಕೆಯನ್ನು ರಚಿಸಿ, ನಮಗೆಲ್ಲ ಪರಮೋಪಕಾರ ಮಾಡಿದ್ದಾರೆ. ಟೀಕಾಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಯಲು ಶ್ರೀವ್ಯಾಸರಾಜರು, ಶ್ರೀಸತ್ಯನಾಥರು, ಶ್ರೀನಿವಾಸತೀರ್ಥರು ಮೊದಲಾದ ವ್ಯಾಖ್ಯಾನಕಾರರು ಟಿಪ್ಪಣಿಗಳನ್ನು ರಚಿಸಿ, ಜಿಜ್ಞಾಸುಗಳಿಗೆ ಮಹೋಪಕಾರವನ್ನು ಮಾಡಿದ್ದಾರೆ.

ವಿಶೇಷವಾಗಿ ಸಂಸ್ಕೃತದ ಪರಿಚಯವಿಲ್ಲದ ಜನರಿಗೆ ಸುಲಭವಾಗಿ ಮೂಲ ಹಾಗೂ ಟೀಕಾ-ಟಿಪ್ಪಣಿಗಳ ಭಾವವು ಸ್ಪಷ್ಟವಾಗುವುದಕ್ಕೆ ನಮ್ಮ ಪ್ರಿಯಶಿಷ್ಯರಾದ ಪಂ.ಕಾಂತೇಶಾಚಾರ್ಯ ಕದರಮಂಡಲಗಿ ಇವರು ಟೀಕಾಸಮೇತ ಮೂಲದ ಕನ್ನಡ ಅನುವಾದವನ್ನು ರಚಿಸಿದ್ದಾರೆ.

ಇವರ ಶೈಲಿ ಸುಬೋಧ ಹಾಗೂ ಪರಿಷ್ಕೃತ. ಈಗಾಗಲೇ ಅನೇಕ ಅನುವಾದ ಕಾರ್ಯಗಳನ್ನು ಮಾಡಿದ್ದಾರೆ. ಮತ್ತು ಸಂಶೋಧನಾತ್ಮಕವಾದ ಅನೇಕ ಕೃತಿಗಳನ್ನು ರಚಿಸಿ, ಡಾಕ್ಟರೇಟ್ ಪದವಿಯನ್ನು ಪಡೆದಿದ್ದಾರೆ.

ಇವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ದಯಪಾಲಿಸಿ, ಇತೋಪ್ಯತಿಶಯವಾಗಿ ಗ್ರಂಥಲೇಖನಾದಿಕಾರ್ಯಗಳನ್ನು ಇವರಿಂದ ಮಾಡಿಸಲೆಂದು ನಮ್ಮ ಉಪಾಸ್ಯಮೂರ್ತಿ ಶ್ರೀಮೂಲಸೀತಾಸಮೇತ ಶ್ರೀಮೂಲರಾಮ, ದಿಗ್ವಿಜಯರಾಮ, ವೇದವ್ಯಾಸ, ವಂಶರಾಮ, ಪ್ರಸನ್ನವಿಠ್ಠಲ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಪ್ರಕೃತದಲ್ಲಿ ನಮ್ಮ ಗುರುಗಳಿಂದ ಸ್ಥಾಪಿತವಾದ ಶ್ರೀಜಯತೀರ್ಥವಿದ್ಯಾಪೀಠದ ರಜತಮಹೋತ್ಸವದ ನಿಮಿತ್ತವಾಗಿ ಈ ಹೊತ್ತಿಗೆಯನ್ನು ಹೊರತರಲಾಗುತ್ತಿದೆ. ಇದರ ಸದುಪಯೋಗವನ್ನು ಸಜ್ಜನರು ಪಡೆಯಬೇಕು.

ಇತ್ಯನೇಕ ನಾರಾಯಣ ಸ್ಮರಣೆಗಳು

ಶ್ರೀಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು

ಶ್ರೀಉತ್ತರಾದಿಮಠ

# ಇಣಕು ನೋಟ

ಶ್ರೀಮದಾಚಾರ್ಯರು ರಚಿಸಿರುವ ಸರ್ವಮೂಲಗ್ರಂಥಗಳಲ್ಲಿ ''ಖಂಡನತ್ರಯ'' ಎಂದೇ ಪ್ರಸಿದ್ಧವಾದ ಗ್ರಂಥಗಳು 1) ಮಾಯಾವಾದಖಂಡನ 2) ಪ್ರಪಂಚಮಿಥ್ಯಾತ್ವಾನುಮಾನಖಂಡನ 3) ಉಪಾಧಿಖಂಡನ. ಈ ಮೂರೂ ಗ್ರಂಥಗಳು ಮಾಯಾವಾದಮತವನ್ನು ಅನೇಕರೀತಿಯಿಂದ ಖಂಡಿಸುವುದಕ್ಕಾಗಿ ಹೊರಟಿವೆ.

**ಉಪಾಧಿಖಂಡನ**

''ವೇದಾದಿಶಾಸ್ತ್ರಗಳು ಜೀವ-ಬ್ರಹ್ಮರ ಐಕ್ಯವನ್ನು ಪ್ರತಿಪಾದಿಸುವುದಿಲ್ಲ. ಸರ್ವಜ್ಞನಾದ ಪರಮಾತ್ಮನಿಗೂ ಅಲ್ಪಜ್ಞನಾದ ಜೀವನಿಗೂ ಪಾರಮಾರ್ಥಿಕಭೇದವೇ ಶಾಸ್ತ್ರಸಮ್ಮತವಾಗಿದೆ'' ಎನ್ನುವುದು ಶ್ರೀಮದಾಚಾರ್ಯರ ಸಿದ್ಧಾಂತ.

ಅದ್ವೈತಮತದ ಪ್ರಕಾರ ಜೀವ-ಬ್ರಹ್ಮರಲ್ಲಿ ಹಾಗೂ ಪರಸ್ಪರ ಜೀವರಲ್ಲಿ ಸ್ವಾಭಾವಿಕವಾಗಿ ಐಕ್ಯವೇ ಇದೆ. ಹಾಗಾದರೆ ಬ್ರಹ್ಮನಿಗಿಲ್ಲದ ಅಜ್ಞಾನ ಜೀವನಿಗೇಕೆ? ದೇವದತ್ತನು ಅನುಭವಿಸುವ ಸುಖ-ದುಃಖಾನುಸಂಧಾನ ಯಜ್ಞದತ್ತನಿಗೆ ಏಕೆ ಬರುವುದಿಲ್ಲ ? ಎಂದು ಪ್ರಶ್ನೆ ಬಂದರೆ, ಅಲ್ಲಿ ಸ್ವಾಭಾವಿಕವಾಗಿ ಐಕ್ಯವೇ ಇದ್ದರೂ ಸಹ ಅಂತಃಕರಣಾದಿ ಉಪಾಧಿಗಳು ಭಿನ್ನಭಿನ್ನವಾದ್ದರಿಂದ ಉಪಾಧಿಭೇದದಿಂದಾಗಿ ಸರ್ವಜ್ಞತ್ವ-ಅಲ್ಪಜ್ಞತ್ವಗಳು, ಅನುಸಂಧಾನ-ಅನನುಸಂಧಾನಗಳು ಉಪಪನ್ನವಾಗುತ್ತವೆ ಎಂಬುದಾಗಿ ಮಾಯಾವಾದಿಗಳು ಅಭಿಪ್ರಾಯಪಡುತ್ತಾರೆ.

ಅಂದರೆ ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವಾಭಾವಿಕವಾಗಿ ಐಕ್ಯವೇ ಇದ್ದರೂ ಸಹ ಔಪಾಧಿಕವಾದ (ಉಪಾಧಿಯಿಂದ ಹುಟ್ಟುವ) ಭೇದವೂ ತಾತ್ಕಾಲಿಕವಾಗಿ ಇದೆ ಎನ್ನುತ್ತಾರೆ ಅದ್ವೈತವಾದಿಗಳು.

ಆದರೆ ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವಾಭಾವಿಕವಾಗಿ ಭೇದವೇ ಇರುವುದು. ಸ್ವಾಭಾವಿಕವಾಗಿ ಇದ್ದ ಭೇದವನ್ನೇ ಅಂತಃಕರಣಾದಿ ಉಪಾಧಿಗಳು ತಿಳಿಸುತ್ತವೆಯೇ ಹೊರತು ಹೊಸದಾದ (ಮೊದಲು ಇಲ್ಲದ) ಭೇದವನ್ನು ಹುಟ್ಟಿಸುವುದಿಲ್ಲ ಎಂಬುದನ್ನು ಸಮರ್ಥಿಸಲು ಹೊರಟದ್ದು ಈ ಉಪಾಧಿಖಂಡನ ಪ್ರಕರಣ. ಉಪಾಧಿಯು ಜೀವ-ಬ್ರಹ್ಮಭೇದನಿಮಿತ್ತವಲ್ಲ ಎಂಬುದಾಗಿ ಉಪಾಧಿಗೆ ಭೇದಜನಕತ್ವವನ್ನು ಖಂಡಿಸುವುದರಿಂದ ಈ ಗ್ರಂಥಕ್ಕೆ ''ಉಪಾಧಿಖಂಡನ'' ಎಂದು ಹೆಸರು ಸಾರ್ಥಕವಾಗಿದೆ.

ಈ ಗ್ರಂಥಕ್ಕೆ ''ತತ್ವಪ್ರಕಾಶಿಕಾ'' ಎನ್ನುವುದು ಮತ್ತೊಂದು ಹೆಸರು. ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಂದ ಪ್ರತಿಪಾದ್ಯವಾದ ಪರತತ್ವ-ಅಪರತತ್ವಗಳನ್ನು ಪ್ರಕಾಶಗೊಳಿಸುತ್ತದೆ ಎಂಬ ಕಾರಣ ಇದಕ್ಕೆ 'ತತ್ವಪ್ರಕಾಶಿಕಾ' ಎಂಬ ಹೆಸರು ಅನ್ವರ್ಥಕ. ಈ ರೀತಿಯಾಗಿ ಜೀವ-ಬ್ರಹ್ಮರಲ್ಲಿ ಔಪಾಧಿಕಭೇದವನ್ನು ನಿರಾಕರಿಸಿ, ಸ್ವಾಭಾವಿಕವಾದ ಭೇದವನ್ನೇ ಸಮರ್ಥಿಸಿದ್ದಾರೆ ಆಚಾರ್ಯರು ಈ ಗ್ರಂಥದಲ್ಲಿ.

ಗ್ರಂಥವು ಗಾತ್ರದೃಷ್ಟಿಯಲ್ಲಿ ಚಿಕ್ಕದಾದರೂ ವಿಷಯದೃಷ್ಟಿಯಲ್ಲಿ ಬಹಳ ಗಂಭೀರವಾಗಿದೆ. ಬಹಳ ಸುಂದರವಾಗಿದೆ. ಚಿಕ್ಕದಾಗಿ ಚೊಕ್ಕವಾಗಿ ಐಕ್ಯವಾದವನ್ನು ಖಂಡಿಸಿದ್ದಾರೆ ಆಚಾರ್ಯರು. ಟೀಕಾಕೃತ್ಪಾದರು ತಮ್ಮ ಮನೋಹರಶೈಲಿಯ ಸುಂದರವಾಕ್ಯಗಳಿಂದ ವಿಷಯಗಳನ್ನು ಸಮರ್ಪಕವಾಗಿ ಮಂಡಿಸಿದ್ದಾರೆ. ವ್ಯಾಸರಾಜರ ಮಂದಾರಮಂಜರೀ, ಶ್ರೀಸತ್ಯನಾಥತೀರ್ಥರ ಮಾಯಾವಾದಪರಶು, ಶ್ರೀನಿವಾಸತೀರ್ಥರ ದುರ್ಗಮಾರ್ಥವ್ಯಾಖ್ಯಾ ಹೀಗೆ ಅನೇಕ ಟಿಪ್ಪಣಿಗಳೂ ಮೂಲ-ಟೀಕಾಗ್ರಂಥಗಳ ಅಧ್ಯಯನಕ್ಕೆ ಬಹಳ ಸಹಕಾರಿಯಾಗಿವೆ. ಮೂಲ-ಟೀಕಾಗ್ರಂಥಗಳಲ್ಲಿ ಅಡಗಿದ ಗೂಢಾಭಿಪ್ರಾಯಗಳನ್ನು, ಟೀಕೆಯ ನಿಜವಾದ ಭಾವವನ್ನು, ರಹಸ್ಯವಿಚಾರಗಳನ್ನು ಎತ್ತಿ ತೋರಿಸಿದ್ದಾರೆ ಟಿಪ್ಪಣೀಕಾರರು.

**ಖಂಡನತ್ರಯಕ್ಕೆ ಅನುವಾದ**

ಖಂಡನತ್ರಯ ಎಂದರೆ ವೇದಾಂತಗ್ರಂಥಗಳ ಅಧ್ಯಯನ ಪ್ರಾರಂಭಿಸುವ ಜಿಜ್ಞಾಸುಗಳಿಗೆ ಉತ್ತಮ ಬುನಾದಿ ಹಾಕುವ ಪುಟ್ಟ ಪುಟ್ಟ ಗ್ರಂಥಗಳು. ಅಂತೆಯೇ ಪಾಠಕ್ರಮದಲ್ಲಿ ನಿಯಮೇನ ಅಳವಡಿಸುವ ಪಠ್ಯಗ್ರಂಥಗಳಾಗಿವೆ.

ಇಂತಹ ಖಂಡನತ್ರಯದ ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಸಹಾಯಕವಾಗಲಿ ಎಂಬ ದೃಷ್ಟಿಯಿಂದ ಖಂಡನತ್ರಯಕ್ಕೆ ಕನ್ನಡ ಅನುವಾದಕಾರ್ಯವನ್ನು ಕೈಗೆತ್ತಿಕೊಂಡು, ಅದರ ಮೊದಲ ಹಂತವಾಗಿ 'ಮಾಯಾವಾದಖಂಡನ'ಗ್ರಂಥಕ್ಕೆ ಕನ್ನಡ ಅನುವಾದ ಪ್ರಕಟವಾಗಿದೆ. ಪ್ರಕೃತ ಎರಡನೇ ಹಂತವಾಗಿ 'ಉಪಾಧಿಖಂಡನ'ಗ್ರಂಥಕ್ಕೆ ಕನ್ನಡ ಅನುವಾದ ಸಿದ್ಧವಾಗಿದೆ.

**ಅನುವಾದಕ್ರಮ**

ಈ ಅನುವಾದ ಕಾರ್ಯದಲ್ಲಿ ಕೆಲವು ಕ್ರಮಗಳನ್ನು ಅಳವಡಿಸಿಕೊಳ್ಳಲಾಗಿದೆ.

1) ಮೊದಲು ಟೀಕಾಪಂಕ್ತಿ ಏಕೆ ಹೊರಟಿದೆ ? ಎಂದು ತಿಳಿಯಲು ಅವತಾರಿಕೆ ನೀಡುವುದು.

2) ಶ್ರೀನಿವಾಸತೀರ್ಥರ ಟಿಪ್ಪಣಿಯನ್ನು ಪೂರ್ಣವಾಗಿ ಇಟ್ಟುಕೊಂಡು ಅದಕ್ಕನುಗುಣವಾಗಿ ಟೀಕೆಯ ಅಭಿಪ್ರಾಯವನ್ನು ಸ್ಪಷ್ಟಮಾಡುವುದು.

3) ಟಿಪ್ಪಣಿಗಳಲ್ಲಿ ತಿಳಿಸಿರುವ ವಿವರಣೆಯನ್ನು, ವಿಶೇಷವಿಚಾರಗಳನ್ನು, ಸೂಕ್ಷ್ಮವಿಷಯಗಳನ್ನು ''ವಿವರಣೆ'' ''ವಿಶೇಷವಿಚಾರ'' ಇತ್ಯಾದಿ ಉಪನಾಮಗಳಲ್ಲಿ ವಿವರಿಸುವುದು.

4) ಅಧ್ಯೇತೃಗಳ ಅಧ್ಯಯನಕ್ಕೆ ಸಹಕಾರಿಯಾಗುವಂತೆ ಟೀಕಾಪಂಕ್ತಿಗಳಲ್ಲಿನ ಕಠಿಣಪದಗಳಿಗೆ ಅರ್ಥ ತಿಳಿಸುವುದು, ವಾಕ್ಯದ ಅಭಿಪ್ರಾಯ ತಿಳಿಸುವುದಕ್ಕಾಗಿ ಅಲ್ಲಿನ ಟಿಪ್ಪಣೀವಾಕ್ಯಗಳನ್ನು ಉದಾಹರಿಸುವುದು ಇತ್ಯಾದಿ ಕಾರ್ಯಗಳನ್ನು ಅಡಿಟಿಪ್ಪಣಿಯಲ್ಲಿ ಕೈಗೊಳ್ಳಲಾಗಿದೆ. ಹೀಗೆ ಮೂರು-ನಾಲ್ಕು ಕ್ರಮಗಳನ್ನು ಅನುಸರಿಸಿ, ಮೊದಲು ಕೇವಲ ಟೀಕೆಯ ಅನುವಾದ, ನಂತರ ವಿವರಣೆ, ಟಿಪ್ಪಣಿಗಳ ವಿಶೇಷವಿಚಾರಗಳು, ಈ ಕ್ರಮದಲ್ಲಿ ಕನ್ನಡಅನುವಾದಕಾರ್ಯ ಮೂಡಿಬಂದಿದೆ.

ವಿಶೇಷವಾಗಿ ಬಿದರಹಳ್ಳಿ ಶ್ರೀಶ್ರೀನಿವಾಸತೀರ್ಥರ ಟಿಪ್ಪಣಿಯನ್ನು ಸಂಪೂರ್ಣವಾಗಿ ಆಧರಿಸಿ, ಮೂಲ-ಟೀಕೆಗಳಿಗೆ ಅನುವಾದ ಮಾಡಲಾಗಿದೆ.

**''ಗುರುವಂದನೆ''**

ಶ್ರೀಜಯತೀರ್ಥವಿದ್ಯಾಪೀಠದಲ್ಲಿ ಅಧ್ಯಯನ ಮಾಡುವಾಗ ನಮ್ಮ ವರ್ಗಕ್ಕೆ ಖಂಡನತ್ರಯದ ಪಾಠ ಹೇಳಿ ಜ್ಞಾನ ನೀಡಿದವರು **ಪಂ.ನರಸಿಂಹಾಚಾರ್ಯ ಕಟ್ಟಿ**

ಅವರು. ಪ್ರಾಮಾಣಿಕತೆಯಿಂದ ಚೆನ್ನಾಗಿ ಪಾಠ ಹೇಳಿ ಗ್ರಂಥವನ್ನು ತಯಾರು ಮಾಡಿಸಿದ್ದರು. ಅವರಿಗೆ ಈ ಸಂದರ್ಭದಲ್ಲಿ ಭಕ್ತಿಪೂರ್ವಕ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ.

ನಮ್ಮ ವರ್ಗಕ್ಕೆ ವಿಶೇಷವಾಗಿ ಸಮಗ್ರ ವೇದಾಂತಗ್ರಂಥಗಳ ಪಾಠ ಹೇಳಿ, ವೇದಾಂತದ ಅಧ್ಯಯನದಲ್ಲಿ ವಿಶೇಷ ಅಭಿರುಚಿ ಮೂಡಿಸಿದವರು **ಪಂ.ಆಲೂರು ಶ್ರೀನಿವಾಸಾಚಾರ್ಯರು.** ಟಿಪ್ಪಣಿಗಳ ಅಧ್ಯಯನ ಎಷ್ಟು ಆವಶ್ಯಕ, ಟಿಪ್ಪಣಿಗಳ ಅಧ್ಯಯನ ಹೇಗೆ ಮಾಡಬೇಕು, ಅನುವಾದ ಹೇಗೆ ಮಾಡಬೇಕು ಇತ್ಯಾದಿವಿಚಾರಗಳನ್ನು ಮನದಟ್ಟುಮಾಡಿಸಿ, ವ್ಯುತ್ಪತ್ತಿ ನೀಡಿದವರು ಅವರು. ವೇದಾಂತಗ್ರಂಥಗಳ ಎರಡುಅಕ್ಷರಗಳನ್ನು ಓದಲು ಕಲಿಸಿದವರು ಅವರು. ಜೊತೆಗೆ ಈ ನನ್ನ ಅನುವಾದವನ್ನು ಸಂಪೂರ್ಣವಾಗಿ ಅವಲೋಕಿಸಿ, ಸರಿ-ತಪ್ಪು ನಿರ್ಣಯ ನೀಡಿ, ಗ್ರಂಥಪ್ರಕಾಶನಕ್ಕೆ ವಿಶೇಷ ಅನುಗ್ರಹ ಮಾಡಿದ್ದಾರೆ. ಅವರಿಗೂ ನನ್ನ ಭಕ್ತಿಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

### ಕೃತಜ್ಞತೆಗಳು

ಸಾಧನೆಗೆ ಮನುಷ್ಯಜನ್ಮ ಅತ್ಯಾವಶ್ಯಕ. ತಾವೂ ಸಾಧಕರಾಗಿ, ಸಾಧನೆಗಾಗಿ ನನಗೊಂದು ಜನ್ಮ ನೀಡಿದ ನನ್ನ ಪೂಜ್ಯ ತಂದೆ-ತಾಯಿಗಳಿಗೆ (ದಿ. ಕೃಷ್ಣಮೂರ್ತಿಆಚಾರ್ಯ ಆರ್.ಎಂ.ಎಸ್, ರಾಧಾಬಾಯಿ ಅವರಿಗೆ) ನನ್ನ ನಮನಗಳು.

ಈ ಕೃತಿಯು ಹೊರಬರುವುದಕ್ಕೆ ಅನೇಕರು ಅನೇಕರೀತಿಯಿಂದ ಸಹಕಾರ ನೀಡಿದ್ದಾರೆ. ಗ್ರಂಥದ ಸಂಪೂರ್ಣ ಡಿ.ಟಿ.ಪಿ. ಮಾಡಿಕೊಟ್ಟವರು ವೇಣುಗೋಪಾಲಾಚಾರ್ಯರು. ಕೃತಿಗೆ ಸುಂದರವಾಗಿ ಅಂತಿಮಸ್ಪರ್ಶ ನೀಡಿದವರು ಪಂ.ಮಹಿದಾಸಾಚಾರ್ಯರು. ಮನೋಹರವಾದ ರಕ್ಷಾಪುಟವನ್ನು ರಚಿಸಿಕೊಟ್ಟವರು ಗೋಪಾಲಕೃಷ್ಣ ಅವರು. ಚೆನ್ನಾಗಿ ಮುದ್ರಣ ಮಾಡಿ, ಸಕಾಲಕ್ಕೆ ನಿಮ್ಮ ಕೈಗೆ ಸೇರಿಸಿದವರು 'ವಾಗರ್ಥ' ಪ್ರೆಸ್‌ನವರು. ಎಲ್ಲರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

### ರಜತಮಹೋತ್ಸವದ ಚಿಕ್ಕ ಹೊತ್ತಿಗೆ

ಪ್ರಾತಃಸ್ಮರಣೀಯರಾದ ಶ್ರೀಶ್ರೀಸತ್ಯಪ್ರಮೋದತೀರ್ಥರಿಂದ 1989 ರಲ್ಲಿ ಸ್ಥಾಪಿತವಾದ **''ಶ್ರೀಜಯತೀರ್ಥವಿದ್ಯಾಪೀಠ''ವು** 25 ವರ್ಷಗಳ ರಜತಮಹೋತ್ಸವವನ್ನು ಆಚರಿಸಿಕೊಳ್ಳುತ್ತಿದೆ. ವೇದಾಂತ-ತರ್ಕ-ವ್ಯಾಕರಣಾದಿ

ನಾನಾಶಾಸ್ತ್ರಗಳಲ್ಲಿ ಪರಿಣತರಾದ ನೂರಾರು ವಿದ್ವಾಂಸರನ್ನು ಲೋಕಾರ್ಪಣೆ ಮಾಡಿದೆ. ಅಂತಹ ರಜತಮಹೋತ್ಸವದ ಸುಸಂದರ್ಭದಲ್ಲಿ ವಿದ್ಯಾಪೀಠವು ಕೈಗೊಂಡ ತತ್ತ್ವಜ್ಞಾನಪ್ರಸಾರಕಾರ್ಯದಲ್ಲಿ ಟೀಕಾಗ್ರಂಥದ ಅನುವಾದಕೃತಿಯನ್ನು ಹೊರತರುತ್ತಿರುವುದು ವಿದ್ಯಾಪೀಠದಲ್ಲಿ ಓದಿದ ನನ್ನ ಒಂದು ಚಿಕ್ಕ ಅಳಿಲುಸೇವೆ.

ಆದರೆ ಒಂದು ಮಾತು ಸತ್ಯ. ನಾನು ಪಂಡಿತನಲ್ಲ. ದೊಡ್ಡ ಅನುಭವಿಯೂ ಅಲ್ಲ. ಆದರೂ ಕೇವಲ ಶ್ರೀಗಳವರ ಅನುಗ್ರಹದಿಂದ, ಎಲ್ಲರ ಪ್ರೋತ್ಸಾಹದಿಂದ ನನ್ನ ಬುದ್ಧ್ಯನುಸಾರವಾಗಿ ಸಾಧ್ಯವಾದಷ್ಟು ಅನುವಾದ ಮಾಡಿದ್ದೇನೆ. ಸುಜನರು ಹಂಸಕ್ಷೀರನ್ಯಾಯದಿಂದ ದೋಷಗಳನ್ನು ನನಗೆ ಬಿಟ್ಟು, ಗುಣಗಳಿದ್ದರೆ ಅದು ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ ಪರಮಾಶೀರ್ವಾದ ಎಂದು ತಿಳಿಯಬೇಕು. ವಿದ್ವಾಂಸರು, ಜಿಜ್ಞಾಸುಗಳು, ವಿದ್ಯಾರ್ಥಿಗಳು ಈ ನನ್ನ ಅನುವಾದ ಗ್ರಂಥವನ್ನು ಓದಿ ಪ್ರೋತ್ಸಾಹಿಸಬೇಕೆಂದು ವಿನಂತಿಸಿಕೊಳ್ಳುತ್ತೇನೆ.

‘अनेन भावि यत्पुण्यं तदाप्नोतु गुरुं मम’

ಗುರುಪಾದಸೇವಕ

**ಕಾಂತೇಶಾಚಾರ್ಯ ಕದರಮಂಡಲಗಿ**



# ಪ್ರಕಾಶಕರ ನುಡಿ

ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ ''**ವಿಶ್ವಮಧ್ವಮಹಾಪರಿಷತ್**''

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈ ದೃಷ್ಟಿಯಲ್ಲಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಮಹತ್ವದ ಗ್ರಂಥಗಳನ್ನು ಅನೇಕ ಟೀಕಾ-ಟಿಪ್ಪಣಿಗಳೊಂದಿಗೆ ಪ್ರಕಾಶಿಸಿದೆ. ಇದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು- ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ ''**ಉಪಾಧಿಖಂಡನ**'' ಕನ್ನಡ ಅನುವಾದ ಗ್ರಂಥವು ವಿಶ್ವಮಧ್ವಮಹಾ-ಪರಿಷತ್ತಿನಿಂದ ಪ್ರಕಾಶಿತವಾಗುತ್ತಿದೆ. ಇದರ ಅನುವಾದ ಮಾಡಿದ ಪಂ. ಕಾಂತೇಶಾಚಾರ್ಯ ಕದರಮಂಡಲಗಿ ಇವರಿಗೆ, ಸುಂದರವಾಗಿ ಮುದ್ರಣ ಮಾಡಿದ ವಾಗರ್ಥಮುದ್ರಣಾಲಯದವರಿಗೆ ಧನ್ಯವಾದಗಳು.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು - 4

# ಉಪಾಧಿಖಂಡನಮ್

॥ ಹನುಮಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕಲಕ್ಷ್ಮೀಹಯಗ್ರೀವಾಯ ನಮಃ ॥

**॥ ಶ್ರೀಗುರುಭ್ಯೋ ನಮಃ ॥**

**ಅವತಾರಿಕೆ :-** ಸರ್ವಜ್ಞಕಲ್ಪರಾದ ಟೀಕಾಕಾರರಾದ ಶ್ರೀಜಯತೀರ್ಥ ಶ್ರೀಮಚ್ಚರಣರು ಶ್ರೀಮದಾಚಾರ್ಯರ 'ತತ್ವಪ್ರಕಾಶಿಕಾ' ಎಂದು ಮತ್ತೊಂದು ಹೆಸರುಳ್ಳ, 'ಉಪಾಧಿಖಂಡನ'ಗ್ರಂಥಕ್ಕೆ ವ್ಯಾಖ್ಯಾನವನ್ನು (ಟೀಕೆಯನ್ನು) ವಿರಚಿಸಲು ಇಚ್ಛೆ ಉಳ್ಳವರಾಗಿ, ತಾವು ವ್ಯಾಖ್ಯಾನ ಮಾಡಲು ಹೊರಟಿರುವ ಗ್ರಂಥವು (ಟೀಕೆಯು) ನಿರ್ವಿಘ್ನವಾಗಿ ಪರಿಸಮಾಪ್ತವಾಗುವುದಕ್ಕಾಗಿ ಸ್ವಇಷ್ಟದೇವತಾನಮಸ್ಕಾರ ರೂಪವಾದ ಮಂಗಳಾಚರಣೆಯನ್ನು (ತಮಗೆ ಇಷ್ಟರಾದ ದೇವತೆಯನ್ನು ನಮಸ್ಕರಿಸುವುದೇ ಮಂಗಳಾಚರಣೆ, ಅದನ್ನು) ಮನಸ್ಸಿನಲ್ಲಿ ಮಾಡಿಕೊಂಡು, ಅಸನ್ನಿಹಿತರಾದ ಶಿಷ್ಯರಿಗೂ ಶಿಕ್ಷಣ ನೀಡುವುದಕ್ಕಾಗಿ ತಾವು ಮಾಡಿಕೊಂಡ ಮಾನಸಿಕ ಮಂಗಳಾಚರಣೆಯನ್ನು ಗ್ರಂಥದ ಪ್ರಾರಂಭದಲ್ಲಿ (ಬರೆಯುವವರಾಗಿ) ಉಪನಿಬಂಧನ ಮಾಡುವವರಾಗಿ, ತಾವು ಏನು ಮಾಡಲು ಹೊರಟಿದ್ದೇವೆ ಎನ್ನುವುದನ್ನು ಪ್ರತಿಜ್ಞೆ ಮಾಡುತ್ತಾರೆ :-

**ಟೀಕಾ :- ರಮಾಯಾ ರಮಣಂ ನತ್ವಾ ಗುಣಮಾಣಿಕ್ಯಮಂಡನಮ್।**

**ತತ್ವಪ್ರಕಾಶಿಕಾವ್ಯಾಖ್ಯಾಂ ಕರಿಷ್ಯಾಮೋ ಯಥಾಮತಿ ॥**

**ಅರ್ಥ :- ಗುಣಮಾಣಿಕ್ಯಮಂಡನಮ್** = ಜ್ಞಾನ ಆನಂದಾದಿ ಅನಂತಗುಣಗಳೇ ಮಾಣಿಕ್ಯಗಳು, ಅಂತಹ ಗುಣಮಾಣಿಕ್ಯಗಳೇ ಅಲಂಕಾರವಾಗಿ ಉಳ್ಳ **ರಮಾಯಾಃ ರಮಣಂ** = ಮಹಾಲಕ್ಷ್ಮೀದೇವಿಗೆ ಪತಿಯಾದ ಭಗವಂತನನ್ನು **ನತ್ವಾ** = ನಮಸ್ಕರಿಸಿ

**ತತ್ವಪ್ರಕಾಶಿಕಾವ್ಯಾಖ್ಯಾಂ**=ಶ್ರೀಮದಾಚಾರ್ಯರ ತತ್ವಪ್ರಕಾಶಿಕಾ (ಉಪಾಧಿಖಂಡನ) ಎಂಬ ಗ್ರಂಥಕ್ಕೆ ವ್ಯಾಖ್ಯಾನವನ್ನು **ಯಥಾಮತಿ** = ಬುದ್ಧ್ಯನುಸಾರವಾಗಿ **ಕರಿಷ್ಯಾಮಃ** =ಮಾಡುತ್ತೇವೆ.

**-: ವಿಶೇಷವಿಚಾರಗಳು :-**

**ವಿ.ವಿ.1) ''ರಮಾಯಾಃ ರಮಣಂ ನತ್ವಾ''**

ಚಿಕೀರ್ಷಿತವಾದ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತವಾಗುವುದಕ್ಕಾಗಿ ಗ್ರಂಥದ ಆರಂಭದಲ್ಲಿ ಮಂಗಳಾಚರಣೆ ಮಾಡಬೇಕು. ಮಂಗಳಾಚರಣೆ ಎಂದರೆ ಸ್ವಇಷ್ಟದೇವತಾನಮನ. ಟೀಕಾಕೃತ್ಪಾದರು ಭಾಗವತೋತ್ತಮರಾದ್ದರಿಂದ ಸ್ವಇಷ್ಟದೇವತೆಯಾದ ಭಗವಂತನನ್ನು ''ರಮಾಯಾಃ ರಮಣಂ ನತ್ವಾ'' ಎಂಬುದಾಗಿ ನಮಸ್ಕರಿಸುತ್ತಿದ್ದಾರೆ.

ಇಲ್ಲಿ ಭಗವಂತನನ್ನು ನಮಿಸುವ ಉದ್ದೇಶವಷ್ಟೇ ಇದ್ದದ್ದಾದರೆ 'ನಾರಾಯಣಂ ನತ್ವಾ' ಇತ್ಯಾದಿಯಾಗಿ ಹೇಳಬಹುದಾಗಿತ್ತು. ''ರಮಾಯಾಃ ರಮಣಂ ನತ್ವಾ (ಲಕ್ಷ್ಮೀಪತಿಯನ್ನು ನಮಸ್ಕರಿಸಿ)'' ಎಂದೇ ಏಕೆ ಹೇಳಬೇಕು ? ಎಂದರೆ, ಇಲ್ಲೊಂದು ಅಭಿಪ್ರಾಯವಿಶೇಷವಿದೆ. ಆದೇನೆಂದರೆ :- ಗ್ರಂಥದ ಆರಂಭದಲ್ಲಿ ಭಗವಂತನನ್ನು ನಮಿಸುವುದು ಎಷ್ಟು ಆವಶ್ಯಕವೋ ಲಕ್ಷ್ಮೀದೇವಿಯನ್ನು ನಮಿಸುವುದೂ ಅಷ್ಟೇ ಆವಶ್ಯಕವಾಗಿದೆ. ಕಾರಣ - ಗ್ರಂಥವು ವಾಙ್ಮನೋವ್ಯಾಪಾರರೂಪವಾಗಿರುತ್ತದೆ. ಗ್ರಂಥವನ್ನು ಬರೆಯಬೇಕಾದರೆ ವಾಙ್ಮನಸ್ಸುಗಳಿಗೆ ಅಭಿಮಾನಿಯಾದ ದೇವತೆಯ ಅನುಗ್ರಹ ಅತ್ಯಾವಶ್ಯಕ. ವಾಙ್ಮನಸ್ಸುಗಳಿಗೆ ಅಭಿಮಾನಿನಿಯಾದವಳು ಮಹಾಲಕ್ಷ್ಮೀದೇವಿ. ಹಾಗಾಗಿ ಗ್ರಂಥದ ಆರಂಭದಲ್ಲಿ ಸಕಲವಾಙ್ಮನಸ ದೇವತೆಯಾದ ಲಕ್ಷ್ಮೀದೇವಿಯನ್ನೂ ನಮಸ್ಕರಿಸಬೇಕಾದದ್ದು ಅತ್ಯಾವಶ್ಯಕ.

ಆದರೆ ಲಕ್ಷ್ಮೀದೇವಿಯು ನಿತ್ಯಾವಿಯೋಗಿನಿಯಾದ್ದರಿಂದ ಅವಳನ್ನು ಭಗವಂತನಿಂದ ಪ್ರತ್ಯೇಕವಾಗಿ ನಮಸ್ಕರಿಸುವಂತಿಲ್ಲ.

**'' ವಿಷ್ಣುನಾ ಸಹಿತಾ ಧ್ಯಾತಾ ಮಹಾಲಕ್ಷ್ಮೀ ಫಲಪ್ರದಾ ।''**

ಇತ್ಯಾದಿ ಪ್ರಮಾಣಗಳು ಅದನ್ನು ಸ್ಪಷ್ಟಪಡಿಸುತ್ತವೆ. ಹಾಗಾದರೆ ನಮಸ್ಕರಿಸದೇ ಇರುವಂತಿಲ್ಲ. ಪ್ರತ್ಯೇಕವಾಗಿ ನಮಸ್ಕರಿಸುವ ಹಾಗಿಲ್ಲ. ಆದ್ದರಿಂದ ''ವಿಶಿಷ್ಟಸ್ಯ

ಯದ್ ಭವತಿ ವಿಶೇಷಣಸ್ಯಾಪಿ ತದ್ ಭವತಿ'' ಎಂಬ ನಿಯಮದಂತೆ, ಕುಂಡಲ ವಿಶಿಷ್ಟನಾದ ದೇವದತ್ತನು ಬಂದಾಗ ಆಗಮನಕ್ರಿಯೆಯು ವಿಶೇಷಣವಾದ ಕುಂಡಲದಲ್ಲಿಯೂ ಅನ್ವಯಿಸುವಂತೆ, ''ರಮಾಯಾಃ ರಮಣಂ ನತ್ವಾ'' ಎಂಬುದಾಗಿ ಲಕ್ಷ್ಮೀವಿಶಿಷ್ಟನಾದ ಭಗವಂತನಿಗೆ ನಮಸ್ಕಾರ ಸಲ್ಲಿಸಿದರೆ ವಿಶೇಷಣಳಾದ ಲಕ್ಷ್ಮೀದೇವಿಗೂ ನಮಸ್ಕಾರ ಸಲ್ಲುತ್ತದೆ. ವಿಷ್ಣುವಿನಿಂದ ಸಹಿತಳಾಗಿ ನಮಸ್ಕೃತಳಾದದ್ದಕ್ಕೆ ಲಕ್ಷ್ಮೀದೇವಿಯೂ ಸಂತುಷ್ಟಳಾಗಿ ಗ್ರಂಥಕ್ಕೆ ನಿರ್ವಿಘ್ನಸಮಾಪ್ತಿ ಕೊಡುತ್ತಾಳೆ. ಈ ಉದ್ದೇಶದಿಂದ ''ನಾರಾಯಣಂ ನತ್ವಾ'' ಇತ್ಯಾದಿಯಾಗಿ ಹೇಳದೇ ''ರಮಾಯಾಃ ರಮಣಂ ನತ್ವಾ'' ಎಂಬುದಾಗಿ ಟೀಕಾಕೃತ್ಪಾದರು ಹೇಳಿರುವುದು ಅತ್ಯಂತ ಸಮಂಜಸವಾಗಿದೆ ಎಂದು ಅಭಿಪ್ರಾಯ.

**ವಿ.ವಿ. 2) ತತ್ವಪ್ರಕಾಶಿಕಾ ಎಂದು ಹೆಸರು ಏಕೆ ?**

ಶ್ರೀಮದಾಚಾರ್ಯರ ಉಪಾಧಿಖಂಡನ ಗ್ರಂಥಕ್ಕೆ 'ತತ್ವಪ್ರಕಾಶಿಕಾ' ಎಂದು ಇನ್ನೊಂದು ಹೆಸರು. ಶ್ರುತಿ ಹಾಗೂ ತದರ್ಥನಿರ್ಣಾಯಕವಾದ ಬ್ರಹ್ಮಮೀಮಾಂಸಾ ಶಾಸ್ತ್ರಗಳಿಂದ ಪ್ರತಿಪಾದ್ಯವಾದ ಯಾವ ಪರ-ಅಪರ ತತ್ವಗಳಿವೆಯೋ ಅಂತಹ ತತ್ವವನ್ನು ಪ್ರಕಾಶಗೊಳಿಸುತ್ತದೆಯಾದ್ದರಿಂದ ಈ ಗ್ರಂಥಕ್ಕೆ ತತ್ವಪ್ರಕಾಶಿಕಾ ಎಂದು ಹೆಸರು.

**ವಿ.ವಿ. 3) ''ಯಥಾಮತಿ '' ಪದದ ಹಿನ್ನಲೆ**

**''ಆನಂದತೀರ್ಥಭಗವದ್ವಚಸಾಂ ವಿಶಿಷ್ಟ-**
**ವ್ಯಾಖ್ಯಾನಕರ್ಮಣಿ ಸುರಾ ಅಧಿಕಾರಿಣೋಽತ್ರ ।''**

ಎಂಬುದಾಗಿ ವಿಷ್ಣುತತ್ವನಿರ್ಣಯಟೀಕೆಯಲ್ಲಿ ನೀವೇ ಹೇಳಿರುವಂತೆ ಶ್ರೀಮದಾಚಾರ್ಯರ ಗ್ರಂಥಗಳಿಗೆ ವ್ಯಾಖ್ಯಾನ ಮಾಡುವುದಕ್ಕೆ ದೇವತೆಗಳಿಗೇನೇ ಅಧಿಕಾರ ಇರುವುದರಿಂದ, ಉಪಾಧಿಖಂಡನಕ್ಕೆ ವ್ಯಾಖ್ಯಾನ ಮಾಡಲು ನೀವು ಹೇಗೆ ಪ್ರವೃತ್ತರಾದಿರಿ? ಎಂದರೆ, ಅದಕ್ಕಾಗಿ 'ಯಥಾಮತಿ' ಎಂದು ಹೇಳಿದರು ಟೀಕಾಕೃತ್ಪಾದರು. ಇಲ್ಲಿ 'ಯಥಾಮತಿ' ಎಂಬುದಕ್ಕೆ ಮೂರುರೀತಿಯಾಗಿ ಅರ್ಥ ತಿಳಿಯಬಹುದಾಗಿದೆ -

**ಅ)** ಯಥಾಮತಿ = ಮೂಲಗ್ರಂಥಕಾರರಾದ ಶ್ರೀಮದಾಚಾರ್ಯರ ಅಭಿಪ್ರಾಯಕ್ಕೆ ಅನುಗುಣವಾಗಿ ವ್ಯಾಖ್ಯಾನ ಮಾಡುತ್ತೇವೆ.

ಹಿಂದೆ ಎತ್ತಾಗಿದ್ದಾಗ ಶ್ರೀಮದಾಚಾರ್ಯರ ಬಳಿಯೇ ಇದ್ದು ಅವರ ಮುಖಕಮಲದಿಂದಲೇ ಸರ್ವಮೂಲಗ್ರಂಥಗಳನ್ನು ಉಪದೇಶ ಪಡೆದಿದ್ದೇವೆ. ಆಚಾರ್ಯರ ಆಂತರ್ಯವನ್ನು ಚೆನ್ನಾಗಿ ಅರಿತಿದ್ದೇವೆ . ಹೀಗಾಗಿ ಸ್ವಕಪೋಲಕಲ್ಪಿತವಾದ ವಿಷಯಗಳನ್ನು ಬರೆಯುವುದಿಲ್ಲ. ಕಿಂತು ಶ್ರೀಮದಾಚಾರ್ಯರ ಅಭಿಪ್ರಾಯಕ್ಕೆ ಅನುಗುಣವಾಗಿ ವ್ಯಾಖ್ಯಾನ ಮಾಡುತ್ತೇವೆ ಎನ್ನುವುದು ಮೊದಲನೇ ಅರ್ಥ.

**ಆ)** ಯಥಾಮತಿ = ನಮ್ಮ ಬುದ್ಧಿಗೆ ಅನುಸಾರವಾಗಿ ವ್ಯಾಖ್ಯಾನ ಮಾಡುತ್ತೇವೆ.

ಶ್ರೀಮದಾಚಾರ್ಯರು ಸರ್ವಜ್ಞರಾದವರು. ಅವರ ಅರ್ಥಗರ್ಭಿತವಾದ, ಗೂಢಾಭಿಪ್ರಾಯದ ವಾಕ್ಯಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ರುದ್ರಾದಿಗಳು ಸಮರ್ಥರು. ನಮಗೆ ಆ ಸಾಮರ್ಥ್ಯವಿಲ್ಲ. ಆದರೂ ''ವ್ಯಾಖ್ಯಾಸ್ಯತ್ಯೇಷ ಗೋರಾಟ್'' ಎಂಬುದಾಗಿ ಆಚಾರ್ಯರೇ ಅಪ್ಪಣೆ ನೀಡಿದ ಪ್ರಕಾರ, ಹರಿ-ವಾಯುಗಳ ಅನುಗ್ರಹದಿಂದ ನಮ್ಮ ಬುದ್ಧಿಶಕ್ತಿಗೆ ಅನುಗುಣವಾಗಿ ವ್ಯಾಖ್ಯಾನ ಮಾಡುತ್ತೇವೆ ಎನ್ನುವುದು ಎರಡನೇ ಅರ್ಥ.

**ಇ)** ಯಥಾಮತಿ=ಶಿಷ್ಯರ ಬುದ್ಧಿಗೆ ಅನುಗುಣವಾಗಿ ವ್ಯಾಖ್ಯಾನ ಮಾಡುತ್ತೇವೆ.

ಟೀಕಾಕೃತ್ಪಾದರು ಸರ್ವಜ್ಞಕಲ್ಪರಾದವರು (ಸರ್ವಜ್ಞರಿಗಿಂತಲೂ ಈಶತ್ ನ್ಯೂನರಾದವರು). ಉಳಿದ ಎಲ್ಲ ಜ್ಞಾನಿಗಳಿಗಿಂತಲೂ ಅತಿಹೆಚ್ಚು ಜ್ಞಾನ ಉಳ್ಳವರು. ವಿಶ್ವಭಂಡಾರವೇ ಅವರ ಬುದ್ಧಿಯಲ್ಲಿ ಅಡಗಿದೆ. ಹಾಗಾಗಿ ತಮಗೆ ತಿಳಿದದ್ದನ್ನೆಲ್ಲ ಬರೆಯುತ್ತಾ ಹೋದರೆ, ಓದುವ ಮಂದಮತಿಗಳ ಗತಿಯೇನು ? ನಮಗೆ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ ಎಂಬುದಾಗಿ ಅಧ್ಯೇತೃಗಳು ಉದಾಸೀನರಾದಾರು ! ಹಾಗಾಗಿ ನಮಗೆ ತಿಳಿದದ್ದೆಲ್ಲವನ್ನೂ ಹೇಳುವದಿಲ್ಲ. ಕಿಂತು ಓದುವ ಶಿಷ್ಯರ ಬುದ್ಧಿಗೆ ಅನುಗುಣವಾಗಿ, ಶಿಷ್ಯರ ಬುದ್ಧಿಮಟ್ಟಕ್ಕೆ ನಾವು ಇಳಿದು, ಅವರಿಗೆ ಅರ್ಥವಾಗುವ ರೀತಿಯಲ್ಲಿ ತಿಳಿತಿಳಿಯಾಗಿ ಬಿಡಿಸಿ ಬಿಡಿಸಿ ವ್ಯಾಖ್ಯಾನ ಮಾಡುತ್ತೇವೆ ಎನ್ನುವುದು ಮೂರನೇ ಅರ್ಥ.

**ವಿ.ವಿ. 4) 'ಗುಣಮಾಣಿಕ್ಯಮಂಡನಂ' ಏಕೆ ?**

ಮಂಗಳಾಚರಣೆ ಎಂದರೆ ಸ್ವಇಷ್ಟದೇವತಾನಮನ. ಅಂದಮೇಲೆ ಉಳಿದ ಅನೇಕ ಜನ ದೇವತೆಗಳಿರುವಾಗ ಅವರಲ್ಲಿಯೇ ಯಾರಾದರೂ ಒಬ್ಬರನ್ನು ನಮಸ್ಕರಿಸಬಹುದಿತ್ತಲ್ಲವೇ ? ಅವರೆಲ್ಲರನ್ನು ಬಿಟ್ಟು ರಮಾರಮಣನಾದ

ನಾರಾಯಣನನ್ನೇ ನಮಸ್ಕರಿಸುವುದು ಏಕೆ ? ಎಂದು ಶಂಕೆ ಬಂದರೆ, ಅದಕ್ಕೆ ಉತ್ತರರೂಪವಾಗಿ ''ಗುಣಮಾಣಿಕ್ಯಮಂಡನಂ'' ಎಂದು ವಿಶೇಷಣ ನೀಡಿದ್ದಾರೆ.

ನಿಜವೇ, ಅನೇಕಜನ ದೇವತೆಗಳಿದ್ದಾರೆ. ಆದರೆ ಅವರಾರೂ ಗುಣಪೂರ್ಣರಲ್ಲ. ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಗುಣಗಳುಳ್ಳವರಾಗಿದ್ದರೂ ಭಗವಂತನಂತೆ ಅನಂತಗುಣಪೂರ್ಣರಲ್ಲ. ಹಾಗಾಗಿ ಅವರಾರೂ ನಮ್ಯರಾಗಿಲ್ಲ. ರಮಾರಮಣನಾದ ಭಗವಂತ ಒಬ್ಬನೇ ಅನಂತಗುಣಪೂರ್ಣನಾಗಿರುವುದರಿಂದ ಅವನೇ ನಮ್ಯನಾಗಿದ್ದಾನೆ ಎಂದು ತಿಳಿಸುತ್ತಿರುವುದರಿಂದ ''ಗುಣಮಾಣಿಕ್ಯಮಂಡನಂ'' ಎಂಬ ವಿಶೇಷಣ ಸಾರ್ಥಕ.

**ವಿ.ವಿ.5) 'ಕರಿಷ್ಯಾಮಃ' ಎಂದರು. 'ಕರಿಷ್ಯಾಮಹೇ' ಎನ್ನಲಿಲ್ಲ !**

ಉಪಾಧಿಖಂಡನ ಗ್ರಂಥಕ್ಕೆ ವ್ಯಾಖ್ಯಾನ ಬರೆಯಲು ಹೊರಟ ಟೀಕಾಕೃತ್ಪಾದರು 'ತತ್ವಪ್ರಕಾಶಿಕಾವ್ಯಾಖ್ಯಾಂ ಕರಿಷ್ಯಾಮಃ' ಎಂದು ಶಬ್ದಪ್ರಯೋಗ ಮಾಡುತ್ತಿದ್ದಾರೆ. 'ಕರಿಷ್ಯಾಮಃ' ಎನ್ನುವುದು ಪರಸ್ಮೈಪದವಾಗಿದೆ. ಯಾವಾಗಲೂ ಪರಸ್ಮೈಪದವು ಪರಸಮವೇತಕ್ರಿಯಾಫಲವನ್ನು ತಿಳಿಸುತ್ತದೆ. (ಮತ್ತೊಬ್ಬರಿಗಾಗಿ = ಮತ್ತೊಬ್ಬರಿಗೆ ಫಲ ಸಿಗುವುದಕ್ಕಾಗಿ ಮಾಡುತ್ತಿರುವುದು ಎಂದು ತಿಳಿಸುತ್ತದೆ.) ಅಂತಹ ಪರಸ್ಮೈಪದವನ್ನು ಪ್ರಯೋಗಿಸುವ ಮೂಲಕ ''ಶಿಷ್ಯರ ಮೇಲೆ ಅನುಗ್ರಹ ಮಾಡಬೇಕೆಂಬ ಇಚ್ಛೆಯಿಂದ ಟೀಕಾಗ್ರಂಥನಿರ್ಮಾಣ ಮಾಡುತ್ತಿದೇವೆ'' ಎಂಬುದನ್ನು ಸೂಚಿಸುತ್ತಿದ್ದಾರೆ ಟೀಕಾಕೃತ್ಪಾದರು.

**ಅವತಾರಿಕೆ :** ಶ್ರೀಮದಾಚಾರ್ಯರು ರಚಿಸಿರುವ 'ಉಪಾಧಿಖಂಡನ' ಎಂಬ ಪ್ರಕರಣವು ವಿಷಯ-ಪ್ರಯೋಜನಾದಿಗಳಿಂದ ರಹಿತವಾದ್ದರಿಂದ ಆರಂಭಣೀಯವಾಗಿಲ್ಲ (ಈ ಗ್ರಂಥವು ಫಲಸಾಧನವಾಗಿದೆ ಎಂಬ ಸರಿಯಾದ ತಿಳುವಳಿಕೆಯಿಂದ ಪ್ರೇಕ್ಷಾವಂತರು ನಡೆಸುವ ಶ್ರವಣಾದಿಗಳಿಗೆ ವಿಷಯವಾಗಿಲ್ಲ) ಎಂದು ಶಂಕೆ ಬಂದರೆ, ಅದಕ್ಕಾಗಿ ಇದು ಪ್ರಕರಣವಾಗಿದೆ, ಪ್ರಕರಣವು ಶಾಸ್ತ್ರೈಕದೇಶಸಂಬಂಧಿಯಾಗಿರುತ್ತದೆ, ಹೀಗಾಗಿ ಶಾಸ್ತ್ರಕ್ಕೆ ಯಾವುದು ವಿಷಯಾದಿಗಳು ಇವೆಯೋ ಅದೇ ವಿಷಯಾದಿಗಳೇ ಈ ಪ್ರಕರಣಗ್ರಂಥಕ್ಕೂ ಅನ್ವಯಿಸುತ್ತವೆ ಎಂಬ ಅಭಿಪ್ರಾಯದಿಂದ ಶಾಸ್ತ್ರಕ್ಕೆ ವಿಷಯ-ಪ್ರಯೋಜನಾದಿಗಳನ್ನು ಸಮರ್ಥಿಸುತ್ತಾರೆ - ''ಪರಮಾತ್ಮನೋಽ-ತ್ಯಂತಭಿನ್ನಸ್ಯ'' ಇತ್ಯಾದಿವಾಕ್ಯಗಳಿಂದ.

**ಟೀಕಾ :- ಪರಮಾತ್ಮನೋಽತ್ಯಂತಭಿನ್ನಸ್ಯ[1] ಸ್ವತಶ್ಚಿದಾನಂದಾದ್ಯಾತ್ಮಕಸ್ಯಾಪಿ ಜೀವಸ್ಯ [2]ಅನಾದ್ಯವಿದ್ಯಾಕಾಮಕರ್ಮಾದಿನಿಮಿತ್ತೋಽಯಂ ಪರಮಾರ್ಥ ಏವ ಅನ್ಯಥಾಕಾರೋ[3] ದುಃಖಾದ್ಯನರ್ಥೋ ನ ಪರಮೇಶ್ವರಪ್ರಸಾದಾದೃತೇ ಅಪಗಚ್ಛತಿ । ನ ಚ ಅಸಾಕ್ಷಾತ್ಕೃತೋಽಸೌ ಪ್ರಸೀದತಿ । ನ ಚ [4]ಅವಿದಿತಸ್ವರೂಪಃ ಶಕ್ಯತೇ ಸಾಕ್ಷಾತ್ಕರ್ತುಮಿತಿ ಸಕಲಗುಣಾಕಾರತಯಾ ನಿಶ್ಶೇಷದೋಷಗಂಧ-ವಿಧುರತಯಾ ಚ ತಂ ಪ್ರತಿಪಾದಯಿತುಮಶೇಷಾಮ್ನಾಯಾಃ ಪ್ರವರ್ತಂತೇ । [5]ತದುಪಕರಣಭೂತಾ ಚ ಬ್ರಹ್ಮಮೀಮಾಂಸೇತಿ ಪರಮಾರ್ಥಃ ।**

**ಅನುವಾದ :-** ಪರಮಾತ್ಮನಿಂದ ಅತ್ಯಂತಭಿನ್ನನಾದ, ಸ್ವಾಭಾವಿಕವಾಗಿಯೇ ಜ್ಞಾನ-ಆನಂದಾದಿಸ್ವರೂಪನಾದ ಜೀವನಿಗೆ ಅನಾದಿಯಾದ ಅವಿದ್ಯಾ (ಭಾವರೂಪ ಅಜ್ಞಾನ) ಕಾಮ (ರಾಗ), ಕರ್ಮ (ಕಾಮ್ಯ ಹಾಗೂ ನಿಷಿದ್ಧ ಕರ್ಮಗಳು), ಮೋಹಾದಿಗಳ ನಿಮಿತ್ತವಾಗಿ ಬರುವ, ಪಾರಮಾರ್ಥಿಕವೇ ಆದ, ಅನ್ಯಥಾಕಾರವಾದ (ಇದ್ದ ಸ್ವರೂಪಕ್ಕಿಂತಲೂ ವ್ಯತಿರಿಕ್ತವಾಗಿ ತೋರುವ ಆಕಾರ) ದುಃಖಾದಿ ಅನರ್ಥವು ಪರಮಾತ್ಮನ ಪ್ರಸಾದವಿಲ್ಲದೇ ನಿವೃತ್ತವಾಗುವುದಿಲ್ಲ. ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಳ್ಳದಿದ್ದರೆ ಅವನು ಪ್ರಸನ್ನನಾಗುವುದಿಲ್ಲ. (ಪ್ರಸಾದಕ್ಕೆ ಸಾಕ್ಷಾತ್ಕಾರವು ಕಾರಣ.) ಶ್ರವಣಾದಿಗಳಿಂದ ಪರೋಕ್ಷವಾಗಿ ಪರಮಾತ್ಮನ ಸ್ವರೂಪ ತಿಳಿಯದ ಹೊರತು ಅವನ ಸಾಕ್ಷಾತ್ಕಾರ ಆಗುವುದಿಲ್ಲ. (ಸಾಕ್ಷಾತ್ಕಾರಕ್ಕೆ ಶ್ರವಣಾದಿಜನ್ಯ ಪರೋಕ್ಷಜ್ಞಾನ ಕಾರಣ.)

---

1. ಜೀವಪರಮಾತ್ಮನೋಃ ಭೇದಾಭೇದಾವಿತಿ ಭಾಸ್ಕರಃ । ತನ್ನಿರಾಕರಣಾಯಾಹ - ಅತ್ಯಂತಭಿನ್ನಸ್ಯೇತಿ ॥ (ಶ್ರೀನಿ)
2. ಅವಿದ್ಯಾ ಭಾವರೂಪಾ । ಕಾಮೋ ರಾಗಃ । ಕರ್ಮ ಕಾಮ್ಯಂ ನಿಷಿದ್ಧಂ ಚ । ಆದಿಪದೇನ ಮೋಹಗ್ರಹಣಮ್ । ಅವಿದ್ಯಾಯಾ ಅನಾದಿತ್ವಂ ಸ್ವರೂಪೇಣ । ಕಾಮಾದೇಸ್ತು ಪ್ರವಾಹತ ಇತಿ ದ್ರಷ್ಟವ್ಯಮ್ ॥ (ಶ್ರೀನಿ)
3. ಅನ್ಯಥಾಕಾರಃ ಸ್ವರೂಪಾಪೇಕ್ಷಯಾ ಅನ್ಯಥಾ ಪ್ರತೀಯಮಾನಃ ಆಕಾರಃ । (ಶ್ರೀನಿ)
4. ಅವಿದಿತೇತಿ । ಶ್ರವಣಾದಿನಾ ಪರೋಕ್ಷತ ಇತ್ಯರ್ಥಃ । (ಶ್ರೀನಿ)
5. ತದುಪಕರಣೇತಿ । ಅರ್ಥನಿರ್ಣಯೇತಿಕರ್ತವ್ಯತಾರೂಪೇತ್ಯರ್ಥಃ । ವೇದಾರ್ಥ-ನಿರ್ಣಯಕರಣೇಭೂತನ್ಯಾಯಗ್ರಥನಾತ್ಮಕತ್ವಾತ್ ಬ್ರಹ್ಮಮೀಮಾಂಸಾಯಾ ಇತಿ ಭಾವಃ । (ಶ್ರೀನಿ)

ಆದ್ದರಿಂದ ಪರಮಾತ್ಮನು ಸಕಲಗುಣಗಳಿಗೆ ಖನಿ ಆಗಿದ್ದಾನೆ, ದೋಷದ ಲೇಶವೂ ಉಳಿಯದೇ ಸಕಲದೋಷವಿಧುರನೂ ಆಗಿದ್ದಾನೆ ಎಂಬುದಾಗಿ ಪ್ರತಿಪಾದಿಸಲು ಎಲ್ಲ ವೇದಗಳೂ ಪ್ರವೃತ್ತವಾಗಿವೆ. ವೇದಗಳಿಗೆ ಉಪಕರಣ ಭೂತವಾದ (ವೇದಾರ್ಥ-ನಿರ್ಣಾಯಕವಾದ) ಬ್ರಹ್ಮಮೀಮಾಂಸಾಶಾಸ್ತ್ರವೂ ಪ್ರವೃತ್ತವಾಗಿದೆ ಎನ್ನುವುದು ಸೈದ್ಧಾಂತಿಕ ರಹಸ್ಯ ತತ್ವವಾಗಿದೆ.

**ವಿವರಣೆ :-** ಯಾವುದೇ ಒಂದು ಗ್ರಂಥ ಆರಂಭಣೀಯ ಎಂದಾಗಬೇಕಾದರೆ ಆ ಗ್ರಂಥಕ್ಕೆ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧ ಎಂಬ ಅನುಬಂಧ ಚತುಷ್ಟಯ ಇರಲೇಬೇಕು. ಪ್ರಕೃತದಲ್ಲಿ ಶ್ರೀಮದಾಚಾರ್ಯರು ರಚಿಸಿರುವ 'ಉಪಾಧಿಖಂಡನ' ಎಂಬ ಪ್ರಕರಣವೂ ಅಧಿಕಾರಿ ಮೊದಲಾದ ಅನುಬಂಧಚತುಷ್ಟಯ ಉಳ್ಳದ್ದಾಗಿದ್ದರೆ ಆಗ ಅದು ಆರಂಭಣೀಯವಾಗುತ್ತಿತ್ತು . ಆದರೆ ಈ ಗ್ರಂಥಕ್ಕೆ ಅಧಿಕಾರಿ ಮೊದಲಾದ ಅನುಬಂಧಚತುಷ್ಟಯವಿಲ್ಲದ ಕಾರಣ ಇದು ಆರಂಭಣೀಯವೇ ಆಗಿಲ್ಲ ಎಂಬುದಾಗಿ ಶಂಕೆ ಬಂದರೆ, ಇದಕ್ಕೆ ಉತ್ತರರೂಪವಾಗಿ ''ಆಚಾರ್ಯರ ಈ ಗ್ರಂಥವು ಪ್ರಕರಣವಾಗಿದೆ. ಪ್ರಕರಣವು ಶಾಸ್ತ್ರೈಕದೇಶಸಂಬಂಧಿಯಾಗಿರುತ್ತದೆ. ಹೀಗಾಗಿ ಶಾಸ್ತ್ರಕ್ಕೆ ಯಾವ ವಿಷಯಾದಿಗಳು ನಿರೂಪಿತವಾಗಿವೆಯೋ ಅದೇ ವಿಷಯಾದಿಗಳೇ ನಮ್ಮ ಪ್ರಕರಣಗ್ರಂಥಕ್ಕೂ ಸಂಬಂಧಿಸಿವೆ. ಆದ್ದರಿಂದ ಆಚಾರ್ಯರ ಉಪಾಧಿಖಂಡನ ಗ್ರಂಥವು ಆರಂಭಣೀಯವೇ ಆಗಿದೆ '' ಎಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದಾರೆ ಟೀಕಾಕೃತ್ಪಾದರು.

ಹಾಗಾದರೆ ಶಾಸ್ತ್ರಕ್ಕೆ ನಿರೂಪಿತವಾದ ಆ ವಿಷಯಾದಿಗಳು ಯಾವುವು ? ಎಂದು ಪ್ರಶ್ನೆ ಬಂದರೆ, ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಪರಾಭಿಪ್ರೇತವಾದ (ಪರರು ಹೇಳುವ) ವಿಷಯಾದಿಗಳನ್ನು ನಿರಾಕರಿಸುವ ಮೂಲಕ ಸ್ವಾಭಿಪ್ರೇತವಾದ ವಿಷಯಾದಿಗಳನ್ನು ಸಮರ್ಥಿಸುವುದಕ್ಕಾಗಿ ಈ ಪ್ರಕರಣ ಪ್ರವೃತ್ತವಾಗಿದೆ ಎಂಬ ಅಭಿಪ್ರಾಯದಿಂದ, ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಪರಾಭಿಪ್ರೇತವಾದ ವಿಷಯಾದಿಗಳನ್ನು ತಿಳಿಸುವ ಮೊದಲು ಸ್ವಾಭಿಪ್ರೇತವಾದ (ನಾವು ಹೇಳುವ) ವಿಷಯಾದಿಗಳನ್ನು ತೋರಿಸುತ್ತಾರೆ - ''ಪರಮಾತ್ಮನೋऽತ್ಯಂತಭಿನ್ನಸ್ಯ'' ಇತ್ಯಾದಿವಾಕ್ಯಗಳಿಂದ.

(ಸ್ವಾಭಿಪ್ರೇತವಾದ ವಿಷಯಾದಿಗಳ ನಿರೂಪಣೆ ಮುಂದೆ ಇದೆ.)

## ಶ್ರೀನಿವಾಸತೀರ್ಥರ ವ್ಯಾಖ್ಯಾನ ವಿಶೇಷಾಂಶಗಳು

**ಅ) 'ಅತ್ಯಂತಭಿನ್ನಸ್ಯ' ಎಂದೇಕೆ ?**

ಟೀಕೆಯಲ್ಲಿ 'ಪರಮಾತ್ಮನೋ ಭಿನ್ನಸ್ಯ' ಎಂದಷ್ಟೇ ಹೇಳಿದರೆ ಸಾಕಲ್ಲ ? 'ಅತ್ಯಂತಭಿನ್ನಸ್ಯ' ಎಂದೇಕೆ ಹೇಳಿದರು ? ಎಂದರೆ, ಕೇವಲ ಭಿನ್ನಸ್ಯ ಎಂದಷ್ಟೇ ಹೇಳಿದರೆ ಅದು ಸಮಜಸವಾಗುವುದಿಲ್ಲ. ಏಕೆಂದರೆ, ಜೀವ-ಪರಮಾತ್ಮರಲ್ಲಿ ಭೇದ-ಅಭೇದ ಎರಡೂ ಇವೆ ಎಂಬುದಾಗಿ ಭಾಸ್ಕರಾಚಾರ್ಯರ ಮತವಾಗಿದೆ. ಜೀವನಿಗೆ ಪರಮಾತ್ಮನಿಂದ ಭೇದದ ಜೊತೆಗೆ ಅಭೇದವನ್ನೂ ಅವರು ಒಪ್ಪಿದ್ದರಿಂದ, ಅಂತಹ ಅಭೇದವಿಶಿಷ್ಟಭೇದ ಉಳ್ಳ ಜೀವನೂ ಸ್ವಮತದಲ್ಲಿ ವಿಷಯನಾಗಬೇಕಾಗುತ್ತದೆ. ಅದಕ್ಕಾಗಿ ಕೇವಲ 'ಭಿನ್ನಸ್ಯ' ಎಂದು ಹೇಳದೇ 'ಅತ್ಯಂತಭಿನ್ನಸ್ಯ ' ಎಂದಿದ್ದಾರೆ. 'ಅತ್ಯಂತ'ಪದದಿಂದ ಅಭೇದವನ್ನು ವ್ಯಾವರ್ತನ ಮಾಡಿ, ಕೇವಲ ಭೇದ ಉಳ್ಳ ಜೀವ ಎಂದು ಅಭಿಪ್ರಾಯವಿರುವುದರಿಂದ ಅತಿಪ್ರಸಂಗ ಇಲ್ಲ ಎಂದು ಭಾವ.

**ಆ) ಅವಿದ್ಯಾ-ಕಾಮಾದಿಗಳು ಅನಾದಿಯಾಗಿವೆ**

'ಅನಾದ್ಯವಿದ್ಯಾಕಾಮಕರ್ಮಾದಿನಿಮಿತ್ತಃ' ಎನ್ನುವಲ್ಲಿ ಅನಾದಿತ್ವವು ಅವಿದ್ಯೆಗೆ ಹಾಗೂ ಕಾಮಾದಿಗಳಿಗೆ ಎಲ್ಲದಕ್ಕೂ ವಿಶೇಷವಾಗಿದೆ. ಆದರೆ ಅವಿದ್ಯೆಯು ಸ್ವರೂಪೇಣ ಅನಾದಿಯಾಗಿದೆ, ಕಾಮಾದಿಗಳು ಪ್ರವಾಹತಃ ಅನಾದಿಯಾಗಿವೆ ಎಂಬುದಾಗಿ ವ್ಯತ್ಯಾಸ ತಿಳಿಯಬೇಕಷ್ಟೇ.

**ಇ) ಪರಮಾರ್ಥ ಏವ ಅನ್ಯಥಾಕಾರಃ**

ಶುಕ್ತಿಯಲ್ಲಿ ತೋರುವ ರಜತಾದಿ ಅನ್ಯಥಾಕಾರವು ಮಿಥ್ಯೆಯಾದ್ದರಿಂದ ಅದರ ನಿವೃತ್ತಿಗೆ ಯಾರ ಪ್ರಸಾದವೂ ಅಪೇಕ್ಷಿತವಾಗಿಲ್ಲ ಹೇಗೋ ಹಾಗೆ ದುಃಖಾದ್ಯನರ್ಥ-ರೂಪ ಅನ್ಯಥಾಕಾರವೂ ಮಿಥ್ಯೆಯಾದ್ದರಿಂದ ಅದು ಸ್ವತಃ ಏವ ನಿವೃತ್ತವಾಗುತ್ತದೆ. ಅದರ ನಿವೃತ್ತಿಗೆ ಪರಮೇಶ್ವರನ ಪ್ರಸಾದದ ಅಪೇಕ್ಷೆ ಇಲ್ಲ. ಅಂದಮೇಲೆ ''ದುಃಖಾದ್ಯನರ್ಥೋ ನ ಪರಮೇಶ್ವರಪ್ರಸಾದಾದೃತೇ ಅಪಗಚ್ಛತಿ'' ಎಂದು ಹೇಳಿದ್ದು ಸರಿಯಲ್ಲ ? ಎಂದು ಶಂಕೆ ಬಂದರೆ, ಅದಕ್ಕಾಗಿ ಟೀಕೆಯಲ್ಲಿ ''ಪರಮಾರ್ಥ ಏವ ಅನ್ಯಥಾಕಾರಃ'' ಎಂದು ಹೇಳಿದ್ದಾರೆ. ದುಃಖಾದ್ಯನರ್ಥರೂಪ ಅನ್ಯಥಾಕಾರವು ರಜತಾದಿಅನ್ಯಥಾಕಾರದಂತೆ ಮಿಥ್ಯೆಯಾಗಿಲ್ಲ. ಕಿಂತು ಪಾರಮಾರ್ಥಿಕಸತ್ಯವೇ ಆಗಿದೆ. ಅಂತಹ ಸತ್ಯವಾದ ದುಃಖಾದ್ಯನರ್ಥರೂಪ ಅನ್ಯಥಾಕಾರವು ನಿವೃತ್ತವಾಗ-ಬೇಕಾದರೆ ಪರಮೇಶ್ವರಪ್ರಸಾದದ ಅಪೇಕ್ಷೆ ಇದ್ದೇ ಇದೆ ಎಂದು ಅಭಿಪ್ರಾಯ.

**ಈ) 'ಅಶೇಷಾಮ್ನಾಯಾಃ ಪ್ರವರ್ತಂತೇ' ಸರಿಯೇ ?**

ಇತರ ವೇದಭಾಗಗಳು ಭಗವಂತನನ್ನು ಪ್ರತಿಪಾದಿಸಲು ಪ್ರವೃತ್ತವಾದರೂ ಕರ್ಮಕಾಂಡವು ಮಾತ್ರ ಅದರ ಹೆಸರೇ ತಿಳಿಸುವಂತೆ ಕರ್ಮಗಳನ್ನು ಪ್ರತಿಪಾದಿಸಲು ಪ್ರವೃತ್ತವಾದದ್ದು. ಅಂದಮೇಲೆ ''ತಂ ಪ್ರತಿಪಾದಯಿತುಂ ಅಶೇಷಾಮ್ನಾಯಾಃ ಪ್ರವರ್ತಂತೇ'' (ಭಗವಂತನನ್ನು ಪ್ರತಿಪಾದಿಸಲು ಎಲ್ಲ ವೇದಗಳೂ ಪ್ರವೃತ್ತವಾಗಿವೆ) ಎಂದು ಹೇಗೆ ಹೇಳಿದರು ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ -

**''ಬ್ರಾಹ್ಮಣೋಪನಿಷನ್ಮಂತ್ರಭೇದಾ ವೇದಗಿರೋಽಖಿಲಾಃ ।''**

ಎಂಬುದಾಗಿ ಹೇಳಿದಂತೆ ಕರ್ಮಕಾಂಡವೂ ಸಹ ಈಶ್ವರಜ್ಞಾನಕ್ಕೆ ಹೇತುಭೂತವಾದ ಕರ್ಮಗಳನ್ನು ಪ್ರತಿಪಾದಿಸುವುದರಿಂದ ಅದಕ್ಕೂ ಬ್ರಹ್ಮನಲ್ಲಿಯೇ ಮಹಾತಾತ್ಪರ್ಯವಿದೆ. ಆದ್ದರಿಂದ 'ಎಲ್ಲ ವೇದಗಳೂ ಬ್ರಹ್ಮನನ್ನು ತಿಳಿಸಲು ಹೊರಟಿವೆ' ಎಂದು ಹೇಳಿದ್ದು ಸಮಂಜಸವೇ ಆಗಿದೆ.

**ಉ) ತದುಪಕರಣಭೂತಾ ಬ್ರಹ್ಮಮೀಮಾಂಸಾ**

**ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರಣಾತ್ಮನಾ ।**
**ಇತಿಕರ್ತವ್ಯತಾಭಾಗಂ ಮೀಮಾಂಸಾ ಪೂರಯಿಷ್ಯತಿ ॥**

''ವೇದರೂಪವಾದ ಕರಣದಿಂದ ಧರ್ಮವು ಚೆನ್ನಾಗಿ ತಿಳಿಯಲ್ಪಡುವಾಗ ಮಧ್ಯದಲ್ಲಿ ಇತಿಕರ್ತವ್ಯತಾಭಾಗವನ್ನು (ಅರ್ಥನಿರ್ಣಾಯಕಸ್ಥಾನವನ್ನು ) ಮೀಮಾಂಸಾಶಾಸ್ತ್ರ ತುಂಬುತ್ತದೆ'' ಎಂಬುದಾಗಿ ಹೇಳಿದಂತೆ, ಬ್ರಹ್ಮಮೀಮಾಂಸಾ-ಶಾಸ್ತ್ರವು ವೇದಗಳಿಗೆ ಉಪಕರಣಭೂತವಾಗಿದೆ ಅಂದರೆ ಅರ್ಥನಿರ್ಣಯ ಮಾಡುವ ಮೂಲಕ ಸಹಕಾರಿಯಾಗಿದೆ ಎಂದು ಅರ್ಥ. ವೇದಾರ್ಥನಿರ್ಣಾಯಕನ್ಯಾಯಗ್ರಂಥ-ನಾತ್ಮಕವಾಗಿದೆ ಬ್ರಹ್ಮಮೀಮಾಂಸಾಶಾಸ್ತ್ರ ಎಂದು ಅಭಿಪ್ರಾಯ.

## ಆಚಾರ್ಯರಿಗೆ ಅಭಿಮತವಾದ ಪ್ರಮೇಯಗಳು (ಪರಶುವ್ಯಾಖ್ಯಾ)

★ ಜೀವ - ಪರಮಾತ್ಮರಲ್ಲಿ ಅತ್ಯಂತಭೇದ ಇದೆ.

★ ಮುಕ್ತಿಯೋಗ್ಯರಾದ ಜೀವರು ಸ್ವಾಭಾವಿಕವಾಗಿಯೇ ಜ್ಞಾನಾನಂದಾದಿ-ಸ್ವರೂಪರಾಗಿದ್ದಾರೆ.

★ ಅವಿದ್ಯಾ-ಕಾಮಕರ್ಮಾದಿಗಳಿಂದ ಜನ್ಯವಾದ, ಜೀವನಿಗೆ ತೋರುವ, ಅನ್ಯಥಾಕಾರವಾದ (ಜೀವನ ಸ್ವರೂಪವಲ್ಲದ) ದುಃಖಾದ್ಯನರ್ಥವು ಪಾರಮಾರ್ಥಿಕಸತ್ಯವೇ ಆಗಿದೆ.

★ ಸತ್ಯವಾದ ದುಃಖಾದ್ಯನರ್ಥವು ಈಶ್ವರಪ್ರಸಾದಿಂದ ನಿವರ್ತ್ಯವಾದದ್ದಾಗಿದೆ.

★ ಈಶ್ವರಪ್ರಸಾದವು ಈಶ್ವರನ ಸಾಕ್ಷಾತ್ಕಾರದಿಂದ ಸಾಧ್ಯವಾಗಿದೆ.

★ ಈಶ್ವರನ ಸಾಕ್ಷಾತ್ಕಾರವು ಶ್ರವಣಾದಿರೂಪ ಪರೋಕ್ಷಜ್ಞಾನಸಾಧ್ಯವಾಗಿದೆ.

★ ವೇದಗಳು ಸಕಲಗುಣಾಕರನೆಂದೂ, ನಿಃಶೇಷದೋಷಗಂಧವಿಧುರನೆಂದೂ ಬ್ರಹ್ಮನನ್ನು ಪ್ರತಿಪಾದಿಸುತ್ತವೆ.

★ ಬ್ರಹ್ಮಮೀಮಾಂಸಾಶಾಸ್ತ್ರವು ವೇದಾರ್ಥನಿರ್ಣಾಯಕವಾಗಿದೆ.

## ಸ್ವಾಭಿಮತವಾದ ವಿಷಯಾದಿಗಳು (ಪರಶುವ್ಯಾಖ್ಯಾ)

'ಪರಮಾತ್ಮನೋಽತ್ಯಂತಭಿನ್ನಸ್ಯ' ಇತ್ಯಾದಿಯಾಗಿ 'ಇತಿ ಪರಮಾರ್ಥಃ' ಇತ್ಯಂತವಾದ ವಾಕ್ಯಗಳಿಂದ ಟೀಕಾಕೃತ್ಪಾದರು ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಸ್ವಮತರೀತ್ಯಾ ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧಗಳನ್ನು ತಿಳಿಸುತ್ತಿದ್ದಾರೆ.

**ವಿಷಯ :-** ವೇದ-ತನ್ಮೀಮಾಂಸಾಶಾಸ್ತ್ರಗಳಿಗೆ ಸಕಲಗುಣಾಕರನಾದ, ನಿಃಶೇಷದೋಷಗಂಧವಿಧುರನಾದ ಪರಮಾತ್ಮನು ವಿಷಯ.

**ಅಧಿಕಾರಿ :-** ಬ್ರಹ್ಮನಿಂದ ಅತ್ಯಂತಭಿನ್ನನಾದ, ಮುಮುಕ್ಷುವಾದ (ದುಃಖಾದ್ಯನರ್ಥಗಳನ್ನು ಕಳೆದುಕೊಳ್ಳಬೇಕೆಂಬ ಇಚ್ಛೆ ಉಳ್ಳ) ಸಜ್ಜೀವನು ಅಧಿಕಾರಿ.

**ಪ್ರಯೋಜನ :-** ದುಃಖಾದ್ಯನರ್ಥಗಳ ನಿವೃತ್ತಿ ಹಾಗೂ ಸ್ವರೂಪಾನಂದಾವಾಪ್ತಿ ಪ್ರಯೋಜನ. (ಶ್ರೀನಿವಾಸತೀರ್ಥರ ಟಿಪ್ಪಣೀ ಪ್ರಕಾರ - ಅಂತಹ ಅನಂತಗುಣಪೂರ್ಣನಾದ, ನಿರ್ದೋಷನಾದ ಭಗವಂತನ ಜ್ಞಾನ ಹಾಗೂ ಮೋಕ್ಷವು ಪ್ರಯೋಜನವಾಗಿದೆ.)

**ಸಂಬಂಧ :-** ಯಥಾಯೋಗ್ಯವಾಗಿ ಸಂಬಂಧ.

ಅಧಿಕಾರಿ-ವಿಷಯಗಳಿಗೆ ಜ್ಞಾತೃ-ಜ್ಞೇಯಭಾವ ಸಂಬಂಧ.
ಅಧಿಕಾರಿ-ಪ್ರಯೋಜನಗಳಿಗೆ ಪ್ರಾಪ್ತ-ಪ್ರಾಪ್ಯಭಾವ ಸಂಬಂಧ.
ಪ್ರಯೋಜನ-ವಿಷಯಗಳಿಗೆ ಪ್ರಾಪ್ಯ-ಪ್ರಾಪಕಭಾವ ಸಂಬಂಧ.

ಈ ರೀತಿಯಾಗಿ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಅಧಿಕಾರಿ ಮೊದಲಾದ ಅನುಬಂಧಚತುಷ್ಟಯ ಇರುವುದರಿಂದ, ಅದೇ ಅಧಿಕಾರಿ ಮೊದಲಾದ ಅನುಬಂಧಚತುಷ್ಟಯವೇ ಶಾಸ್ತ್ರೈಕದೇಶಸಂಬಂಧಿಯಾದ ಈ ಪ್ರಕರಣಗ್ರಂಥಕ್ಕೂ ಇರುವುದರಿಂದ, ಆಚಾರ್ಯರು ರಚಿಸಿರುವ 'ಉಪಾಧಿಖಂಡನ' ಎಂಬ ಗ್ರಂಥವು ಆರಂಭಣೀಯವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ಈ ರೀತಿಯಾಗಿ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಸ್ವಾಭಿಪ್ರೇತವಾದ ವಿಷಯಾದಿಗಳನ್ನು ನಿರೂಪಿಸಿ, ಮುಂದೆ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಪರಾಭಿಪ್ರೇತವಾದ (ಪರರು ಹೇಳುವ) ವಿಷಯಾದಿಗಳನ್ನು ನಿರೂಪಿಸುತ್ತಾರೆ -

**ಟೀಕಾ :- ಅಪರೇ ತು ಸ್ವತಃ ಪರಮಾತ್ಮಭೂತಸ್ಯೈವ ಜೀವಸ್ಯ ಅಜ್ಞಾನಾದಿನಿಮಿತ್ತೋಽಯಮಪರಮಾರ್ಥ ಏವಾನರ್ಥೋಽದ್ವೈತಜ್ಞಾನೈಕ-ನಿಬರ್ಹಣೀಯ ಇತ್ಯತೋಽಸ್ಯಾನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವ ವಿದ್ಯಾಪ್ರತಿಪತ್ತಯೇ ಸರ್ವೇ ವೇದಾಂತಾ ಆರಭ್ಯಂತೇ । ತದಿತಿಕರ್ತವ್ಯತಾರೂಪಾ ಬ್ರಹ್ಮಮೀಮಾಂಸಾ ಚೇತಿ ಮನ್ಯಂತೇ ।**

**ಅನುವಾದ :-** ಇನ್ನು ಮಾಯಾವಾದಿಗಳು "ಜೀವನು ಸ್ವಾಭಾವಿಕವಾಗಿಯೇ ಪರಬ್ರಹ್ಮನಿಂದ ಅಭಿನ್ನನಾಗಿದ್ದಾನೆ. ಅಂತಹ ಬ್ರಹ್ಮನಿಂದ ಅಭಿನ್ನನಾದ ಜೀವನಿಗೆ ಅಜ್ಞಾನಾದಿನಿಮಿತ್ತವಾಗಿ (ಐಕ್ಯಾಜ್ಞಾನಾದಿನಿಮಿತ್ತವಾಗಿ) ಅಪರಮಾರ್ಥವೇ ಆದ (ಮಿಥ್ಯಾಭೂತವೇ ಆದ) ದುಃಖಾದಿಅನರ್ಥಗಳು ಪ್ರಸಕ್ತವಾಗಿವೆ. ಅಂತಹ ದುಃಖಾದಿಅನರ್ಥಗಳು ಐಕ್ಯಜ್ಞಾನದಿಂದ ಮಾತ್ರ ವಿನಾಶ್ಯವಾಗಿವೆ. ಆದ್ದರಿಂದ ದುಃಖಾದಿಅನರ್ಥಕ್ಕೆ ಹೇತುವಾದ ಅಜ್ಞಾನದ (ಐಕ್ಯಾಜ್ಞಾನದ) ನಾಶಕ್ಕಾಗಿ, ಜೀವ-ಬ್ರಹ್ಮರ ಐಕ್ಯಜ್ಞಾನಪ್ರಾಪ್ತಿಗಾಗಿ ಎಲ್ಲ ವೇದಾಂತಗಳೂ ಪ್ರವೃತ್ತವಾಗಿವೆ. ವೇದಾರ್ಥನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರವೂ ಪ್ರವೃತ್ತವಾಗಿದೆ" ಎಂದು ತಿಳಿಯುತ್ತಾರೆ.

**ವಿವರಣೆ :-** ಜೀವನು ಬ್ರಹ್ಮನಿಂದ ಸ್ವಾಭಾವಿಕವಾಗಿಯೇ ಅಭಿನ್ನ. ಅಂದರೆ ಜೀವ-ಬ್ರಹ್ಮರಲ್ಲಿ ಪಾರಮಾರ್ಥಿಕವಾಗಿ (ನಿಜವಾಗಿ) ಅಭೇದವೇ ಇದೆ. ಹಾಗಾದರೆ ಬ್ರಹ್ಮನಿಗಿಲ್ಲದ ದುಃಖಾದಿಗಳು ಜೀವನಿಗೆ ಏಕೆ ? ಎಂದರೆ , ಜೀವನು ನಿಜವಾಗಿ ಬ್ರಹ್ಮನಿಂದ ಅಭಿನ್ನನಾಗಿದ್ದರೂ ''ತಾನು ಬ್ರಹ್ಮನಿಂದ ಅಭಿನ್ನ'' ಎಂಬ ಐಕ್ಯಜ್ಞಾನ ಅವನಿಗೆ ಇಲ್ಲ. ಅಂದರೆ ಐಕ್ಯಾಜ್ಞಾನವಿದೆ. ಈ ಐಕ್ಯಾಜ್ಞಾನನಿಮಿತ್ತವಾಗಿ ಜೀವನಿಗೆ ದುಃಖಾದಿಗಳು ಪ್ರಸಕ್ತವಾಗಿವೆ.

ಇಲ್ಲಿ ದುಃಖಾದಿಗಳು ಕಾರ್ಯ. ಅಜ್ಞಾನ (ಐಕ್ಯಾಜ್ಞಾನ) ಅದಕ್ಕೆ ಉಪಾದಾನಕಾರಣ. ಅಂದರೆ ದುಃಖಾದಿಗಳು ಅಜ್ಞಾನಕಾರ್ಯ ಎಂದಾಯಿತು.

**''ಅಜ್ಞಾನ-ತತ್ಕಾರ್ಯಯೋರನ್ಯತರತ್ವಂ ಮಿಥ್ಯಾತ್ವಮ್''**

ಎಂದು ನಾವು (ಮಾಯಾವಾದಿಗಳು) ಅಂಗೀಕರಿಸಿದ್ದರಿಂದ ಅಜ್ಞಾನಕಾರ್ಯವಾದ ದುಃಖಾದಿಗಳು ಮಿಥ್ಯೆಯಾಗಿವೆ. (ಅಪರಮಾರ್ಥವೇ ಆಗಿವೆ.)

ಹಾಗಾದರೆ ಈ ದುಃಖಾದಿಗಳ ವಿನಾಶ ಹೇಗೆ ? ಎಂದರೆ, ಐಕ್ಯಜ್ಞಾನದಿಂದ ಮಾತ್ರವೇ ದುಃಖಾದಿಗಳ ವಿನಾಶವಾಗುತ್ತದೆ. ಅಂದರೆ - ಜ್ಞಾನವು ಅಜ್ಞಾನಕ್ಕೆ ಮಾತ್ರವೇ ಸಾಕ್ಷಾತ್ ನಿವರ್ತಕವಾಗುತ್ತದೆ ಎಂದು ಅಂಗೀಕರಿಸಿದ್ದರಿಂದ ಐಕ್ಯಜ್ಞಾನ ಮಾಡಿಕೊಂಡರೆ ಅದರಿಂದ ದುಃಖಾದಿಗಳಿಗೆ ಉಪಾದಾನಕಾರಣವಾದ ಐಕ್ಯಾಜ್ಞಾನವು ನಿವೃತ್ತವಾಗುತ್ತದೆ. ಉಪಾದಾನಕಾರಣವಾದ ಐಕ್ಯಾಜ್ಞಾನವು ನಿವೃತ್ತವಾದರೆ ಅದರ ಕಾರ್ಯವಾದ ದುಃಖಾದಿಗಳೂ ಸ್ವಯಂ ನಿವೃತ್ತವಾಗುತ್ತವೆ ಎಂದು ಭಾವ.

ಆದ್ದರಿಂದ ದುಃಖಾದಿ ಅನರ್ಥಕ್ಕೆ ಹೇತುವಾದ (ಕಾರಣವಾದ) ಐಕ್ಯಾಜ್ಞಾನದ ನಾಶಕ್ಕಾಗಿ, ಅದಕ್ಕಾಗಿ ಜೀವ-ಬ್ರಹ್ಮರಲ್ಲಿ ಐಕ್ಯಜ್ಞಾನವನ್ನು ಮಾಡಿಸುವುದಕ್ಕಾಗಿ ಶ್ರುತಿಗಳು ಹಾಗೂ ತದರ್ಥನಿರ್ಣಾಯಕ ಬ್ರಹ್ಮಮೀಮಾಂಸಾಶಾಸ್ತ್ರ ಹೊರಟಿವೆ ಎಂಬುದಾಗಿ ಮಾಯಾವಾದಿಗಳು ಅಭಿಪ್ರಾಯಪಡುತ್ತಾರೆ.

**ಪರರಿಗೆ ಅಭಿಮತವಾದ ಪ್ರಮೇಯಗಳು (ಪರಶುವ್ಯಾಖ್ಯಾ)**

★ ಜೀವನಿಗೆ ಪರಮಾತ್ಮನಿಂದ ಅತ್ಯಾಂತಾಭೇದವಿದೆ.

★ ಜೀವನಿಗೆ ಅಜ್ಞಾನಾದಿನಿಮಿತ್ತವಾಗಿ ತೋರುವ ದುಃಖಾದ್ಯನರ್ಥವು ಪಾರಮಾರ್ಥಿಕವಲ್ಲ. (ಮಿಥ್ಯೆಯಾಗಿದೆ.)

★ ಐಕ್ಯಜ್ಞಾನವು ಆ ದುಃಖಾದ್ಯನರ್ಥಕ್ಕೆ ನಿವರ್ತಕವಾಗಿದೆ. (ಐಕ್ಯಜ್ಞಾನದಿಂದ ಐಕ್ಯಾಜ್ಞಾನನಿವೃತ್ತಿಯಾಗಿ ಆ ಮೂಲಕ ದುಃಖಾದ್ಯನರ್ಥಗಳು ನಿವೃತ್ತವಾಗುತ್ತವೆ ಎಂದು ಅಭಿಪ್ರಾಯ.)

★ ಶ್ರುತಿ ಹಾಗೂ ತದರ್ಥನಿರ್ಣಾಯಕ ಬ್ರಹ್ಮಮೀಮಾಂಸಾಶಾಸ್ತ್ರಗಳು ಐಕ್ಯಜ್ಞಾನ ಮಾಡಿಸುತ್ತವೆ.

## ಪರಾಭಿಪ್ರೇತವಾದ ವಿಷಯಾದಿಗಳು (ಪರಶುವ್ಯಾಖ್ಯಾ)

''ಅಪರೇ ತು ಸ್ವತಃ ಪರಮಾತ್ಮಭೂತಸ್ಯೈವ ಜೀವಸ್ಯ ...... ಇತಿ ಮನ್ಯಂತೇ''

ಇತ್ಯಾದಿಯಾಗಿ ನಿರೂಪಿಸುವುದರಿಂದ ಮಾಯಾವಾದಮತದ ಪ್ರಕಾರವಾಗಿ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಅಧಿಕಾರ್ಯಾದಿ ಅನುಬಂಧಚತುಷ್ಟಯವನ್ನು ಹೇಳಿದಂತಾಗುತ್ತದೆ :-

**ವಿಷಯ :-** ಜೀವ-ಬ್ರಹ್ಮರ ಐಕ್ಯವೇ ವಿಷಯ.

**ಪ್ರಯೋಜನ :-** ಐಕ್ಯಜ್ಞಾನದಿಂದ ಐಕ್ಯಾಜ್ಞಾನನಿವೃತ್ತಿ , ಆ ಮೂಲಕ ದುಃಖಾದ್ಯನರ್ಥನಿವೃತ್ತಿ ಪ್ರಯೋಜನ.

**ಅಧಿಕಾರಿ :-** ಅಜ್ಞಾನಿಯಾದ, ಐಕ್ಯಾಜ್ಞಾನನಿವೃತ್ತಿಯನ್ನು ಅಪೇಕ್ಷಿಸುವ ಜೀವನೇ ಅಧಿಕಾರಿ.

**ಸಂಬಂಧ :-** ಯಥಾಯೋಗ್ಯವಾಗಿ ಸಂಬಂಧ.

(ಸ್ವಾಭಿಮತ ವಿಷಯಾದಿಗಳನ್ನು ನಿರೂಪಿಸುವಾಗ ಹಿಂದೆ ನಿರೂಪಿಸಿದಂತೆ ಯಥಾಯೋಗ್ಯವಾಗಿ ಸಂಬಂಧವನ್ನು ತಿಳಿಯುವುದು.)

ಈ ರೀತಿಯಾಗಿ ಮಾಯಾವಾದಿಗಳು ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಮಾಯಾವಾದಮತದ ಪ್ರಕಾರವಾಗಿ ಅಧಿಕಾರ್ಯಾದಿ ಅನುಬಂಧಚತುಷ್ಟಯವನ್ನು ನಿರೂಪಿಸುತ್ತಾರೆ.

**ಅವತಾರಿಕೆ :-** ಈ ರೀತಿಯಾಗಿ ಮಾಯಾವಾದಮತದ ಪ್ರಕಾರ ವಿಷಯಾದ್ಯಾಭಾಸವು ಪ್ರಸಕ್ತವಾದದ್ದರಿಂದ ಅದನ್ನು ನಿರಾಕರಿಸಿ, ಸ್ವಾಭಿಮತವಾದ ವಿಷಯಾದಿಗಳನ್ನು ಸಮರ್ಥಿಸುವುದಕ್ಕಾಗಿ ಈ ಪ್ರಕರಣವು ಆರಂಭವಾಗಿರುವುದು ಯುಕ್ತವೇ ಆಗಿದೆ ಎಂದು ಹೇಳುತ್ತಾರೆ -

**ಟೀಕಾ :- ತಮೇತಂ ಶಾಸ್ತ್ರಸ್ಯ ಪರಾಭಿಮತಮಧಿಕಾರಿವಿಷಯಪ್ರಯೋಜನ-ಸಂಬಂಧಂ ನಿರಸ್ಯ ಸ್ವಾಭಿಮತಂ ಸಮರ್ಥಯಿತುಮಿದಂ ಪ್ರಕರಣಮಾರಭಮಾಣೋ ಭಗವಾನಾಚಾರ್ಯೋ ನಾರಾಯಣಸ್ತವನ-ತತ್ಪ್ರೀತಿಪ್ರಾರ್ಥನಾರೂಪಮಾದಿತೋ ಮಂಗಲಮಾಚರತಿ ।**

**ಅನುವಾದ :-** ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಈ ರೀತಿಯಾಗಿ ಪ್ರಸಕ್ತವಾದ ಪರಾಭಿಮತವಾದ (ಮಾಯಾವಾದಿಗಳು ಹೇಳುವ) ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧಗಳನ್ನು ನಿರಾಕರಿಸಿ, ಸ್ವಾಭಿಮತವಾದ ವಿಷಯಾದಿಗಳನ್ನು ಸಮರ್ಥಿಸುವುದಕ್ಕಾಗಿ ಈ ಉಪಾಧಿಖಂಡನ ಪ್ರಕರಣವನ್ನು ಪೂಜ್ಯರಾದ ಆಚಾರ್ಯರು ಆರಂಭಿಸುವವರಾಗಿ, ನಾರಾಯಣಸ್ತೋತ್ರ- ತತ್ಪ್ರೀತಿಪ್ರಾರ್ಥನಾ ರೂಪವಾದ ಮಂಗಳಾಚರಣೆಯನ್ನು ಗ್ರಂಥಾರಂಭದಲ್ಲಿ ಆಚರಿಸುತ್ತಾರೆ.

## -: ಉಪಾಧಿಖಂಡನ :-

**ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।**
**ಅಶೇಷದೋಷರಹಿತಃ ಪ್ರೀಯತಾಂ ಕಮಲಾಲಯಃ ॥**

**ಟೀಕಾ :- ಅಗಣ್ಯಗುಣಾನಾಂ ನಿತ್ಯೈಕನಿಲಯಾ ಸದಾ ಮುಖ್ಯಾಶ್ರಯಾ ಆಕೃತಿಃ ಮೂರ್ತಿರ್ಯಸ್ಯಾಸೌ ತಥೋಕ್ತಃ । ಪ್ರೀಯತಾಂ ಅಸ್ಮಾಕಮಿತಿ ಶೇಷಃ । ಅಭ್ಯರ್ಹಿತತ್ವೇನ ಸಿದ್ಧತ್ವಾತ್ ಇದಂ ನೋಕ್ತಮ್ ।**

**ಮೂಲಾರ್ಥ :- ಅಗಣ್ಯಗುಣನಿತ್ಯೈಕನಿಲಯಾಕೃತಿಃ** = ಎಣಿಸಲು ಅಶಕ್ಯವಾದ (ಅನಂತ) ಗುಣಗಳಿಗೆ ಯಾವಾಗಲೂ ಮುಖ್ಯವಾಗಿ ಆಶ್ರಯವಾದ ಶರೀರ ಉಳ್ಳ, **ಅಶೇಷದೋಷರಹಿತಃ** = ಅಜ್ಞಾನ ಪಾರತಂತ್ರ್ಯ ಮೊದಲಾದ ಒಂದೂ ದೋಷವಿಲ್ಲದವನಾದ, **ಕಮಲಾಲಯಃ** = ಲಕ್ಷ್ಮೀಪತಿಯಾದ **ನಾರಾಯಣಃ** = ನಾರಾಯಣನು (ಅಸ್ಮಾಕಂ = ನಮಗೆ) **ಪ್ರೀಯತಾಂ** = ಪ್ರೀತನಾಗಲಿ.

**ಟೀಕಾಅನುವಾದ :-** ಅಗಣ್ಯಗುಣನಿತ್ಯೈಕನಿಲಯಾಕೃತಿಃ ಎಂದರೆ, ಎಣಿಸಲು ಅಶಕ್ಯವಾದ (ಅನಂತ) ಗುಣಗಳಿಗೆ ಯಾವಾಗಲೂ ಮುಖ್ಯವಾಗಿ ಆಶ್ರಯವಾದ ಆಕೃತಿ=ಮೂರ್ತಿ (ಶರೀರ) ಉಳ್ಳವನಾರೋ ಅಂತಹ ಭಗವಂತ ಎಂದರ್ಥ.

ಮೂಲದಲ್ಲಿ 'ಪ್ರೀಯತಾಂ' (ಪ್ರೀತರಾಗಲಿ) ಎಂದಿದೆ. ಯಾರಿಗೆ ? ಎಂದು ಹೇಳಿಲ್ಲ. ಆ ಕಾರಣ 'ಅಸ್ಮಾಕಂ' (ನಮಗೆ) ಎಂದು ಶೇಷ ಮಾಡಿಕೊಳ್ಳಬೇಕು.

ಹಾಗಾದರೆ ಮೂಲದಲ್ಲಿ ಆಚಾರ್ಯರೇ 'ಅಸ್ಮಾಕಂ' ಎಂದು ಏಕೆ ಹೇಳಲಿಲ್ಲ ? ಎಂದರೆ, ಇದಕ್ಕೆ ಎರಡು ರೀತಿಯಾಗಿ ಸಮಾಧಾನ ತಿಳಿಯಬಹುದಾಗಿದೆ.

**ಸಮಾಧಾನ 1)** ಈ ಮಂಗಳಶ್ಲೋಕದಲ್ಲಿ ನಾರಾಯಣನ ಪ್ರೀತಿಯನ್ನು ಪ್ರಾರ್ಥಿಸುತ್ತಿದ್ದಾರೆ. ಆ ಕಮಲಾವಿಶಿಷ್ಟನಾದ ನಾರಾಯಣನ ಪ್ರೀತಿಗೆ ತಾವೇ (ಆಚಾರ್ಯರೇ) ಮುಖ್ಯಪಾತ್ರರಾದದ್ದರಿಂದ 'ಸ್ವೇಷಾಂ' (ತಮಗೆ) ಎನ್ನುವುದು ಸಿದ್ಧ(ಪ್ರಮಿತ)ವಾದ ಕಾರಣ 'ಅಸ್ಮಾಕಂ' ಎಂಬುದಾಗಿ ಕಂಠತಃ ಹೇಳಿಲ್ಲ.

**ಸಮಾಧಾನ 2)** ಅಥವಾ ಯಾವ ರೀತಿಯಾಗಿ 'ಭಿಕ್ಷಾಂ ದೇಹಿ' ಇತ್ಯಾದಿಪ್ರಯೋಗಗಳಲ್ಲಿ ವಾಕ್ಯಪ್ರಯೋಕ್ತೃಗಳಾಗಿ ತಾವೇ ಪ್ರಕೃತರಾದ್ದರಿಂದ (ಸಿದ್ಧರಾದ್ದರಿಂದ) ಅಲ್ಲಿ 'ಮಮ=ನನಗೆ' ಎಂಬುದಾಗಿ ಕಂಠತಃ ಹೇಳುವುದಿಲ್ಲವೋ ಅದೇ ರೀತಿಯಾಗಿ ಈ ಮಂಗಲಪದ್ಯದಲ್ಲಿಯೂ ಸಹ 'ಪ್ರೀಯತಾಂ' ಎಂಬ ವಾಕ್ಯಪ್ರಯೋಕ್ತೃಗಳಾಗಿ ತಾವೇ (ಆಚಾರ್ಯರೇ) ಪ್ರಕೃತರಾದ್ದರಿಂದ (ಸಿದ್ಧರಾದ್ದರಿಂದ) 'ಅಸ್ಮಾಕಂ=ನಮಗೆ' ಎಂಬುದಾಗಿ ಕಂಠತಃ ಹೇಳಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ:-** ''ಅಗಣ್ಯಗುಣನಿತ್ಯೈಕನಿಲಯಾಕೃತಿಃ'' ''ಅಶೇಷದೋಷರಹಿತಃ'' ಎಂಬ ಎರಡು ವಿಶೇಷಣಗಳು ಏಕೆ (ಹೊರಟಿವೆ) ? ಭಗವಂತನನ್ನು ಸ್ತೋತ್ರ ಮಾಡುವುದಕ್ಕಾಗಿ ಹೊರಟಿವೆ ಎಂದರೆ, ಜಗಜ್ಜನ್ಮಾದಿಕರ್ತೃತ್ವ ಮೊದಲಾದ ಬೇರೆ ಬೇರೆ ವಿಶೇಷಣಗಳಿಂದಲೂ ಭಗವಂತನನ್ನು ಸ್ತೋತ್ರ ಮಾಡಲು ಬರುವುದರಿಂದ ಆ ಬೇರೆ ವಿಶೇಷಣಗಳನ್ನು ಬಿಟ್ಟು ಈ ಎರಡು ವಿಶೇಷಣಗಳಿಂದಲೇ ಭಗವಂತನನ್ನು ಸ್ತೋತ್ರ ಮಾಡುವುದಕ್ಕೆ ಏನು ಪ್ರಯೋಜನ ? ಎಂಬುದಾಗಿ ಶಂಕೆ ಬಂದರೆ, ಈ ಎರಡು ವಿಶೇಷಣಗಳ ಕೃತ್ಯ ತೋರಿಸುತ್ತಾರೆ -

**ಟೀಕಾ :- ಅತ್ರ [6] ಆದ್ಯವಿಶೇಷಣದ್ವಯಂ ಸ್ತುತ್ಯರ್ಥಮಪಿ [7] ಉತ್ತರಪ್ರಬಂಧ-ಪ್ರಸಂಗೋಪಕ್ಷೇಪಾಯ ಕೃತಮ್ । ಅಥವಾ ನಾನಿರ್ಧಾರಿತಸ್ವರೂಪಸ್ಯ ಪ್ರಸಾದಾಶಂಸನಂ ಯುಕ್ತಮ್ । ನ ಚ ಲಕ್ಷಣೇನ ವಿನಾ ನಿರ್ಧಾರಣಮಿತಿ ಲಕ್ಷಣದ್ವಯಾಭಿಧಾನಮಿದಮ್ । [8] ಯಥೋಕ್ತಮ್ -**

[9]ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।
ತಾವದೇವೇಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥ ಇತಿ ।

ನಾರಾಯಣಪ್ರೀತಿರಿವ ರಮಾಯಾಃ ಪ್ರೀತಿರಪಿ ಪ್ರಾರ್ಥನೀಯೇತಿ ಜ್ಞಾಪನಾಯ ಕಮಲಾಲಯ ಇತ್ಯುಕ್ತಮ್ ॥

**ಅನುವಾದ :-** ಈ ಮಂಗಳಪದ್ಯದಲ್ಲಿ ಮೊದಲನೇ (ಅಗಣ್ಯ ..... ಅಶೇಷ...) ಎರಡು ವಿಶೇಷಣಗಳು ಭಗವಂತನನ್ನು ಸ್ತೋತ್ರ ಮಾಡುವುದಕ್ಕೆ ಪ್ರವೃತ್ತವಾಗಿದ್ದರೂ ಸಹ, ಮುಂದಿನ [10]ಗ್ರಂಥದ ಪ್ರಸಕ್ತಿಯನ್ನು ಪ್ರಾರಂಭಿಸುವುದಕ್ಕಾಗಿ ಪ್ರಯೋಗಿಸಲ್ಪಟ್ಟಿವೆ.

ಅಥವಾ ಭಗವಂತನ ಸ್ವರೂಪನಿರ್ಧಾರವಾಗದ ಹೊರತು ಅವನ ಪ್ರಸಾದವನ್ನು ಆಶಾಸನ ಮಾಡುವುದು ಯುಕ್ತವಾಗುವುದಿಲ್ಲ. ಹಾಗಾಗಿ ಪ್ರಸಾದಾಶಂಸನೆಗೂ ಮುಂಚೆ ಸ್ವರೂಪನಿರ್ಧಾರವಾಗಬೇಕು. ಆದರೆ ಭಗವಂತನ ಲಕ್ಷಣಗಳನ್ನು ಹೇಳದ

---

6) 'ಅಗಣ್ಯಗುಣನಿತ್ಯೈಕನಿಲಯಾಕೃತಿಃ' 'ಅಶೇಷದೋಷರಹಿತಃ' ಇತಿ ವಿಶೇಷಣದ್ವಯಂ ಇತ್ಯರ್ಥಃ ।

7) ಉತ್ತರೇತಿ ॥ ಉತ್ತರಪ್ರಬಂಧಸ್ಯ ಉತ್ತರಗ್ರಂಥಸ್ಯ ಪ್ರಸಂಗಃ ಪ್ರಸಕ್ತಿಃ ತಸ್ಯ ಉಪಕ್ಷೇಪಾಯ ಪ್ರಾರಂಭಾಯ ಇತ್ಯರ್ಥಃ । (ಶ್ರೀನಿ)

8) ಏತಲ್ಲಕ್ಷಣದ್ವಯಸ್ಯ ನಾರಾಯಣಸ್ವರೂಪನಿರ್ಧಾರಣಹೇತುತ್ವೇಽನುವ್ಯಾಖ್ಯಾನ-ಸಮ್ಮತಿಮಾಹ । ಯಥೋಕ್ತಮಿತಿ । ವ್ಯಾಖ್ಯಾತಂ ಚ ಸುಧಾಯಾಂ - (ಯದ್ಯೇವಂ ನ ಸಕಲಚೇತನಸಮುದಾಯಃ ಪರಮಾತ್ಮಾ ತರ್ಹಿ) ಕಿಯತೀ ಸೀಮಾ ಪರಮಾತ್ಮತ್ವಸ್ಯೇತ್ಯತ ಆಹ - ಅತ ಇತಿ । ಅಶೇಷಗುಣೋನ್ನದ್ಧತ್ವಂ ನಿರ್ದೋಷತ್ವಂ ಚ ಪ್ರತ್ಯೇಕಂ ನಿರ್ಧಾರಣಹೇತುತ್ವೇನೋಕ್ತಮ್ । ಸ್ವಮತೇ ಬ್ರಹ್ಮಣ ಈಶ್ವರಾತಿರಿಕ್ತಸ್ಯಾಭಾವಂ ಸೂಚಯಿತುಮೀಶ್ವರ ಇತ್ಯುಕ್ತಮ್ (ಸೂಚಯಿತುಂ ಸರ್ವತ್ರೇಶ್ವರ ಇತ್ಯಾದ್ಯುಕ್ತಿಃ) । ಇದಂ ಹಿ ಬ್ರಹ್ಮಣೋ ಲಕ್ಷಣಂ ಶ್ರುತ್ಯಾದಿಸಿದ್ಧಮಿತಿ (ಹಿಶಬ್ದಾರ್ಥಃ) ಹಿಶಬ್ದಃ । (ಯಾವದ್ವಸ್ತು ಅಶೇಷಗುಣೋನ್ನದ್ಧಂ ನಿರ್ದೋಷಂ ತಾವದ್ರಾಮಕೃಷ್ಣಾದಿರೂಪಜಾತಂ ವಸ್ತು ಈಶ್ವರೋ) ತಾವದ್ವಸ್ತ್ವೀಶ್ವರೋ ನಾಮೇತ್ಯುಕ್ತೇ (ಸಮುದಾಯೈಕ್ಯಂ ಪ್ರತೀಯತೇ) ಸಮುದಾಯೈಕ್ಯೇನ ಭೇದಾಭೇದಾವಂಗೀಕೃತಾವಿತಿ ಪ್ರತೀಯತೇ । ತನ್ನಿರಾಕರೋತಿ - ತತ್ರೇತಿ । ಕ್ವಚಿದಿತಿ । ಪರಸ್ಪರಂ ಪರಮಾತ್ಮನಾ ಚೇತ್ಯರ್ಥ ಇತಿ । (ಶ್ರೀನಿ)

9) ಅನುವ್ಯಾಖ್ಯಾನ ಉಪಮಾಧಿಕರಣ 3-2-10

ಹೊರತು ಸ್ವರೂಪನಿರ್ಧಾರವಾಗುವುದಿಲ್ಲ. ಆದ್ದರಿಂದ ಈ ಎರಡು (ವಿಶೇಷಣಗಳು ಲಕ್ಷಣಾಭಿಧಾನವಾಗಿದೆ.) ವಿಶೇಷಣಗಳಿಂದ ಭಗಂತನ ಲಕ್ಷಣಗಳನ್ನು ಹೇಳುತ್ತಿದ್ದಾರೆ.

ಈ ಎರಡು ವಿಶೇಷಣಗಳು ನಾರಾಯಣನ (ಸ್ವರೂಪನಿರ್ಧಾರಕ್ಕೆ ಹೇತುವಾಗಿವೆ) ಸ್ವರೂಪನಿರ್ಧಾರ ಮಾಡಿಕೊಡುತ್ತವೆ ಎಂಬ ವಿಷಯವನ್ನು ಆಚಾರ್ಯರು ಅನುವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ -

[11] **ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।**
**ತಾವದೇವೇಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥**

ಎಂಬುದಾಗಿ.

ನಾರಾಯಣನ ಪ್ರೀತಿಯು ಹೇಗೆ ಪ್ರಾರ್ಥನೀಯವಾಗಿದೆಯೋ ಅದೇ ರೀತಿಯಾಗಿ ಸಕಲವಾಙ್ಮನಸದೇವತೆಯಾದ ರಮೆಯ ಪ್ರೀತಿಯೂ ಪ್ರಾರ್ಥನೀಯವಾಗಿದೆ ಎಂದು ತಿಳಿಸುವುದಕ್ಕಾಗಿ [12]'ಕಮಲಾಲಯಃ' ಎಂಬುದಾಗಿ ನಾರಾಯಣನಿಗೆ ವಿಶೇಷಣ ನೀಡಿದ್ದಾರೆ.

---

10) ನಾರಾಯಣನು ಅಗಣ್ಯಗುಣನಿತ್ಯೈಕನಿಲಯಾಕೃತಿಯಾಗಿದ್ದಾನೆ, ಅಶೇಷದೋಷರಹಿತನಾಗಿದ್ದಾನೆ ಎಂಬುದಾಗಿ ಈ ಎರಡು ವಿಶೇಷಣಗಳಿಂದ ಭಗವಂತನನ್ನು ಸ್ತೋತ್ರ ಮಾಡಿದರೆ, ಆಗ ಮಾಯಾವಾದಿಗಳು ''ಜೀವ-ಬ್ರಹ್ಮರ ಐಕ್ಯವು ಶ್ರುತಿ-ತನ್ಮೀಮಾಂಸಾಶಾಸ್ತ್ರಪ್ರತಿಪಾದ್ಯವಾಗಿದೆ. ನಾರಾಯಣನು (ಬ್ರಹ್ಮನು) ಅಗಣ್ಯಗುಣಾಶ್ರಯನಾಗಿದ್ದಾನೆ ಎಂದು ಅಂಗೀಕರಿಸಿದರೆ ಐಕ್ಯವು ಕೂಡುವುದಿಲ್ಲ. ಆದ್ದರಿಂದ ನಾರಾಯಣನಿಗೆ ಅಗಣ್ಯಗುಣಾಶ್ರಯತ್ವವನ್ನು ಹೇಳುವುದು ಸರಿಯಲ್ಲ'' ಎಂಬುದಾಗಿ ಮುಂದಿನ ಗ್ರಂಥದಲ್ಲಿ ಆಕ್ಷೇಪ ಮಾಡುತ್ತಾರೆ. ಹೀಗೆ ಆಕ್ಷೇಪ, ಅದಕ್ಕೆ ಮುಂದೆ ಸಮಾಧಾನ ಈ ರೀತಿಯಾಗಿ ಉತ್ತರಗ್ರಂಥಗಳು ಹೊರಡುತ್ತವೆ. ಆದರೆ ನಾರಾಯಣನು ಜಗಜ್ಜನ್ಮಾದಿಕರ್ತೃವಾಗಿದ್ದಾನೆ ಇತ್ಯಾದಿಯಾಗಿ ಸ್ತೋತ್ರ ಮಾಡಿದರೆ ಈ ಆಕ್ಷೇಪ ಬರುವುದಿಲ್ಲ. ಆದ್ದರಿಂದ ಮುಂದಿನ ಗ್ರಂಥದ ಪ್ರಸಕ್ತಿಯನ್ನು ತಂದುಕೊಡುವುದಕ್ಕಾಗಿ ಈ ಎರಡು ವಿಶೇಷಣಗಳಿಂದಲೇ ಸ್ತುತಿಸಿದ್ದಾರೆ ಎಂದು ಅಭಿಪ್ರಾಯ.

11) ಯಾವ ರಾಮ-ಕೃಷ್ಣಾದಿ ರೂಪಗಳು ಅನಂತಕಲ್ಯಾಣಗುಣಪರಿಪೂರ್ಣವಾಗಿವೆಯೋ ಮತ್ತು ಸಕಲದೋಷರಹಿತವಾಗಿವೆಯೋ ಆ ರೂಪಗಳೇ ಈಶ್ವರ. ಆ ಭಗವಂತನ ರೂಪಗಳಲ್ಲಿ (ಅವತಾರಗಳಲ್ಲಿ) ಪರಸ್ಪರವಾಗಿ ಹಾಗೂ ಮೂಲರೂಪದಿಂದಲೂ ಯಾವ ಭೇದವೂ ಇಲ್ಲ ಎಂದು ಪ್ರಮಾಣಶ್ಲೋಕದ ಅಭಿಪ್ರಾಯ.

**ಅವತಾರಿಕೆ :-** ''ಉತ್ತರಪ್ರಬಂಧಪ್ರಸಂಗೋಪಕ್ಷೇಪಕ್ಕಾಗಿ (ಮುಂದಿನ ಗ್ರಂಥದ ಪ್ರಸಕ್ತಿಯನ್ನು ಪ್ರಾರಂಭಿಸುವುದಕ್ಕಾಗಿ) ಮೊದಲನೇ ಎರಡು ವಿಶೇಷಣಗಳು'' ಎಂದು ಹೇಳಿದರು. ಅದನ್ನು (ಮುಂದಿನ ಗ್ರಂಥದ ಪ್ರಸಕ್ತಿಪ್ರಾರಂಭವನ್ನು) ಈಗ ತೋರಿಸುತ್ತಾರೆ-

**ಟೀಕಾ :- ಅತ್ರಾಹುರದ್ವೈತವಾದಿನಃ, ಜೀವಬ್ರಹ್ಮಣೋರೇಕತ್ವಂ ಖಲು ಸಕಲವೇದಾಂತತನ್ಮೀಮಾಂಸಾಶಾಸ್ತ್ರಪ್ರತಿಪಾದ್ಯಮ್ । ನ ಚ [13] ತತ್ ನಾರಾಯಣಾಖ್ಯಸ್ಯ ಪರಬ್ರಹ್ಮಣಃ ಸದಾ ಅಗಣ್ಯಗುಣಾಶ್ರಯತ್ವೇ ಸಂಭವತಿ । [14] ಅತಾದೃಗ್ರೂಪತ್ವಾತ್ ಜೀವಸ್ಯ । [15] ನ ಹಿ ಪರಸ್ಪರವಿರುದ್ಧಸ್ವಭಾವಯೋರೇಕತ್ವಂ ದೃಷ್ಟಮ್ । ಅತೋ ನ [16] ಸ್ವಭಾವತೋಽಗಣ್ಯಗುಣಾಧಿಕರಣತ್ವಂ ನಾರಾಯಣಸ್ಯೇತಿ ।**

**ಅನುವಾದ :-** ಇಲ್ಲಿ ಅದ್ವೈತವಾದಿಗಳು (ಮಾಯಾವಾದಿಗಳು) ಈ ರೀತಿ ಶಂಕಿಸುತ್ತಾರೆ :- ಜೀವ-ಬ್ರಹ್ಮರಲ್ಲಿ ಐಕ್ಯವು ಸಕಲವೇದಾಂತ-ತದರ್ಥನಿರ್ಣಾಯಕ ಬ್ರಹ್ಮಮೀಮಾಂಸಾಶಾಸ್ತ್ರಗಳಿಂದ ಪ್ರತಿಪಾದ್ಯವಾಗಿದೆ. ನಾರಾಯಣ ಎಂಬ ಹೆಸರಿನ ಪರಬ್ರಹ್ಮನಿಗೆ ಸದಾ ಅಗಣ್ಯಗುಣಾಶ್ರಯತ್ವವನ್ನು ಅಂಗೀಕರಿಸಿದರೆ ಇಂತಹ ಜೀವ-ಬ್ರಹ್ಮರ ಐಕ್ಯವು ಕೂಡುವುದಿಲ್ಲ. ಕಾರಣ ನಾರಾಯಣನು ಅಗಣ್ಯಗುಣಾಶ್ರಯನಾದಂತೆ ಜೀವನು ಅಗಣ್ಯಗುಣಾಶ್ರಯನಾಗಿಲ್ಲ.

ಜೀವನು ಅಗಣ್ಯಗುಣಾಶ್ರಯನಾಗಿಲ್ಲ ಎಂದರೆ, ಸರಿ. ನಾರಾಯಣ ಅಗಣ್ಯಗುಣಾಶ್ರಯನಾಗಿದ್ದಾನೆ, ಜೀವ ಅಗಣ್ಯಗುಣಾಶ್ರಯ ಅಲ್ಲ. ಆದರೂ ಅವರಲ್ಲಿ (ಐಕ್ಯ ಏಕೆ ಹೇಳಬಾರದು ?) ಐಕ್ಯವೇ ಇರಲಿ ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ - ಪರಸ್ಪರವಿರುದ್ಧಸ್ವಭಾವ ಉಳ್ಳ ಎರಡು ವಸ್ತುಗಳಲ್ಲಿ ಐಕ್ಯವು

---

12) ಟೀಕೆಯ ಮಂಗಲಪದ್ಯವನ್ನು ಅರ್ಥೈಸುವಾಗ ''ವಿಶೇಷವಿಚಾರಗಳು'' ಶೀರ್ಷಿಕೆಯಲ್ಲಿ ನಿರೂಪಿಸಿರುವ ಮೊದಲನೇ ವಿಶೇಷವಿಚಾರವನ್ನು ಇಲ್ಲಿಯೂ ತಿಳಿಯಬೇಕು. ('ರಮಾಯಾಃ ರಮಣಂ ನತ್ವಾ' ಎಂಬ ಪದಗಳ ಕೃತ್ಯವನ್ನು ತಿಳಿದಂತೆ 'ಕಮಲಾಲಯಃ' ಎಂಬ ಪದದ ಕೃತ್ಯವನ್ನೂ ತಿಳಿಯಬೇಕು.)

13) ತತ್ ಜೀವಬ್ರಹ್ಮಣೋರೇಕತ್ವಮ್ । (ಶ್ರೀನಿ)

14) ನಾರಾಯಣವತ್ ಅನಂತಗುಣಾಶ್ರಯತ್ವಾಭಾವಾದಿತಿ ಭಾವಃ । (ಶ್ರೀನಿ)

15) ಅಸ್ತು ವಾ ಜೀವಸ್ಯಾತಾದೃಗ್ರೂಪತ್ವಮ್ । ತಥಾಪಿ ಐಕ್ಯಮೇವ ಕಿಂ ನ ಸ್ಯಾದಿತ್ಯತಃ ಆಹ । ನಹೀತಿ । ಜಲಾನಲವದಿತಿ ಭಾವಃ । (ಶ್ರೀನಿ)

16) ಸ್ವಭಾವತಃ ಪರಮಾರ್ಥತಃ ।

ಎಲ್ಲಿಯೂ ಕಂಡಿಲ್ಲ. ಉದಾ :- ಜಲ-ಅನಲ (ನೀರು-ಬೆಂಕಿ) ಇವುಗಳು ಒಂದು ಶೀತಸ್ಪರ್ಶ ಉಳ್ಳದ್ದು, ಮತ್ತೊಂದು ಉಷ್ಣಸ್ಪರ್ಶ ಉಳ್ಳದ್ದು, ಹೀಗೆ ಪರಸ್ಪರವಿರುದ್ಧ ಸ್ವಭಾವ ಉಳ್ಳದ್ದಾದ್ದರಿಂದ ಅವುಗಳಲ್ಲಿ ಭೇದವೇ ಕಂಡಿದೆ, ಐಕ್ಯ ಕಂಡಿಲ್ಲ.

ಆದ್ದರಿಂದ ನಾರಾಯಣನಿಗೆ ಪಾರಮಾರ್ಥಿಕವಾಗಿ ಅಗಣ್ಯಗುಣಾಧಿಕರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಮಾಯಾವಾದಿಗಳು ಶಂಕಿಸುತ್ತಾರೆ.

**ಅವತಾರಿಕೆ :-** ಈ ರೀತಿಯಾಗಿ ಮಾಯಾವಾದಿಗಳು ಶಂಕೆ ವ್ಯಕ್ತಪಡಿಸಿದರೆ, ಜೀವ-ಬ್ರಹ್ಮರ ಐಕ್ಯವೇ (ಶಾಸ್ತ್ರಪ್ರತಿಪಾದ್ಯವಲ್ಲ) ಪ್ರಾಮಾಣಿಕವಲ್ಲ ಎಂದು ಸಮರ್ಥಿಸುವ ಮೂಲಕ ಅವರ ಶಂಕೆಯನ್ನು ನಿರಾಕರಿಸುತ್ತಾರೆ -

**ಟೀಕಾ :- ತದಯುಕ್ತಮ್ । ಸ್ಯಾದಿದಂ ಯದಿ ಜೀವ-ಬ್ರಹ್ಮಣೋರೇಕತ್ವಂ ಶಾಸ್ತ್ರಾರ್ಥಃ ಸ್ಯಾತ್ । ನ ಚೈವಂ ಸಂಭವತಿ । ತಥಾತ್ವೇ ಶಾಸ್ತ್ರಸ್ಯ [17] ಅನಾರಂಭಣೀಯತ್ವಪ್ರಸಂಗಾತ್ । ಯತ್ ಖಲು ಅಧಿಕಾರಿವಿಷಯಪ್ರಯೋಜನ-ಸಂಬಂಧವತ್ ತತ್ [18] ಆರಂಭಣೀಯಂ ದೃಷ್ಟವ್ । ನ ಚ [19] ಏತತ್ ಅದ್ವೈತವಾದೇ ಸಂಭವತಿ । ಅಧಿಕಾರ್ಯಾದಿಸಿದ್ಧೇರಜ್ಞಾನಸಿದ್ಧ್ಯಧೀನತ್ವಾತ್ [20] । ನ ಚ ತತ್ಪಕ್ಷೇ ಅಜ್ಞಾನಮುಪಪದ್ಯತೇ । ಕಥಮ್ ? ಇತಿ, ತತ್ರಾಹ -**

---

17) 'ಪ್ರೇಕ್ಷಾವದನುಪಾದೇಯತ್ವಪ್ರಸಂಗಾದಿತ್ಯರ್ಥಃ ।' (ಪರಶುವ್ಯಾಖ್ಯಾ)

ಪ್ರೇಕ್ಷಾವದ್ಭಿಃ ಉಪಾದೇಯಂ ನ ಸ್ಯಾತ್ ಇತಿ ಭಾವಃ । ''ಪ್ರೇಕ್ಷಾವಂತರಿಂದ ಸ್ವೀಕಾರ ಮಾಡಲು ಯೋಗ್ಯವಾಗದೇ ಹೋಗಬೇಕಾಗುತ್ತದೆ'' ಎಂದು ಅಭಿಪ್ರಾಯ. ಮಾಯಾವಾದಖಂಡನಟೀಕೆಯಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾರೆ :-

''ನನು ಅನಾರಂಭಣೀಯತ್ವಂ ನಾಮ ಅಪ್ರಣೇತವ್ಯತ್ವಂ ವಾ ? ಅಶ್ರೋತವ್ಯತ್ವಾದಿಕಂ ವಾ ? ಆದ್ಯೇ ತ್ವಿಷ್ಟಾಪಾದನವ್ । ವೇದಸ್ಯಾಪ್ರಣೇತವ್ಯತ್ವಾತ್ । ನ ದ್ವಿತೀಯಃ । ಬೌದ್ಧಾದಿಶಾಸ್ತ್ರಶ್ರವಣಸ್ಯಾಪಿ ದರ್ಶನಾತ್ । ಮೈವಮ್ । ಪ್ರೇಕ್ಷಾವದುಪಾದೇಯತ್ವಾ-ಭಾವಸ್ಯ ವಿವಕ್ಷಿತತ್ವಾತ್ ।'' (ಮಾಯಾವಾದಖಂಡನ ಟೀಕಾ)

18) ಪ್ರೇಕ್ಷಾವದ್ಭಿಃ ಉಪಾದೇಯಂ ದೃಷ್ಟಮಿತ್ಯರ್ಥಃ ।

19) ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧವತ್ತ್ವಂ ।

20) ಅಜ್ಞೋ ಹ್ಯಧಿಕಾರೀ । ಅಜ್ಞಾತೋ ಹಿ ವಿಷಯಃ । ಅಜ್ಞಾನನಿವೃತ್ತಿಃ ಪ್ರಯೋಜನಂ ಇತ್ಯೇವಂ ಅಧಿಕಾರ್ಯಾದಿಸಿದ್ಧೇಃ ಅಜ್ಞಾನಸಿದ್ಧ್ಯಧೀನತ್ವಾತ್ ಇತ್ಯರ್ಥಃ । (ಶ್ರೀನಿ)

**ಮೂಲ :- ಅಜ್ಞಾತಾಽಖಿಲಸಂವೇತ್ತುರ್ಘಟತೇ ನ ಕುತಶ್ಚನ ।**

**ಅಜ್ಞಾನಂ ಹಿ [21]ಕಸ್ಯಚಿತ್ ಕ್ವಚಿತ್ ಸಂಭವತಿ । ನ ಚ ತತ್ಪಕ್ಷೇ ಪರಮಾತ್ಮಾತಿರಿಕ್ತಂ [22]ವಸ್ತು ವಿದ್ಯತ ಇತಿ [23]ತಸ್ಯೈವಾಜ್ಞಾನಂ ವಕ್ತವ್ಯಮ್ । ನ ಚ [24]ತಸ್ಯ ಕುತಶ್ಚನ [25]ಕುತ್ರಾಪಿ [26]ತತ್ ಸಂಭವತಿ ಸರ್ವಜ್ಞತ್ವಾತ್ । ಅತೋ ವ್ಯಾಪಕೀಭೂತಾಶ್ರಯ-ವಿಷಯಾನುಪಪತ್ತ್ಯಾ ವ್ಯಾಪ್ಯಸ್ಯಾಜ್ಞಾನಸ್ಯಾಪ್ಯನುಪಪತ್ತಿಃ ।**

**ಅನುವಾದ :-** ''ಜೀವ-ಬ್ರಹ್ಮರ ಐಕ್ಯವು ಶಾಸ್ತ್ರಪ್ರತಿಪಾದ್ಯ(ಪ್ರಾಮಾಣಿಕ) ವಾಗಿದೆ. ನಾರಾಯಣನಿಗೆ ಅಗಣ್ಯಗುಣಾಶ್ರಯತ್ವವನ್ನು ಅಂಗೀಕರಿಸಿದರೆ ಐಕ್ಯವು ಉಪಪನ್ನವಾಗುವುದಿಲ್ಲ. ಆದ್ದರಿಂದ ನಾರಾಯಣನಿಗೆ ಸ್ವಭಾವತಃ (ಪಾರಮಾರ್ಥಿಕ ವಾಗಿ) ಅಗಣ್ಯಗುಣಾಶ್ರಯತ್ವವನ್ನು ಹೇಳುವುದು ಸರಿಯಲ್ಲ'' ಎಂಬುದಾಗಿ ಮಾಯಾವಾದಿಗಳು ಶಂಕಿಸುವುದು ಸರಿಯಲ್ಲ. ಏಕೆಂದರೆ -ಒಂದುವೇಳೆ ಜೀವ-ಬ್ರಹ್ಮರ ಐಕ್ಯವು ಶಾಸ್ತ್ರಪ್ರತಿಪಾದ್ಯವಾಗುತ್ತಿದ್ದರೆ ಆಗ ಈ ರೀತಿ ಶಂಕಿಸಬಹುದಿತ್ತು. ಆದರೆ ಜೀವ-ಬ್ರಹ್ಮರ ಐಕ್ಯವು ಶಾಸ್ತ್ರಪ್ರತಿಪಾದ್ಯವಾಗಲು ಸಾಧ್ಯವಿಲ್ಲ.

ಹಾಗೆ ಒಂದುವೇಳೆ ಶಾಸ್ತ್ರವು ಜೀವ-ಬ್ರಹ್ಮರ ಐಕ್ಯವನ್ನು ಪ್ರತಿಪಾದಿಸುತ್ತದೆ ಎಂದು ಹೇಳುವುದಾದರೆ ಆಗ ಶಾಸ್ತ್ರವು ಅನಾರಂಭಣೀಯವಾಗಬೇಕಾಗುತ್ತದೆ. ಏಕೆಂದರೆ - ಯಾವ ಶಾಸ್ತ್ರವು ಅಧಿಕಾರಿ-ವಿಷಯ-ಪ್ರಯೋಜನ- ಸಂಬಂಧಗಳುಳ್ಳ-ದ್ದಾಗಿರುವುದೋ ಅದೇ ಆರಂಭಣೀಯವಾಗಿದ್ದು ಕಂಡಿದೆ.

ಪ್ರಕೃತ ಮಾಯಾವಾದಶಾಸ್ತ್ರದಲ್ಲಿ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧಗಳು ಸಂಭವಿಸುವುದಿಲ್ಲ. ಏಕೆಂದರೆ - ಅಜ್ಞಾನಿಯಾದವನು ಅಧಿಕಾರಿ, ಅಜ್ಞಾತವಾದದ್ದು ವಿಷಯ, ಅಜ್ಞಾನನಿವೃತ್ತಿಯು ಪ್ರಯೋಜನ, ಹೀಗೆ ಅಧಿ ಕಾರ್ಯಾದಿಗಳ ಸಿದ್ಧಿಯು ಅಜ್ಞಾನಸಿದ್ಧಿಯ ಅಧೀನವಾಗಿದೆ. ಆದರೆ ಮಾಯಾವಾದ ಮತದಲ್ಲಿ ಅಜ್ಞಾನವೇ ಉಪಪನ್ನವಾಗುವುದಿಲ್ಲ.

---

21) ಕಸ್ಯಚಿತ್ ಪುರುಷಸ್ಯ, ಕ್ವಚಿತ್ ವಿಷಯೇ ।

22) ವಸ್ತು ಜೀವಾಖ್ಯಂ ।

23) ಪರಮಾತ್ಮನ ಏವ ।

24) ಪರಮಾತ್ಮನಃ ।

25) ಕಸ್ಮಿನ್ನಪಿ ವಿಷಯೇ । 26) ಅಜ್ಞಾನಂ ।

ಮಾಯಾವಾದಮತದಲ್ಲಿ ಅಜ್ಞಾನವು ಏಕೆ ಉಪಪನ್ನವಾಗುವುದಿಲ್ಲ ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರ ನೀಡುತ್ತಾರೆ -

**ಮೂಲ :- ''ಅಜ್ಞತಾಽಖಿಲಸಂವೇತ್ತುರ್ಘಟತೇ ನ ಕುತಶ್ಚನ ।''**

**ಮೂಲಾರ್ಥ : ಸರ್ವಜ್ಞನಾದ ಬ್ರಹ್ಮನಿಗೆ ಯಾವ ವಸ್ತುವಿನ ವಿಷಯದಲ್ಲಿಯೂ ಅಜ್ಞಾನವು ಕೂಡವುದಿಲ್ಲ.**

ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವು (ಅಜ್ಞಾನಾಶ್ರಯತ್ವವು) ಕೂಡುವುದಿಲ್ಲ ಎಂದರೆ, ಹಾಗಾದರೆ ಅಜ್ಞಾನವು ನಿರಾಶ್ರಯವಾಗಿ ನಿರ್ವಿಷಯವಾಗಿಯೇ ಇರಲಿ ಎಂದು ಶಂಕಿಸಲು ಬರುವುದಿಲ್ಲ. ಏಕೆಂದರೆ ''ಇವನಿಗೆ ಈ ವಿಷಯದಲ್ಲಿ ಅಜ್ಞಾನವಿದೆ'' ಎಂಬುದಾಗಿ ಪ್ರತೀತಿ ಬರುವುದರಿಂದ ಅಜ್ಞಾನಕ್ಕೆ ಸಾಶ್ರಯತ್ವ-ಸವಿಷಯಕತ್ವಗಳ ನಿಯಮವಿದೆ. ಆದ್ದರಿಂದ ಒಬ್ಬ ವ್ಯಕ್ತಿಗೆ ಒಂದು ವಿಷಯದಲ್ಲಿ ಅಜ್ಞಾನವನ್ನು ಹೇಳಬೇಕು. (ಅಜ್ಞಾನಕ್ಕೆ ಆಶ್ರಯನಾದ ವ್ಯಕ್ತಿ, ವಿಷಯವಾದ ವಸ್ತು ಇರಬೇಕು.)

ಹಾಗಾದರೆ ಜೀವನಿಗೇನೇ ಅಜ್ಞಾನವನ್ನು ಹೇಳೋಣ ಎಂದರೆ, ಅದು ಸರಿಯಲ್ಲ. ಏಕೆಂದರೆ -ಮಾಯಾವಾದಪಕ್ಷದಲ್ಲಿ ಪರಮಾತ್ಮನಿಂದ ಭಿನ್ನವಾದ 'ಜೀವ' ಎಂಬ ವಸ್ತುವೇ ಇಲ್ಲ. ಹಾಗಾಗಿ ಅನಿವಾರ್ಯವಾಗಿ ಪರಮಾತ್ಮನಿಗೇನೇ ಅಜ್ಞಾನವನ್ನು ಹೇಳಬೇಕು.

ಆಗಲಿ ಪರಮಾತ್ಮನಿಗೇನೇ ಅಜ್ಞಾನವನ್ನು ಹೇಳೋಣ ಎಂದರೆ, ಅದೂ ಸರಿಯಲ್ಲ. ಏಕೆಂದರೆ ಆ ಪರಮಾತ್ಮನು ಸರ್ವಜ್ಞನಾದ್ದರಿಂದ (ಸಮಾನಾಶ್ರಯ-ಸಮಾನವಿಷಯಕ ಜ್ಞಾನ-ಅಜ್ಞಾನಗಳಲ್ಲಿ ವಿರೋಧ ಇರುವುದರಿಂದ ಪ್ರಕೃತ ಈಶ್ವರಜ್ಞಾನವು ಸರ್ವವಿಷಯಕವಾಗಿರುವುದರಿಂದ) ಪರಮಾತ್ಮನಿಗೆ ಯಾವ ವಿಷಯದಲ್ಲಿಯೂ ಅಜ್ಞಾನವು ಸಂಭವಿಸುವುದಿಲ್ಲ.

ಆದ್ದರಿಂದ ಅಜ್ಞಾನ ಇರಬೇಕಾದರೆ ಆಶ್ರಯ-ವಿಷಯಗಳು ಇರಬೇಕು. ಅಂದರೆ ಅಜ್ಞಾನಕ್ಕೆ ಆಶ್ರಯ-ವಿಷಯಗಳು ವ್ಯಾಪಕವಾಗಿವೆ. ಪ್ರಕೃತ ವ್ಯಾಪಕವಾದ ಆಶ್ರಯ-ವಿಷಯಗಳು ಇಲ್ಲವಾದ್ದರಿಂದ ವ್ಯಾಪ್ಯವಾದ ಅಜ್ಞಾನವೂ ಕೂಡುವುದಿಲ್ಲ ಎಂದು ಭಾವ.

**ಅವತಾರಿಕೆ :-** ''ಪರಮಾತ್ಮನು ಸರ್ವಜ್ಞನಾದ್ದರಿಂದ ಅವನಿಗೆ ಅಜ್ಞಾನವು (ಅಜ್ಞಾನಾಶ್ರಯತ್ವವು) ಕೂಡುವುದಿಲ್ಲ'' ಎಂಬ ನಮ್ಮ ಮಾತಿನ ಮೇಲೆ ಮಾಯಾವಾದಿಗಳು ಆಶಂಕಿಸುತ್ತಾರೆ -

**ಟೀಕಾ :- ನನು ಸರ್ವಜ್ಞಸ್ಯಾಜ್ಞತಾ ನ ಘಟತ ಇತ್ಯತ್ರ[27] ನಾನ್ವಯದೃಷ್ಟಾಂತಃ[28] । ಪರಮಾತ್ಮನಾ ವಿನಾ ಅನ್ಯಸ್ಯ ಸರ್ವಜ್ಞಸ್ಯಾಭಾವಾತ್ । ನಾಪಿ ವ್ಯತಿರೇಕ-ದೃಷ್ಟಾಂತಃ[29] । ಅಜ್ಞಾನಾಶ್ರಯಸ್ಯಾನ್ಯಸ್ಯ[30] ಪರಣೇನಭ್ಯುಪಗಮಾತ್ । ತತ್ ಕಥಮೇತತ್ ? ಇತಿ । ಮೈವಮ್ । 'ಯೋ ಯತ್ರ ಜ್ಞಾನವಾನ್ ನಾಸೌ ತತ್ರಾಜ್ಞಾನವಾನ್' ಇತಿ [31]ಸಾಮಾನ್ಯವ್ಯಾಪ್ತೇರವಿರೋಧಾತ್ ।**

**ಅನುವಾದ :-** 'ಸರ್ವಜ್ಞನಾದ ಪರಮಾತ್ಮನಿಗೆ ಅಜ್ಞಾನವು (ಅಜ್ಞಾನಾಶ್ರಯತ್ವವು) ಕೂಡುವುದಿಲ್ಲ' ಎನ್ನುವಲ್ಲಿ ಅನ್ವಯದೃಷ್ಟಾಂತ (ಅನ್ವಯವ್ಯಾಪ್ತಿಗೆ ದೃಷ್ಟಾಂತ) ಹೇಳಲು ಬರುವುದಿಲ್ಲ. ಕಾರಣ - ಪರಮಾತ್ಮನನ್ನು ಬಿಟ್ಟು ಬೇರೆ ಸರ್ವಜ್ಞನಾದ

---

27) ಪರಮಾತ್ಮಾ ಅಜ್ಞಾನಾಶ್ರಯೋ ನ ಭವತಿ ಸರ್ವಜ್ಞತ್ವಾತ್ ಇತ್ಯನುಮಾನೇ । (ಶ್ರೀನಿ)

28) ಅನ್ವಯವ್ಯಾಪ್ತೌ ದೃಷ್ಟಾಂತಃ ನಾಸ್ತೀತ್ಯರ್ಥಃ ।। (ಶ್ರೀನಿ)

''ವ್ಯಾಪ್ತಿಗ್ರಹಣಸ್ಥಲಂ ದೃಷ್ಟಾಂತಃ । ಸ ದ್ವಿವಿಧಃ । ಸಾಧರ್ಮ್ಯದೃಷ್ಟಾಂತೋ ವೈಧರ್ಮ್ಯದೃಷ್ಟಾಂತಶ್ಚೇತಿ । ತತ್ರ ಅನ್ವಯವ್ಯಾಪ್ತಿಗ್ರಹಣಸ್ಥಲಂ ಸಾಧರ್ಮ್ಯದೃಷ್ಟಾಂತಃ । ಯಥಾ ಧೂಮಾನುಮಾನೇ ಮಹಾನಸಃ ।।'' (ಪ್ರಮಾಣಪದ್ಧತಿ)

29) ವ್ಯತಿರೇಕವ್ಯಾಪ್ತಾವಪಿ ದೃಷ್ಟಾಂತೋ ನಾಸ್ತೀತ್ಯರ್ಥಃ । (ಶ್ರೀನಿ)

''ವ್ಯತಿರೇಕವ್ಯಾಪ್ತಿಗ್ರಹಣಸ್ಥಲಂ ವೈಧರ್ಮ್ಯದೃಷ್ಟಾಂತಃ । ಯಥಾ ತತ್ರೈವ ಮಹಾಹ್ರದ ಇತಿ ।'' (ಪ್ರಮಾಣಪದ್ಧತಿ)

30) ಅನ್ಯಸ್ಯೇತಿ । ಪರಮಾತ್ಮಾತಿರಕ್ತಸ್ಯೇತ್ಯರ್ಥಃ । ಜಡಸ್ಯ ಜೀವಸ್ಯ ಚ ಅಜ್ಞಾನಕಲ್ಪಿತತ್ವೇನ ಅಜ್ಞಾನಾಶ್ರಯತ್ವಾಯೋಗಾತ್ । ಯಥೋಕ್ತಮ್ -

ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ ।
ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ।

ಇತಿ । ತಥಾ ಚಾಜ್ಞಾನಸಿದ್ಧೌ ತತ್ಕಲ್ಪಿತಜೀವಾದಿಸಿದ್ಧಿಃ । ತತ್ಸಿದ್ಧೌ ಚ ತದಾಶ್ರಿತಾಜ್ಞಾನಸಿದ್ಧಿ-ರಿತ್ಯನ್ಯೋನ್ಯಾಶ್ರಯಾದಿತಿ ಭಾವಃ । (ಶ್ರೀನಿ)

31) ಸಾಮಾನ್ಯವ್ಯಾಪ್ತೇರಿತಿ । ಸಾಮಾನ್ಯವ್ಯಾಪ್ತೌ ಚ ಘಟಾದಿಜ್ಞಾನವಾನ್ ದೇವದತ್ತೋ ದೃಷ್ಟಾಂತಃ । ತಥಾ ಚ ಸಾಮಾನ್ಯವ್ಯಾಪ್ತಿಮೂಲಕಮಿದಂ ಸಾಮಾನ್ಯತೋ ದೃಷ್ಟಾನುಮಾನಮಿತಿ ಭಾವಃ । (ಶ್ರೀನಿ)

ವ್ಯಕ್ತಿ ಯಾರೂ ಇಲ್ಲವಾದ್ದರಿಂದ. ಇನ್ನು ವ್ಯತಿರೇಕದೃಷ್ಟಾಂತವನ್ನೂ (ವ್ಯತಿರೇಕವ್ಯಾಪ್ತಿಗೆ ದೃಷ್ಟಾಂತವನ್ನೂ) ಹೇಳಲು ಬರುವುದಿಲ್ಲ. ಕಾರಣ - ಪರಮಾತ್ಮನನ್ನು ಬಿಟ್ಟು ಅಜ್ಞಾನಕ್ಕೆ ಆಶ್ರಯನಾದ ಬೇರೆ ವ್ಯಕ್ತಿಯನ್ನು ಪರರು ಅಂಗೀಕರಿಸಿಲ್ಲವಾದ್ದರಿಂದ. ಆದ್ದರಿಂದ ''ಸರ್ವಜ್ಞನಾದ ಪರಮಾತ್ಮನಿಗೆ ಅಜ್ಞಾನವು ಕೂಡುವುದಿಲ್ಲ '' ಎಂದು ಹೇಗೆ ಹೇಳುತ್ತೀರಿ ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ''ಯಾವನು ಯಾವ ವಿಷಯದಲ್ಲಿ ಜ್ಞಾನ ಉಳ್ಳವನಾಗಿರುವನೋ ಅವನು ಆ ವಿಷಯದಲ್ಲಿ ಅಜ್ಞಾನ ಉಳ್ಳವನಾಗಿರುವುದಿಲ್ಲ'' ಎಂಬುದಾಗಿ ಸಾಮಾನ್ಯವ್ಯಾಪ್ತಿಯನ್ನು ಹೇಳುವುದರಿಂದ ಯಾವ ವಿರೋಧವೂ ಬರುವುದಿಲ್ಲ.

**ವಿವರಣೆ :-** ಪರಮಾತ್ಮನು ಸರ್ವಜ್ಞನಾದ್ದರಿಂದ ಅವನಿಗೆ ಅಜ್ಞಾನವು ಕೂಡುವುದಿಲ್ಲ ಎಂದು ಹೇಳುವುದಾದರೆ -

**''ಪರಮಾತ್ಮಾ, ಅಜ್ಞಾನಾಶ್ರಯೋ ನ ಭವತಿ, ಸರ್ವಜ್ಞತ್ವಾತ್ ।''**

ಎಂಬುದಾಗಿ ಅನುಮಾನ ಹೇಳಿದಂತಾಗುತ್ತದೆ. ಆದರೆ ಈ ಅನುಮಾನ ಸರಿಯಲ್ಲ. ಏಕೆಂದರೆ :- ಇಲ್ಲಿ ಅನ್ವಯದೃಷ್ಟಾಂತ (ಅನ್ವಯವ್ಯಾಪ್ತಿಗೆ ದೃಷ್ಟಾಂತ= ಅನ್ವಯವ್ಯಾಪ್ತಿಗ್ರಹಣಸ್ಥಳ) ಹೇಳುತ್ತೀರೋ ? ಅಥವಾ ವ್ಯತಿರೇಕದೃಷ್ಟಾಂತ (ವ್ಯತಿರೇಕವ್ಯಾಪ್ತಿಗೆ ದೃಷ್ಟಾಂತ=ವ್ಯತಿರೇಕವ್ಯಾಪ್ತಿಗ್ರಹಣ ಸ್ಥಳ) ಹೇಳುತ್ತೀರೋ ?

**ಅನ್ವಯದೃಷ್ಟಾಂತ ಇಲ್ಲ**

'ಯಃ ಸರ್ವಜ್ಞಃ ಸಃ ಅಜ್ಞಾನಾಶ್ರಯೋ ನ ಭವತಿ' (ಯಾವನು ಸರ್ವಜ್ಞನೋ ಅವನು ಅಜ್ಞಾನಾಶ್ರಯನಾಗುವುದಿಲ್ಲ) ಎಂಬುದಾಗಿ ಅನ್ವಯವ್ಯಾಪ್ತಿ ಹೇಳಲು ದೃಷ್ಟಾಂತ ಸಿಗುವುದಿಲ್ಲ. ಕಾರಣ ಪರಮಾತ್ಮ ಒಬ್ಬನೇ ಸರ್ವಜ್ಞನಾದವನು. ಪರಮಾತ್ಮನನ್ನು ಬಿಟ್ಟು ಬೇರೆ ಸರ್ವಜ್ಞವ್ಯಕ್ತಿ ಯಾರೂ ಇಲ್ಲ. ಸರ್ವಜ್ಞನಾಗಿರುವ ಪರಮಾತ್ಮನಾದರೋ ಇಲ್ಲಿ ಪಕ್ಷವಾಗಿಬಿಟ್ಟಿದ್ದಾನೆ. ಪಕ್ಷದಿಂದ ಭಿನ್ನವಾದದ್ದು ದೃಷ್ಟಾಂತವಾಗಬೇಕು. ಹಾಗಾಗಿ 'ಯಾವನು ಸರ್ವಜ್ಞನೋ ಅವನು ಅಜ್ಞಾನಕ್ಕೆ ಆಶ್ರಯನಾಗುವುದಿಲ್ಲ' ಎಂಬ ಅನ್ವಯವ್ಯಾಪ್ತಿಗೆ ಪರಮಾತ್ಮನಿಂದ ಭಿನ್ನವಾದ ದೃಷ್ಟಾಂತ ಇಲ್ಲವಾದ್ದರಿಂದ ಇಲ್ಲಿ ಅನ್ವಯದೃಷ್ಟಾಂತ ಹೇಳಲು ಬರುವುದಿಲ್ಲ.

**ವ್ಯತಿರೇಕದೃಷ್ಟಾಂತವೂ ಇಲ್ಲ**

ಇನ್ನು 'ಯತ್ರ ಅಜ್ಞಾನಾಶ್ರಯತ್ವಂ ತತ್ರ ಸರ್ವಜ್ಞತ್ವಾಭಾವಃ' (ಯಾವನು ಅಜ್ಞಾನಕ್ಕೆ ಆಶ್ರಯನಾಗಿರುವನೋ ಅವನು ಸರ್ವಜ್ಞನಲ್ಲ) ಎಂಬುದಾಗಿ ವ್ಯತಿರೇಕವ್ಯಾಪ್ತಿ ಹೇಳಲೂ ದೃಷ್ಟಾಂತ ಸಿಗುವುದಿಲ್ಲ. ಕಾರಣ - ನಮ್ಮ ಮತದಲ್ಲಿ (ಮಾಯಾವಾದಮತದಲ್ಲಿ) ಪರಮಾತ್ಮ ಒಬ್ಬನೇ ಅಜ್ಞಾನಕ್ಕೆ ಆಶ್ರಯನಾದವನು. ಪರಮಾತ್ಮನನ್ನು ಬಿಟ್ಟು ಅಜ್ಞಾನಕ್ಕೆ ಆಶ್ರಯವಾದ ಇನ್ನೊಂದು ವಸ್ತು ಯಾವುದೂ ಇಲ್ಲ.

ಜಡವಾದ ಜಗತ್ತು ಅಥವಾ ಜೀವರು ಇದ್ದಾರಲ್ಲ ? ಎಂದರೆ, ಆ ಜಡವಾದ ಜಗತ್ತಾಗಲೀ, ಜೀವರಾಗಲೀ ಅಜ್ಞಾನಕಲ್ಪಿತವಾದ್ದರಿಂದ

**ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ ।**
**ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ॥**

ಎಂಬುದಾಗಿ ಹೇಳಿದ ಪ್ರಕಾರ ಅಜ್ಞಾನಕ್ಕೆ ಆಶ್ರಯ ಅಥವಾ ವಿಷಯ ಆಗಬೇಕಾದರೆ ಅದು ನಿರ್ವಿಶೇಷಚಿತ್ (ನಿರ್ಗುಣ ಪರಬ್ರಹ್ಮ) ಆಗುತ್ತದೆಯೇ ಹೊರತು ಅಜ್ಞಾನಕಲ್ಪಿತವಾದ ಜಗತ್ತು ಅಥವಾ ಜೀವರು ಎಂದಿಗೂ ಅಜ್ಞಾನಕ್ಕೆ ಆಶ್ರಯವೂ ಆಗುವುದಿಲ್ಲ, ವಿಷಯವೂ ಆಗುವುದಿಲ್ಲ.

ಹಾಗೊಂದುವೇಳೆ ಅಜ್ಞಾನಕಲ್ಪಿತರಾದ ಜೀವಾದಿಗಳು ಅಜ್ಞಾನಕ್ಕೆ ಆಶ್ರಯ ಎಂದು ಅಂಗೀಕರಿಸುವುದಾದರೆ ''ಅಜ್ಞಾನವು ಸಿದ್ಧವಾದರೆ ಆ ಅಜ್ಞಾನದಿಂದ ಕಲ್ಪಿತರಾದ ಜೀವಾದಿಗಳು ಸಿದ್ಧರಾಗುತ್ತಾರೆ. ಅಜ್ಞಾನಕಲ್ಪಿತರಾದ ಜೀವಾದಿಗಳು ಸಿದ್ಧರಾದರೆ ಅವರಲ್ಲಿ ಆಶ್ರಿತವಾದ ಅಜ್ಞಾನವು ಸಿದ್ಧವಾಗುತ್ತದೆ'' ಈ ರೀತಿಯಾಗಿ ಅನ್ಯೋನ್ಯಾಶ್ರಯ ಬರಬೇಕಾಗುತ್ತದೆ.

ಆದ್ದರಿಂದ ಪರಮಾತ್ಮ ಒಬ್ಬನೇ ಅಜ್ಞಾನಕ್ಕೆ ಆಶ್ರಯನಾದವನು. ಪ್ರಕೃತ ಆ ಪರಮಾತ್ಮ ಪಕ್ಷನಾಗಿಬಿಟ್ಟಿದ್ದಾನೆ. ಹಾಗಾಗಿ ಪಕ್ಷದಿಂದ ಭಿನ್ನವಾದ, ಅಜ್ಞಾನಕ್ಕೆ ಆಶ್ರಯವಾದ ಮತ್ತೊಂದು ವಸ್ತುವೇ ಇಲ್ಲವಾದ್ದರಿಂದ ''ಯಾವನು ಅಜ್ಞಾನಕ್ಕೆ ಆಶ್ರಯನಾಗಿರುವನೋ ಅವನು ಸರ್ವಜ್ಞನಲ್ಲ'' ಎಂಬ ವ್ಯತಿರೇಕವ್ಯಾಪ್ತಿಗೆ ದೃಷ್ಟಾಂತ ಇಲ್ಲವಾದ್ದರಿಂದ ಇಲ್ಲಿ ವ್ಯತಿರೇಕದೃಷ್ಟಾಂತವನ್ನೂ ಹೇಳಲು ಬರುವುದಿಲ್ಲ.

ಅಂದಮೇಲೆ ನಿಮ್ಮ ಈ ಅನುಮಾನದಲ್ಲಿ ದೃಷ್ಟಾಂತವೇ ಇಲ್ಲವಾದ್ದರಿಂದ ವ್ಯಾಪ್ತಿಗ್ರಹಣವು ಸಾಧ್ಯವಿಲ್ಲದ ಕಾರಣ, ವ್ಯಾಪ್ತಿಗ್ರಹಣಸಾಪೇಕ್ಷಪ್ರಮಿತಿಸಾಧಕತ್ವ ಇಲ್ಲವಾದ್ದರಿಂದ, ನಿಮ್ಮ ಅನುಮಾನವು ವಿರುದ್ಧವಾಯಿತು ಎಂದು ಶಂಕೆ ಬಂದರೆ, ಅದು ಸರಿಯಲ್ಲ.

**ವಿಶೇಷವ್ಯಾಪ್ತಿ ಇಲ್ಲದಿದ್ದರೂ ಸಾಮಾನ್ಯವ್ಯಾಪ್ತಿ ಇದ್ದೇ ಇದೆ**

ಏಕೆಂದರೆ :- ನಮ್ಮ ಈ ಅನುಮಾನದಲ್ಲಿ 'ಯಃ ಸರ್ವಜ್ಞಃ ಸಃ ಅಜ್ಞಾನಾಶ್ರಯೋ ನ ಭವತಿ' ಎಂಬುದಾಗಿ ವಿಶೇಷವ್ಯಾಪ್ತಿಯನ್ನು ಹೇಳಲು ಬರದಿದ್ದರೂ (ಈ ವಿಶೇಷವ್ಯಾಪ್ತಿಗೆ ದೃಷ್ಟಾಂತ ಸಿಗದಿದ್ದರೂ) ಸಹ

**'ಯಃ ಯತ್ರ ಜ್ಞಾನವಾನ್ ನಾಸೌ ತತ್ರ ಅಜ್ಞಾನವಾನ್'** (ಯಾವನು ಯಾವ ವಿಷಯದಲ್ಲಿ ಜ್ಞಾನ ಉಳ್ಳವನಾಗಿರುವನೋ ಅವನು ಆ ವಿಷಯದಲ್ಲಿ ಅಜ್ಞಾನ ಉಳ್ಳವನಾಗಿರುವುದಿಲ್ಲ. ಉದಾ :- ದೇವದತ್ತನು ಘಟವಿಷಯದಲ್ಲಿ ಜ್ಞಾನ ಉಳ್ಳವನಾಗಿರುವುದರಿಂದ ಅವನು ಘಟವಿಷಯದಲ್ಲಿ ಅಜ್ಞಾನ ಉಳ್ಳವನಾಗಿಲ್ಲ.)

ಎಂಬುದಾಗಿ ಸಾಮಾನ್ಯವ್ಯಾಪ್ತಿಯನ್ನು ಹೇಳಲು ಬರುತ್ತದೆಯಾದ್ದರಿಂದ (ಆ ಸಾಮಾನ್ಯವ್ಯಾಪ್ತಿಗೆ ಘಟಾದಿಜ್ಞಾನ ಉಳ್ಳ ದೇವದತ್ತನು ದೃಷ್ಟಾಂತನಾಗಿರುವುದರಿಂದ) ಅನುಮಾನಕ್ಕೆ ವಿರೋಧದೋಷ ಬರುವುದಿಲ್ಲ ಎಂದು ಅಭಿಪ್ರಾಯ.

**-: ವಿಶೇಷ ವಿಚಾರ :-**

ಅನುಮಾನವು ಎರಡುವಿಧವಾಗಿದೆ -

1) ದೃಷ್ಟಾನುಮಾನ 2) ಸಾಮಾನ್ಯತೋ ದೃಷ್ಟಾನುಮಾನ

**1) ದೃಷ್ಟಾನುಮಾನ ನಿರೂಪಣೆ**

''ಯಥಾಭೂತಯೋಃ ವ್ಯಾಪ್ತಿಗ್ರಹಣಂ ತಥಾಭೂತಯೋರೇವ ಲಿಂಗಲಿಂಗಿಭಾವೇ ದೃಷ್ಟಮ್ । ಯಥಾ ಧೂಮಾಗ್ನ್ಯೋಃ ॥''

(ಪ್ರಮಾಣಪದ್ಧತಿ - ಅನುಮಾನಪರಿಚ್ಛೇದ)

''ಯದ್ಧರ್ಮಾವಚ್ಛಿನ್ನಯೋಃ ವ್ಯಾಪ್ಯವ್ಯಾಪಕಭಾವಃ ತದ್ಧರ್ಮಪುರಸ್ಕಾರೇಣೈವ ಸಾಧ್ಯಸಾಧನಭಾವೇ ದೃಷ್ಟಾನುಮಾನಮಿತ್ಯರ್ಥಃ ॥''(ಶ್ರೀವೇದೇಶತೀರ್ಥವ್ಯಾಖ್ಯಾ)

ಯಾವ ಧರ್ಮದಿಂದ ಕೂಡಿದವುಗಳಲ್ಲಿ ವ್ಯಾಪ್ಯವ್ಯಾಪಕಭಾವ ಇರುತ್ತದೆಯೋ ಆ ಧರ್ಮಪುರಸ್ಕಾರವಾಗಿಯೇ ಲಿಂಗ-ಲಿಂಗಿಭಾವ ಇರುವುದಾದರೆ ಅದು ದೃಷ್ಟಾನುಮಾನ. ಉದಾ :-

**''ಪರ್ವತೋ ವಹ್ನಿಮಾನ್ ಧೂಮಾತ್ ।''**

ಎನ್ನುವಲ್ಲಿ ಧೂಮತ್ವ-ವಹ್ನಿತ್ವ ಧರ್ಮಗಳಿಂದ ಕೂಡಿದ ಧೂಮ-ವಹ್ನಿಗಳಲ್ಲಿ ವ್ಯಾಪ್ಯವ್ಯಾಪಕಭಾವ ಇದೆ (ಯತ್ರ ಧೂಮಃ ತತ್ರ ವಹ್ನಿಃ ಎಂದು ವ್ಯಾಪ್ತಿ ಹೇಳುವುದರಿಂದ ಧೂಮವು ವ್ಯಾಪ್ಯ, ವಹ್ನಿಯು ವ್ಯಾಪಕವಾಗಿದೆ). ಅಂತಹ ಧೂಮತ್ವ-ವಹ್ನಿತ್ವ ಧರ್ಮಗಳಿಂದ ಕೂಡಿದ ಧೂಮ-ವಹ್ನಿಗಳಲ್ಲಿಯೇ ಲಿಂಗ-ಲಿಂಗಿಭಾವ ಇರುವುದರಿಂದ (ಅಂದರೆ ವ್ಯಾಪ್ಯವಾದ ಧೂಮವೇ ಲಿಂಗವಾದ್ದರಿಂದ ಮತ್ತು ವ್ಯಾಪಕವಾದ ವಹ್ನಿಯೇ ಲಿಂಗಿಯಾದ್ದರಿಂದ) ಈ ಧೂಮಾನುಮಾನವು ದೃಷ್ಟಾನುಮಾನ ಎನಿಸಿಕೊಳ್ಳುತ್ತದೆ.

**2) ಸಾಮಾನ್ಯತೋ ದೃಷ್ಟಾನುಮಾನ ನಿರೂಪಣೆ**

''ವ್ಯಾಪ್ಯವ್ಯಾಪಕಯೋಃ ಅನ್ಯಾದೃಶತ್ವೇಽಪಿ ತತ್ಸಾಮಾನ್ಯಾಕಾರಾನುಗಮೇನ ಲಿಂಗಲಿಂಗಿಭಾವೇ ಸಾಮಾನ್ಯತೋ ದೃಷ್ಟಮ್ । ಯಥಾ ಕೃಷೀವಲಸ್ಯ ಕರ್ಷಣಾದಿ-ಪ್ರವೃತ್ತೇಃ ಧಾನ್ಯಾದಿಫಲವತ್ತ್ವದರ್ಶನೇನ ಯಜ್ಞಾದೇಃ ಸ್ವರ್ಗಾದಿಫಲಾನುಮಾನಮ್ । ಪ್ರೇಕ್ಷಾವತ್ಪ್ರವೃತ್ತಿತ್ವಫಲವತ್ತ್ವಸಾಮಾನ್ಯಾನುಗಮಾತ್ ।''

(ಪ್ರಮಾಣಪದ್ಧತಿ - ಅನುಮಾನಪರಿಚ್ಛೇದ)

''ಯದ್ಧರ್ಮಪುರಸ್ಕಾರೇಣ ಸಾಧ್ಯಸಾಧನಭಾವಃ ತದ್ಧರ್ಮಭಿನ್ನ-ಧರ್ಮಾವಚ್ಛಿನ್ನತ್ವೇ ಇತ್ಯರ್ಥಃ । ಏವಂ ಚ ಯದ್ಧರ್ಮಪುರಸ್ಕಾರೇಣ ವ್ಯಾಪ್ತಿಗ್ರಹಃ ತದ್ಧರ್ಮಭಿನ್ನಧರ್ಮಪುರಸ್ಕಾರೇಣ ಲಿಂಗಲಿಂಗಿಭಾವೇ ಸಾಮಾನ್ಯತೋ ದೃಷ್ಟಮಿತ್ಯರ್ಥಃ । ಅತ್ರೇತ್ಥಂ ಪ್ರಯೋಗಃ । ಯಜ್ಞಾದಿಕಂ ಸ್ವರ್ಗಫಲವತ್ ಪ್ರೇಕ್ಷಾವದ್ಯಜಮಾನಪ್ರವೃತ್ತಿಮತ್ತ್ವಾತ್ । ಯತ್ ಪ್ರೇಕ್ಷಾವತ್ಪ್ರವೃತ್ತಿಮತ್ ತತ್ ಫಲವತ್ । ಯಥಾ ಕರ್ಷಣಾದಿಕಮಿತಿ । ಯಜ್ಞಾದೇಃ ಪ್ರವೃತ್ತಿಮತ್ತ್ವಂ ಚ ವಿಷಯತ್ವೇನೇತಿ ಜ್ಞಾತವ್ಯಮ್ ।''

-(ಶ್ರೀವೇದೇಶತೀರ್ಥವ್ಯಾಖ್ಯಾ)

ಇನ್ನು ಯಾವ ಧರ್ಮಪುರಸ್ಕಾರವಾಗಿ ವ್ಯಾಪ್ತಿಗ್ರಹ ಆಗುತ್ತದೆಯೋ ಆ ಧರ್ಮದಿಂದ ಭಿನ್ನವಾದ ಧರ್ಮಪುರಸ್ಕಾರವಾಗಿ ಲಿಂಗ-ಲಿಂಗಿಭಾವ ಇರುವುದಾದರೆ ಅದು ಸಾಮಾನ್ಯತೋ ದೃಷ್ಟಾನುಮಾನ. ಉದಾ :-

**''ಯಜ್ಞಾದಿಕಂ ಸ್ವರ್ಗಫಲವತ್ ಪ್ರೇಕ್ಷಾವದ್ಯಜಮಾನಪ್ರವೃತ್ತಿಮತ್ವಾತ್ ।''**

ಎನ್ನುವಲ್ಲಿ 'ಯತ್ ಪ್ರೇಕ್ಷಾವತ್ಪ್ರವೃತ್ತಿಮತ್ ತತ್ ಸಫಲಂ ಯಥಾ ಕರ್ಷಣಾದಿಕಂ' ಎಂಬುದಾಗಿ ಪ್ರೇಕ್ಷಾವತ್ಪ್ರವೃತ್ತಿಮತ್ವ-ಸಫಲತ್ವ ಧರ್ಮಪುರಸ್ಕಾರವಾಗಿ ವ್ಯಾಪ್ತಿಗ್ರಹ ಆಗುತ್ತದೆ. ಆದರೆ ಅದೇ ಧರ್ಮಪುರಸ್ಕಾರವಾಗಿಯೇ ಲಿಂಗ-ಲಿಂಗಿಭಾವ ಇಲ್ಲ. ಕಿಂತು ಪ್ರೇಕ್ಷಾವತ್ಪ್ರವೃತ್ತಿಮತ್ವ-ಸಫಲತ್ವ ಧರ್ಮಗಳಿಂದ ಭಿನ್ನವಾದ ಪ್ರೇಕ್ಷಾವದ್ಯಜಮಾನಪ್ರವೃತ್ತಿಮತ್ವ-ಸ್ವರ್ಗಫಲವತ್ವ ಧರ್ಮಪುರಸ್ಕಾರವಾಗಿ ಲಿಂಗ-ಲಿಂಗಿಭಾವ ಇದೆ.

ಅಂದರೆ :- ಯಾವ ಪ್ರೇಕ್ಷಾವತ್ಪ್ರವೃತ್ತಿಮತ್ವ-ಸಫಲತ್ವ ಧರ್ಮಗಳಲ್ಲಿ ವ್ಯಾಪ್ಯ-ವ್ಯಾಪಕಭಾವ ಇದೆಯೋ ಅಂತಹ ಆ ಎರಡು ಧರ್ಮಗಳಲ್ಲಿಯೇ ಲಿಂಗ-ಲಿಂಗಿಭಾವ ಇಲ್ಲ. ವ್ಯಾಪ್ಯವಾದ ಪ್ರೇಕ್ಷಾವತ್ಪ್ರವೃತ್ತಿಮತ್ವವೇ ಲಿಂಗವಾಗಿಲ್ಲ. ವ್ಯಾಪಕವಾದ ಸಫಲತ್ವವೇ ಲಿಂಗಿ ಆಗಿಲ್ಲ. ಕಿಂತು ಪ್ರೇಕ್ಷಾವತ್ಪ್ರವೃತ್ತಿಮತ್ವ-ಸಫಲತ್ವಗಳಿಂದ ಭಿನ್ನವಾದ, ವ್ಯಾಪ್ಯವ್ಯಾಪಕಗಳಲ್ಲಿರುವ ಸಾಧಾರಣಧರ್ಮದಿಂದ (ವ್ಯಾಪ್ಯತಾವಚ್ಛೇದಕ-ವ್ಯಾಪಕತಾವಚ್ಛೇದಕಧರ್ಮಗಳಿಂದ) ಕೂಡಿದ, ಪ್ರೇಕ್ಷಾವದ್ಯಜಮಾನಪ್ರವೃತ್ತಿಮತ್ವ-ಸ್ವರ್ಗಫಲವತ್ವಗಳಲ್ಲಿ ಲಿಂಗ-ಲಿಂಗಿಭಾವ ಇದೆ. ವ್ಯಾಪ್ಯ-ವ್ಯಾಪಕಗಳಾದ ಧರ್ಮಗಳೇ ಬೇರೆ. ಲಿಂಗ-ಲಿಂಗಿಗಳಾದ ಧರ್ಮಗಳೇ ಬೇರೆ. ಆದ್ದರಿಂದ ಇಂತಹ ಅನುಮಾನವು ಸಾಮಾನ್ಯತೋ ದೃಷ್ಟಾನುಮಾನ ಎನಿಸಿಕೊಳ್ಳುತ್ತದೆ.

ಪ್ರಕೃತದಲ್ಲಿ -

**''ಪರಮಾತ್ಮಾ, ಅಜ್ಞಾನಾಶ್ರಯೋ ನ ಭವತಿ, ಸರ್ವಜ್ಞತ್ವಾತ್ ।''**

ಎಂಬ ನಮ್ಮ ಈ ಅನುಮಾನವು ಎರಡನೇವಿಧವಾದ ಸಾಮಾನ್ಯತೋ ದೃಷ್ಟಾನುಮಾನ ಆಗಿದೆ. ಅಂದರೆ - 'ಯಃ ಸರ್ವಜ್ಞಃ ಸಃ ಅಜ್ಞಾನಾಶ್ರಯೋ ನ ಭವತಿ' ಎಂಬುದಾಗಿ ವಿಶೇಷವ್ಯಾಪ್ತಿಯನ್ನು ಹೇಳಲು ಬರದಿದ್ದರೂ (ಈ ವಿಶೇಷವ್ಯಾಪ್ತಿಗೆ ದೃಷ್ಟಾಂತ ಸಿಗದಿದ್ದರೂ) ಸಹ

**'ಯಃ ಯತ್ರ ಜ್ಞಾನವಾನ್ ನಾಸೌ ತತ್ರ ಅಜ್ಞಾನವಾನ್'** (ಯಾವನು ಯಾವ ವಿಷಯದಲ್ಲಿ ಜ್ಞಾನ ಉಳ್ಳವನಾಗಿರುವನೋ ಅವನು ಆ ವಿಷಯದಲ್ಲಿ ಅಜ್ಞಾನ ಉಳ್ಳವನಾಗಿರುವುದಿಲ್ಲ. ಉದಾ :- ದೇವದತ್ತನು ಘಟವಿಷಯದಲ್ಲಿ ಜ್ಞಾನ ಉಳ್ಳವನಾಗಿರುವುದರಿಂದ ಅವನು ಘಟವಿಷಯದಲ್ಲಿ ಅಜ್ಞಾನ ಉಳ್ಳವನಾಗಿಲ್ಲ.)

ಎಂಬುದಾಗಿ ಸಾಮಾನ್ಯವ್ಯಾಪ್ತಿಯನ್ನು ಹೇಳಲು ಬರುತ್ತದೆ. ಆ ಸಾಮಾನ್ಯವ್ಯಾಪ್ತಿಗೆ ಘಟಾದಿಜ್ಞಾನ ಉಳ್ಳ ದೇವದತ್ತನು ದೃಷ್ಟಾಂತನಾಗಿದ್ದಾನೆ.

ಯಾವ ಸರ್ವಜ್ಞತ್ವ-ಅಜ್ಞಾನಾಶ್ರಯತ್ವಾಭಾವಗಳಲ್ಲಿ ಲಿಂಗ-ಲಿಂಗಿಭಾವ ಇದೆಯೋ ಅವುಗಳಲ್ಲಿಯೇ ವ್ಯಾಪ್ಯ-ವ್ಯಾಪಕಭಾವ ಹೇಳಲಾಗದಿದ್ದರೂ ಸಹ ಸರ್ವಜ್ಞತ್ವ-ಅಜ್ಞಾನಾಶ್ರಯತ್ವಗಳಿಂದ ಭಿನ್ನವಾದ ಜ್ಞಾನವತ್ವ-ಅಜ್ಞಾನಾಶ್ರಯತ್ವಾ-ಭಾವಗಳಲ್ಲಿ ವ್ಯಾಪ್ಯ-ವ್ಯಾಪಕಭಾವ ಹೇಳಲು ಬರುತ್ತದೆಯಾದ್ದರಿಂದ ನಮ್ಮ ಈ ಸರ್ವಜ್ಞತ್ವಾನುಮಾನವು ಸಾಮಾನ್ಯತೋ ದೃಷ್ಟಾನುಮಾನವಾಗಿದೆ.

ಆದ್ದರಿಂದ ಅನುಮಾನಕ್ಕೆ ವಿರೋಧದೋಷ ಬರುವುದಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** 'ಪರಮಾತ್ಮಾ, ಅಜ್ಞಾನಾಶ್ರಯೋ ನ ಭವತಿ ಸರ್ವಜ್ಞತ್ವಾತ್' ಎಂಬುದಾಗಿ ಅನುಮಾನ ಮಾಡುವುದು ಸರಿಯಲ್ಲ. ಏಕೆಂದರೆ - ಸರ್ವಜ್ಞನಾದ್ದರಿಂದ ಅಜ್ಞಾನ ಇಲ್ಲ ಎಂದು ಹೇಳುವುದಲ್ಲ. ಕಿಂತು ಸರ್ವಜ್ಞ-ನಾದ್ದರಿಂದಲೇ ಅಜ್ಞಾನ ಇದೆ ಎಂದು ಹೇಳಬೇಕು. ಅಂದರೆ ಸರ್ವಜ್ಞತ್ವಹೇತುವು ಅಜ್ಞಾನಾಶ್ರಯತ್ವಾಭಾವ ಎಂಬ ಸಾಧ್ಯದಿಂದ ವ್ಯಾಪ್ತವಾಗಿಲ್ಲ. ಕಿಂತು ಸಾಧ್ಯಾಭಾವದಿಂದ=ಅಜ್ಞಾನಾಶ್ರಯತ್ವಾಭಾವಾಭಾವದಿಂದ (ಅಜ್ಞಾನಾಶ್ರಯತ್ವ-ದಿಂದ) ವ್ಯಾಪ್ತವಾಗಿದೆ. ಆದ್ದರಿಂದ ನಿಮ್ಮ ಅನುಮಾನವು ವಿರೋಧದೋಷ ಉಳ್ಳದ್ದಾಯಿತು ಎಂಬುದಾಗಿ ಶಂಕಿಸುತ್ತಾರೆ (ಸರ್ವಜ್ಞನಾದ್ದರಿಂದಲೇನೇ ಅಜ್ಞಾನ ಇದೆ ಎಂಬುದನ್ನು ತೋರಿಸಿಕೊಡುತ್ತಾರೆ) :-

**ಟೀಕಾ :- ನನು ಸರ್ವಂ ಹಿ ಯೋ ಜಾನಾತಿ ಸ ಸರ್ವಜ್ಞಃ । ತಿಸ್ರಶ್ಚಾಸ್ಯ ವಿಧಾಃ ಸಂಭವಂತಿ । [32]ಪ್ರಮಾಣತೋ ವಾ ಸರ್ವಂ ಜಾನೀಯಾತ್ [33]ಭ್ರಾಂತ್ಯಾ**

---

32) ಅಂತಃಕರಣವೃತ್ತ್ಯಾ ಇತ್ಯರ್ಥಃ । ತಸ್ಯಾ ಏವ ತನ್ಮತೇ ಪ್ರಮಾಣತ್ವೇನ ವ್ಯವಹಾರಾದಿತಿ ಭಾವಃ । (ಶ್ರೀನಿ)

33) ತಥಾ ಚ ಸರ್ವವಿಷಯಕಂ ಜ್ಞಾನಂ ಭ್ರಮರೂಪಮಿತ್ಯಾಶಯಃ ।

ವಾ ಸ್ವಭಾವಸಿದ್ಧಯಾ ಪ್ರಜ್ಞಯಾ ವಾ । ನ ಚೈತಾ ವಿಧಾ ವಿನಾ ಅಜ್ಞಾನೇನೋ-ಪಪದ್ಯಂತೇ ।[34] ಕೂಟಸ್ಥಸ್ಯ ಅಜ್ಞಾನಾದೃತೇ ಪ್ರಮಾತೃತ್ವಾಯೋಗಾತ್ । ಭ್ರಾಂತೇಶ್ಚ ಅಜ್ಞಾನಕಾರ್ಯತ್ವಾತ್ । ಸ್ವರೂಪಪ್ರಜ್ಞಾಯಾಶ್ಚ ನಾಂತರೇಣಾಜ್ಞಾನಮಶೇಷಾರ್ಥ-ಸಂಗತಿಃ[35] । ಅಸಂಗತ್ವಾತ್ । 'ಅಸಂಗೋ ಹ್ಯಯಂ ಪುರುಷಃ' ಇತಿ ಶ್ರುತೇಃ । ಅತಃ ಸರ್ವಜ್ಞತಾಽಪ್ಯಜ್ಞಾನವತ್ತಾಮಾಕ್ಷಿಪತ್ಯೇವ[36] ಪರಮಾತ್ಮನೋ, ನ ಪ್ರತಿಕ್ಷಿಪತೀತಿ ।

ಮೈವಮ್ । ಮಾ ಭೂತ್ ಪ್ರಮಾಣೇನ ಮಾ ಚ ಭೂತ್ ಭ್ರಾಂತ್ಯಾ, ಸ್ವರೂಪಜ್ಞಾನೇನೈವ ಪರಮಾತ್ಮನಃ ಸರ್ವಜ್ಞತಾಂಗೀಕಾರಾತ್ । ಅಸಂಗತ್ವಂ ತು [37]ತತ್ಕೃತಫಲಲೇಪಾಭಾವಮಾತ್ರಮ್ । ನ ಚ ಸಂಬಂಧವಿರಹ ಏವ । 'ಯಥಾಽಕಾಶಸ್ಥಿತೋ ನಿತ್ಯಂ ವಾಯುಃ' ಇತ್ಯಾದಿ[38] ತಥಾವಿಧದೃಷ್ಟಾಂತೋ-ಪಾದಾನಾತ್ ।

ತದಿದಮುಕ್ತಂ 'ಅಖಿಲಸಂವೇತ್ತುಃ' ಇತಿ । ಅತ್ರ 'ಸಮ್' ಇತ್ಯುಪಸರ್ಗೇಣ ಭ್ರಾಂತ್ಯಾ ಸರ್ವಜ್ಞತಾಂ ವಾರಯತಿ[39], [40]ತಾಚ್ಛೀಲಕತೃನ್‌ಪ್ರತ್ಯಯೇನ ಪ್ರಮಾಣಜನ್ಯತಾಮಿತಿ ಸ್ವಭಾವಜ್ಞಾನೇನೈವೋಕ್ತಾ[41] ಭವತಿ ।

---

34) ನಿರ್ವಿಕಾರಸ್ಯ ಇತ್ಯರ್ಥಃ । ಕೂಟಂ ಅವ್ಯಾಕೃತಾಕಾಶಃ, ತದ್ವತ್ ಸ್ಥಿತಃ ಕೂಟಸ್ಥಃ । ಸಾದೃಶ್ಯಂ ಚ ನಿರ್ವಿಕಾರತ್ವೇನೇತಿ ಕೂಟಸ್ಥಶಬ್ದೇನ ನಿರ್ವಿಕಾರತ್ವಂ ಲಭ್ಯತ ಇತಿ ಜ್ಞಾತವ್ಯಮ್ ॥ (ಶ್ರೀನಿ)

35) ಸಮಸ್ತಪದಾರ್ಥಸಂಬಂಧಃ ।

36) ಸರ್ವಜ್ಞತಾ ಅಜ್ಞಾನವತ್ತಾಂ ಸಾಧಯತ್ಯೇವ, ನ ನಿಷೇಧತೀತ್ಯರ್ಥಃ ।

37) ಶುಭಾಶುಭಪದಾರ್ಥಸಂಬಂಧಕೃತಪುಣ್ಯಪಾಪರೂಪಫಲಲೇಪಾಭಾವ ಏವ ಇತ್ಯರ್ಥಃ । (ಶ್ರೀನಿ)

38) ಲೇಪಾಭಾವರೂಪಾಸಂಗತ್ವೋಪೇತವಾಯುರೂಪದೃಷ್ಟಾಂತೇತ್ಯರ್ಥಃ ।

39) ಸಮಿತ್ಯುಪಸರ್ಗೇಣ ವೇದನಸ್ಯ ಪ್ರಮಾಣರೂಪತಯಾ ಉಕ್ತತ್ವಾದಿತಿ ಭಾವಃ। (ಶ್ರೀನಿ)

40) ತಾಚ್ಛೀಲಿಕತೃನ್‌ಪ್ರತ್ಯಯಾಂತೇನ ಸಂವೇತೃಶಬ್ದೇನ ।

41) ಇತ್ಯೇವಂ ಪ್ರಮಾಣಜ್ಞಾನೇನ ಭ್ರಾಂತ್ಯಾ ಚ ಸರ್ವಜ್ಞತ್ವೇ ನಿರಾಕೃತೇ ಸತಿ ಸ್ವರೂಪಪ್ರಜ್ಞಯೈವ ಸರ್ವಜ್ಞತಾ ಉಕ್ತಾ ಭವತಿ ಇತ್ಯರ್ಥಃ ।

**ಅನುವಾದ :-** ಎಲ್ಲವನ್ನೂ ಯಾವನು ತಿಳಿಯುತ್ತಾನೆಯೋ ಅವನು ಸರ್ವಜ್ಞ. ಈ ವಿಧವಾದ ಸರ್ವಜ್ಞತ್ವವು ಮೂರುವಿಧವಾಗಿ ಸಂಭವಿಸುತ್ತದೆ. ಪರಮಾತ್ಮನು ಸರ್ವಜ್ಞ ಎಂದರೆ, ಪರಮಾತ್ಮನ ಜ್ಞಾನವು ಸರ್ವವಿಷಯಕವಾಗಿದೆ ಎಂದರ್ಥ. ಈ ಪರಮಾತ್ಮನ ಸರ್ವವಿಷಯಕಜ್ಞಾನವು ಪ್ರಮಾಣರೂಪವಾಗಿದೆ ಎಂದು ಹೇಳುತ್ತೀರೋ ? ಅಥವಾ ಭ್ರಾಂತಿರೂಪವಾಗಿದೆ ಎಂದು ಹೇಳುತ್ತೀರೋ ? ಅಥವಾ ಸ್ವಭಾವಸಿದ್ಧವಾದ ಪ್ರಜ್ಞಾರೂಪವಾಗಿದೆ ಎಂದು ಹೇಳುತ್ತೀರೋ ?

ಈ ಮೂರೂ ವಿಧಗಳೂ ಸಹ ಅಜ್ಞಾನವಿಲ್ಲದೇ ಉಪಪನ್ನವಾಗುವುದಿಲ್ಲ. ಏಕೆಂದರೆ- ಕೂಟಸ್ಥನಾದ (ನಿರ್ವಿಕಾರನಾದ) ಪರಮಾತ್ಮನಿಗೆ ಅಜ್ಞಾನವಿಲ್ಲದೇ ಪ್ರಮಾತೃತ್ವ ಕೂಡುವುದಿಲ್ಲ. ಇನ್ನು ಭ್ರಾಂತಿಯಾದರೂ ಅಜ್ಞಾನದ ಕಾರ್ಯವೇ ಆಗಿದೆ. ಇನ್ನು ಸ್ವರೂಪಪ್ರಜ್ಞೆಗಾದರೂ ಅಜ್ಞಾನವಿಲ್ಲದೇ ಸಮಸ್ತಪದಾರ್ಥಸಂಬಂಧವು ಉಂಟಾಗುವುದಿಲ್ಲ. ಕಾರಣ 'ಅಸಂಗೋ ಹ್ಯಯಂ ಪುರುಷಃ' ಎಂದು ಶ್ರುತಿಯಿರುವುದರಿಂದ ಪರಮಾತ್ಮನ ಸ್ವರೂಪಪ್ರಜ್ಞೆಯು ಅಸಂಗವಾಗಿದೆ. ಆದ್ದರಿಂದ ಸರ್ವಜ್ಞತ್ವವು ಪರಮಾತ್ಮನಿಗೆ ಅಜ್ಞಾನವನ್ನು ಸಾಧಿಸುತ್ತದೆಯೇ ಹೊರತು ಅಜ್ಞಾನವನ್ನು ನಿರಾಕರಿಸುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಪರಮಾತ್ಮನಿಗೆ ಪ್ರಮಾಣದಿಂದ ಹಾಗೂ ಭ್ರಾಂತಿಯಿಂದ ಸರ್ವಜ್ಞತ್ವ ಬೇಡ. ಕಿಂತು ಸ್ವರೂಪಜ್ಞಾನದಿಂದಲೇ ಸರ್ವಜ್ಞತ್ವವನ್ನು ಅಂಗೀಕರಿಸುತ್ತೇವೆ. ಶ್ರುತಿಯು ಅಸಂಗತ್ವವನ್ನು ಹೇಳುತ್ತದೆಯಲ್ಲ ? ಎಂದರೆ, ಅಲ್ಲಿ ಅಸಂಗತ್ವ ಎಂದರೆ 'ಯಥಾऽಕಾಶಸ್ಥಿತೋ ನಿತ್ಯಂ ವಾಯುಃ' ಎಂಬುದಾಗಿ ಅಸಂಗತ್ವ ಉಳ್ಳ ವಾಯುವಿನ ದೃಷ್ಟಾಂತ ಕೊಟ್ಟಿರುವುದರಿಂದ, ತತ್ತತ್ಪದಾರ್ಥಕೃತಫಲಲೇಪಾಭಾವವೇ ಆಗಿದೆ. ಹೊರತು ಸಂಬಂಧಶೂನ್ಯತ್ವ ಅಲ್ಲ.

'ಅಖಿಲಸಂವೇತ್ತುಃ' ಎಂಬುದಾಗಿ ಶಬ್ದಪ್ರಯೋಗ ಮಾಡುವ ಮೂಲಕ 'ಸ್ವರೂಪಪ್ರಜ್ಞೆಯಿಂದಲೇ ಸರ್ವಜ್ಞನಾಗಿದ್ದಾನೆ' ಎಂಬ ಪಕ್ಷವನ್ನು ಅಂಗೀಕರಿಸಿದ್ದೇವೆ ಎಂಬುದಾಗಿ ಆಚಾರ್ಯರು ಸೂಚಿಸುತ್ತಿದ್ದಾರೆ. ಇಲ್ಲಿ 'ಸಂ' ಎಂಬ ಉಪಸರ್ಗದಿಂದ ಭ್ರಾಂತಿಯಿಂದ ಸರ್ವಜ್ಞತ್ವವನ್ನು ನಿರಾಕರಿಸುತ್ತಿದ್ದಾರೆ. ಇನ್ನು ತಾಚ್ಛೀಲಕತೃನ್ ಪ್ರತ್ಯಯದಿಂದ ಪ್ರಮಾಣಜನ್ಯಜ್ಞಾನವನ್ನು ನಿಷೇಧಿಸುತ್ತಿದ್ದಾರೆ. ಹಾಗಾಗಿ ಸ್ವಭಾವಜ್ಞಾನದಿಂದಲೇ ಸರ್ವಜ್ಞತ್ವವನ್ನು ಹೇಳಿದಂತಾಗುತ್ತದೆ.

**ವಿವರಣೆ :-** ಎಲ್ಲವನ್ನೂ ಯಾವನು ತಿಳಿಯುತ್ತಾನೆಯೋ ಅವನು ಸರ್ವಜ್ಞ. ಈ ವಿಧವಾದ ಸರ್ವಜ್ಞತ್ವವು ಮೂರುವಿಧವಾಗಿ ಸಂಭವಿಸುತ್ತದೆ. ಪರಮಾತ್ಮನು ಸರ್ವಜ್ಞನಾಗಿದ್ದಾನೆ ಎಂದರೆ, ಪರಮಾತ್ಮನ ಜ್ಞಾನವು ಸರ್ವವಿಷಯಕವಾಗಿದೆ ಎಂದರ್ಥ. ಈ ಪರಮಾತ್ಮನ ಸರ್ವವಿಷಯಕಜ್ಞಾನವು ಪ್ರಮಾಣರೂಪವಾಗಿದೆ (ಅಂತಃಕರಣವೃತ್ತಿರೂಪವಾಗಿದೆ) ಎಂದು ಹೇಳುತ್ತೀರೋ ? ಅಥವಾ ಭ್ರಾಂತಿರೂಪವಾಗಿದೆ ಎಂದು ಹೇಳುತ್ತೀರೋ ? ಅಥವಾ ಸ್ವಭಾವಸಿದ್ಧವಾದ ಪ್ರಜ್ಞಾರೂಪವಾಗಿದೆ ಎಂದು ಹೇಳುತ್ತೀರೋ ?

ಈ ಮೂರೂ ವಿಧಗಳೂ ಸಹ ಅಜ್ಞಾನವಿಲ್ಲದೇ ಉಪಪನ್ನವಾಗುವುದಿಲ್ಲ. ಅದು ಹೇಗೆಂದರೆ :-

**1) ಪ್ರಮಾಣರೂಪವಾಗಿದೆ**

ಪರಮಾತ್ಮನ ಸರ್ವವಿಷಯಕಜ್ಞಾನವು ಪ್ರಮಾಣರೂಪವಾಗಿದೆ (ಅಂತಃಕರಣವೃತ್ತಿರೂಪವಾಗಿದೆ) ಎಂದು ಹೇಳಿದರೆ ಪರಮಾತ್ಮನಿಗೆ ಪ್ರಮಾತೃತ್ವವನ್ನು ಹೇಳಿದಂತಾಗುತ್ತದೆ. ಆದರೆ ಆ ಪರಮಾತ್ಮನು ವಾಸ್ತವಿಕವಾಗಿ ಕೂಟಸ್ಥನಾಗಿದ್ದಾನೆ. (ಕೂಟದಂತೆ=ಅವ್ಯಾಕೃತ ಆಕಾಶದಂತೆ ನಿರ್ವಿಕಾರನಾಗಿದ್ದಾನೆ.) ಅಂತಹ ನಿರ್ವಿಕಾರನಾದ ಪರಮಾತ್ಮನಿಗೆ ಅಜ್ಞಾನಸಂಬಂಧ ಆಗದ ಹೊರತು ಪ್ರಮಾತೃತ್ವ ಎಂಬ ಧರ್ಮವು (ವಿಕಾರವು) ಕೂಡುವುದಿಲ್ಲ. ಆದ್ದರಿಂದ ಪರಮಾತ್ಮನ ಸರ್ವವಿಷಯಕಜ್ಞಾನವು ಪ್ರಮಾಣರೂಪ ಎಂಬ ಮೊದಲನೇ ಪಕ್ಷದಲ್ಲಿ ಪರಮಾತ್ಮನಿಗೆ ಅಜ್ಞಾನವನ್ನು ಒಪ್ಪಲೇಬೇಕು.

**2) ಭ್ರಾಂತಿರೂಪವಾಗಿದೆ**

ಇನ್ನು ಪರಮಾತ್ಮನ ಸರ್ವವಿಷಯಕಜ್ಞಾನವು ಭ್ರಾಂತಿರೂಪವಾಗಿದೆ ಎಂದು ಹೇಳಿದರೆ, ಭ್ರಾಂತಿಯೂ ಅಜ್ಞಾನದ ಕಾರ್ಯವೇ ಆಗಿರುವುದರಿಂದ (ಅಧಿಷ್ಠಾನದ ಅಜ್ಞಾನ ಇರುವುದಕ್ಕೇ ಭ್ರಾಂತಿ ಹುಟ್ಟುವುದರಿಂದ) ಈ ಎರಡನೇ ಪಕ್ಷದಲ್ಲಿಯೂ ಪರಮಾತ್ಮನಿಗೆ ಅಜ್ಞಾನ ಆವಶ್ಯಕ.

**3) ಸ್ವಭಾವಸಿದ್ಧಪ್ರಜ್ಞಾರೂಪವಾಗಿದೆ**

ಕೊನೆಯದಾಗಿ ಪರಮಾತ್ಮನ ಸರ್ವವಿಷಯಕಜ್ಞಾನವು ಸ್ವಭಾವಸಿದ್ಧವಾದ ಪ್ರಜ್ಞಾರೂಪವಾಗಿದೆ ಎಂದು ಹೇಳುವುದಾದರೆ, ''ಅಸಂಗೋ ಹ್ಯಯಂ ಪುರುಷಃ''

ಎಂದು ಶ್ರುತಿ ಇರುವ ಕಾರಣ ಆ ಸ್ವರೂಪಪ್ರಜ್ಞೆಯು ಅಸಂಗವಾಗಿದೆ (ವಿಷಯ-ಸಂಬಂಧಶೂನ್ಯವಾಗಿದೆ). ಹಾಗಾಗಿ ಅಜ್ಞಾನದ ಸಂಬಂಧವಾಗದ ಹೊರತು ಆ ಸ್ವರೂಪಪ್ರಜ್ಞೆಗೆ ಅಶೇಷಾರ್ಥಸಂಗತಿಯು (ಸಮಸ್ತಪದಾರ್ಥಸಂಬಂಧವು) ಆಗಲು ಸಾಧ್ಯವಿಲ್ಲ. ಆದ್ದರಿಂದ ಪರಮಾತ್ಮನ ಸರ್ವವಿಷಯಕಜ್ಞಾನವು ಸ್ವಭಾವಸಿದ್ಧವಾದ ಪ್ರಜ್ಞಾರೂಪವಾಗಿದೆ ಎಂಬ ಮೂರನೇ ಪಕ್ಷದಲ್ಲಿಯೂ ಸಹ ಆ ಪರಮಾತ್ಮನಿಗೆ (ಸ್ವರೂಪಪ್ರಜ್ಞೆಗೆ) ಅಜ್ಞಾನಸಂಬಂಧವನ್ನು ಒಪ್ಪಲೇಬೇಕು.

ಆದ್ದರಿಂದ ಸರ್ವಜ್ಞತ್ವವು ಪರಮಾತ್ಮನಿಗೆ ಅಜ್ಞಾನವನ್ನು ಸಾಧಿಸುತ್ತದೆಯೇ ಹೊರತು ಅಜ್ಞಾನವನ್ನು ನಿರಾಕರಿಸುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

**ಸ್ವರೂಪಪ್ರಜ್ಞೆಯಿಂದಲೇ ಸರ್ವಜ್ಞ**

ನಾವು ಪರಮಾತ್ಮನು ಪ್ರಮಾಣದಿಂದ ಹಾಗೂ ಭ್ರಾಂತಿಯಿಂದ ಸರ್ವಜ್ಞ-ನಾಗಿದ್ದಾನೆ (ಪರಮಾತ್ಮನ ಸರ್ವವಿಷಯಕಜ್ಞಾನವು ಪ್ರಮಾಣರೂಪವಾಗಿದೆ ಅಥವಾ ಭ್ರಾಂತಿರೂಪವಾಗಿದೆ) ಎಂಬ ಮೊದಲೆರಡು ಪಕ್ಷಗಳನ್ನು ಅಂಗೀಕರಿಸುವುದಿಲ್ಲ. ಕಿಂತು ಸ್ವರೂಪಜ್ಞಾನದಿಂದಲೇ ಸರ್ವಜ್ಞನಾಗಿದ್ದಾನೆ (ಪರಮಾತ್ಮನ ಸರ್ವವಿಷಯಕ-ಜ್ಞಾನವು ಸ್ವಭಾವಸಿದ್ಧವಾದ ಪ್ರಜ್ಞಾರೂಪವಾಗಿದೆ) ಎಂಬ ಮೂರನೇ ಪಕ್ಷವನ್ನು ಅಂಗೀಕರಿಸುತ್ತೇವೆ.

ಸ್ವರೂಪಜ್ಞಾನದಿಂದಲೇ ಪರಮಾತ್ಮನಿಗೆ ಸರ್ವಜ್ಞತ್ವವನ್ನು ಅಂಗೀಕರಿಸುವುದಾದರೆ, ''ಅಸಂಗೋ ಹ್ಯಯಂ ಪುರುಷಃ'' ಎಂಬುದಾಗಿ ಶ್ರುತಿಯು ಹೇಳಿದಂತೆ ಸಮಸ್ತಪದಾರ್ಥಸಂಬಂಧಶೂನ್ಯತ್ವ ರೂಪವಾದ ಅಸಂಗತ್ವದ ವಿರೋಧ ಬರುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ಅಸಂಗತ್ವದ ವಿರೋಧ ಬರುವುದಿಲ್ಲ.

**ಅಸಂಗತ್ವ ಎಂದರೆ ತತ್ಕೃತಫಲಲೇಪಾಭಾವ**

ಏಕೆಂದರೆ - ಶ್ರುತಿಯು ಪರಮಾತ್ಮನಿಗೆ = ಅವನ ಸ್ವರೂಪಜ್ಞಾನಕ್ಕೆ ಅಸಂಗತ್ವವನ್ನು ಹೇಳುತ್ತಿದ್ದರೂ, ಅಲ್ಲಿ ಅಸಂಗತ್ವ ಎಂದರೆ ಸಮಸ್ತಪದಾರ್ಥಸಂಬಂಧಶೂನ್ಯತ್ವ ಎಂದು ಅರ್ಥವಲ್ಲ. ಕಿಂತು ಶುಭ-ಅಶುಭಪದಾರ್ಥಗಳ ಸಂಬಂಧದಿಂದ ಉಂಟಾಗುವ ಪುಣ್ಯ-ಪಾಪರೂಪಫಲಲೇಪವಿಲ್ಲ ಎಂದೇ ಅರ್ಥ. ಒಂದುವೇಳೆ ಅಸಂಗತ್ವ ಎಂಬುದಕ್ಕೆ ಸಮಸ್ತಪದಾರ್ಥಸಂಬಂಧಶೂನ್ಯತ್ವ ಎಂದೇ ಅರ್ಥ ಹೇಳಿದರೆ,

ಪರಮಾತ್ಮನಿಗೆ ಅಸಂಗತ್ವದಂತೆ ವ್ಯಾಪ್ತತ್ವವನ್ನೂ ಹೇಳುವ ಕಾರಣ ವ್ಯಾಪ್ತತ್ವ ಎಂದರೆ ಯುಗಪತ್ ಸರ್ವಪದಾರ್ಥಸಂಬಂಧಿತ್ವವೇ ಆಗಿರುವುದರಿಂದ ಪರಮಾತ್ಮನಿಗೆ ಹೇಳುವ ವ್ಯಾಪ್ತತ್ವದ ವಿರೋಧ ಬರಬೇಕಾಗುತ್ತದೆ. (ಪರಮಾತ್ಮನಿಗೆ ವ್ಯಾಪ್ತತ್ವವು ಅನುಪಪನ್ನವಾಗಬೇಕಾಗುತ್ತದೆ.)

ಅಸಂಗತ್ವ ಎಂದರೆ ಸಮಸ್ತಪದಾರ್ಥಸಂಬಂಧಶೂನ್ಯತ್ವ ಎಂದು ಅರ್ಥವಲ್ಲ. ಕಿಂತು ತತ್ತತ್ಫಲಲೇಪಾಭಾವ ಎಂದೇ ಅರ್ಥ ಹೇಳಬೇಕು ಎನ್ನುವುದಕ್ಕೆ ಜ್ಞಾಪಕವನ್ನು ಹೇಳುತ್ತಾರೆ - ''ಯಥಾऽಕಾಶಸ್ಥಿತೋ ನಿತ್ಯಂ .... '' ಇತ್ಯಾದಿಯಾಗಿ.

**ಯಥಾऽಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥**

ಎಂಬುದಾಗಿ ಗೀತೆಯಲ್ಲಿ ಭಗವಂತ ತಾನು ಅಸಂಗ ಎಂಬ ವಿಷಯದಲ್ಲಿ ತಾನೇ ವಾಯುವನ್ನು ದೃಷ್ಟಾಂತವನ್ನಾಗಿ ಕೊಡುತ್ತಿದ್ದಾನೆ. ವಾಯುವು ಸರ್ವತ್ರ ವ್ಯಾಪ್ತವಾದರೂ ಹೇಗೆ ಅಸಂಗವಾಗಿದೆಯೋ ಅದರಂತೆ ತಾನೂ ಸರ್ವತ್ರ ವ್ಯಾಪ್ತನಾದರೂ ಅಸಂಗನಾಗಿದ್ದೇನೆ ಎಂದು ಹೇಳುತ್ತಿದ್ದಾನೆ. ಅಲ್ಲಿ ವಾಯುವಿನ ಅಸಂಗತ್ವ ಎಂದರೆ ಸಮಸ್ತಪದಾರ್ಥಸಂಬಂಧಶೂನ್ಯತ್ವ ಎಂದರ್ಥವಲ್ಲ. ಹಾಗೆ ಹೇಳಿದರೆ 'ಸರ್ವತ್ರಗಃ' ಎಂಬುದಾಗಿ ಹೇಳಿದ ವ್ಯಾಪ್ತತ್ವದ (ಸಮಸ್ತಪದಾರ್ಥ-ಸಂಬಂಧಿತ್ವದ) ವಿರೋಧ ಬರಬೇಕಾಗುತ್ತದೆ. ಕಿಂತು ವಾಯುವಿನ ಅಸಂಗತ್ವ ಎಂದರೆ ತತ್ತತ್ಪದಾರ್ಥಸಂಬಂಧಕೃತಫಲಲೇಪಾಭಾವರೂಪವೇ ಆಗಿದೆ. ಆದ್ದರಿಂದ ತತ್ಕೃತಫಲಲೇಪಾಭಾವರೂಪ ಅಸಂಗತ್ವದಿಂದ ಕೂಡಿದ ವಾಯುವಿನ ದೃಷ್ಟಾಂತ ಕೊಟ್ಟಿದ್ದರಿಂದ ಭಗವಂತನ ಅಸಂಗತ್ವವೂ ತತ್ತತ್ಪದಾರ್ಥಸಂಬಂಧಕೃತ-ಫಲಲೇಪಾಭಾವವೇ ಆಗಿದೆ (ಸಮಸ್ತಪದಾರ್ಥಸಂಬಂಧಶೂನ್ಯತ್ವ ಅಲ್ಲ) ಎಂದು ಸಿದ್ಧವಾಗುತ್ತದೆ.

**ಸ್ವರೂಪಪ್ರಜ್ಞೆಯಿಂದಲೇ ಸರ್ವಜ್ಞ. ಆಚಾರ್ಯರ ಆಂತರ್ಯ**

ಶ್ರೀಟೀಕಾಕೃತ್ಪಾದರು ಪ್ರಮಾಣಜನ್ಯಜ್ಞಾನದಿಂದ ಹಾಗೂ ಭ್ರಾಂತಿಯಿಂದ ಸರ್ವಜ್ಞತ್ವವನ್ನು ಹೇಳದೇ ಸ್ವರೂಪಜ್ಞಾನದಿಂದಲೇ ಸರ್ವಜ್ಞತ್ವವನ್ನು ಏನು ಅಂಗೀಕರಿಸಿದರೋ ಅದು ಕೇವಲ ಸ್ವಕಪೋಲಕಲ್ಪಿತವಾದದ್ದಲ್ಲ, ಕಿಂತು ಮೂಲದಲ್ಲಿ ಆಚಾರ್ಯರಿಂದಲೇ ಸೂಚಿಸಲ್ಪಟ್ಟಿದೆ (ಮೂಲಕಾರರಾದ ಶ್ರೀಮದಾಚಾರ್ಯರಿಗೆ

ಸಮ್ಮತವೇ ಆಗಿದೆ) ಎಂದು ತೋರಿಸಿಕೊಡುತ್ತಾರೆ- 'ತದಿದಮುಕ್ತಂ ಅಖಿಲಸಂವೇತ್ತುಃ ಇತಿ' ಇತ್ಯಾದಿಯಾಗಿ.

'ಅಖಿಲಸಂವೇತ್ತುಃ' ಎನ್ನುವಲ್ಲಿ ಸಂ ಉಪಸರ್ಗಪೂರ್ವಕವಾದ ವಿದ್‌ಧಾತುವಿಗೆ ತೃನ್‌ಪ್ರತ್ಯಯ ಬಂದು ಸಂವೇತ್ತಾ ಎಂದು ರೂಪವಾಗಿದೆ. ಪ್ರಕೃತದಲ್ಲಿ 'ಸಂ' ಎಂಬ ಉಪಸರ್ಗದಿಂದಾಗಿ ಪರಮಾತ್ಮನಿಗೆ ಭ್ರಾಂತಿಯಿಂದ ಸರ್ವಜ್ಞತ್ವವನ್ನು ನಿವಾರಿಸುತ್ತಿದ್ದಾರೆ ಆಚಾರ್ಯರು. (ಪರಮಾತ್ಮನು ಕೇವಲ ವೇತ್ತಾ ಅಲ್ಲ, ಕಿಂತು ಸಂ=ವೇತ್ತಾ ಎಂಬುದಾಗಿ 'ಸಂ' ಉಪಸರ್ಗದಿಂದ ಪರಮಾತ್ಮನ ಸರ್ವವಿಷಯಕಜ್ಞಾನ ಭ್ರಾಂತಿರೂಪವಾದದ್ದಲ್ಲ ಎಂದು ತಿಳಿಸುತ್ತಿದ್ದಾರೆ ಎಂದು ಭಾವ.)

ಮತ್ತು ಸಂವೇತ್ತಾ ಎಂಬ ಶಬ್ದವು ತೃನ್‌ಪ್ರತ್ಯಯಾಂತವಾದ ಶಬ್ದವಾಗಿದೆ. ಈ ತೃನ್‌ಪ್ರತ್ಯಯವು ತಾಚ್ಛೀಲಕವಾಗಿದೆ. (ಅದು ಅವನ ಸ್ವಭಾವವಾಗಿದೆ ಎಂದು ತಿಳಿಸುವಂತಹದ್ದಾಗಿದೆ.) ಅಂತಹ ತಾಚ್ಛೀಲಕತೃನ್‌ಪ್ರತ್ಯಯಾಂತವಾದ ಸಂವೇತೃಶಬ್ದಪ್ರಯೋಗದಿಂದ ''ಭಗವಂತನ ಸರ್ವವಿಷಯಕಜ್ಞಾನವು ಅವನ ಸ್ವಭಾವವೇ ಆಗಿದೆ, ಪ್ರಮಾಣಜನ್ಯ ಅಲ್ಲ'' ಎಂಬುದಾಗಿ ತಿಳಿಸುತ್ತಿದ್ದಾರೆ.

ಈ ರೀತಿಯಾಗಿ ಸಂ' ಉಪಸರ್ಗ ಹಾಗೂ ತಾಚ್ಛೀಲಕತೃನ್‌ಪ್ರತ್ಯಯಾಂತ-ಶಬ್ದದಿಂದ ಪ್ರಮಾಣಜನ್ಯಸರ್ವಜ್ಞತ್ವ ಮತ್ತು ಭ್ರಾಂತಿರೂಪಸರ್ವಜ್ಞತ್ವಗಳನ್ನು ನಿರಾಕರಿಸಿದರೆ, ಸ್ವರೂಪಪ್ರಜ್ಞೆಯಿಂದ ಸರ್ವಜ್ಞತ್ವವನ್ನೇ ಆಚಾರ್ಯರು ಹೇಳಿದಂತಾಗುತ್ತದೆ ಎಂದು ಅಭಿಪ್ರಾಯ.

**ಟೀಕಾ :- ಶಂಕತೇ -**

**ಮೂಲ :- ಉಪಾಧಿಭೇದಾದ್ಘಟತ ಇತಿ ಚೇತ್... .. ||**

**ಟೀಕಾ :- ಉಪಾಧಿನಿಮಿತ್ತೋ ಭೇದ ಉಪಾಧಿಭೇದಃ । ಘಟತೇ ಅಜ್ಞತೇತಿ ಸಂಬಂಧಃ । ಯದುಕ್ತಂ 'ಬ್ರಹ್ಮಣೋಽಖಿಲಸಂವೇತ್ತುರಜ್ಞತಾ ನ ಘಟತೇ' ಇತಿ । ತನ್ನ । ಅಜ್ಞಾನಸ್ಯ [42]ಜೀವಾಶ್ರಯತ್ವಾಭ್ಯುಪಗಮಾತ್ ।**

42) ವಾಚಸ್ಪತಿಪಕ್ಷೋಽಯಮಿತಿ ಜ್ಞಾತವ್ಯಮ್ । (ಶ್ರೀನಿ)

43) ತಥಾ ಚ ಬ್ರಹ್ಮಣ್ಯೇವಾಜ್ಞಾನಮಂಗೀಕೃತಂ ಸ್ಯಾತ್ । ತಥಾ ಚೋಕ್ತದೋಷಸ್ತದವಸ್ಥ ಏವೇತಿ ಭಾವಃ । (ಶ್ರೀನಿ)

**ನನು ಜೀವೋ ಬ್ರಹ್ಮಣೋ ನ ಭಿದ್ಯತೇ[43] ಇತಿ ತೇ ಮತಮ್ । ಸತ್ಯಮ್ । ತಥಾಽಪ್ಯುಪಾಧಿನಿಮಿತ್ತೋ ಭೇದೋಽಸ್ತ್ಯೇವ[44] । ತತ್ರ ಯಥಾ ಸತ್ಯಪಿ ಬಿಂಬಪ್ರತಿಬಿಂಬಯೋರೈಕ್ಯೇ ದರ್ಪಣಾದ್ಯುಪಾಧಿನಿಮಿತ್ತಭೇದಾತ್ ಬಿಂಬ-ಸ್ಯಾವದಾತತ್ವೇಽಪಿ[45] ಪ್ರತಿಬಿಂಬಸ್ಯ ಶ್ಯಾಮತಾ[46][47] ಘಟತೇ ಏವಂ ಜೀವಬ್ರಹ್ಮಣೋಃ ಸತ್ಯಪ್ಯಭೇದೇ ಬ್ರಹ್ಮಣಃ ಸರ್ವಜ್ಞತ್ವೇಽಪಿ ಜೀವಸ್ಯಾಜ್ಞತಾ ಘಟತ ಏವ[48] ಉಪಾಧಿ ಭೇದಾದಿತಿ ।**

**ಅನುವಾದ :-** 'ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವು ಕೂಡುವುದಿಲ್ಲ ' ಎಂಬ ನಮ್ಮ ಮಾತಿನ ಮೇಲೆ ಮಾಯಾವಾದಿಗಳು ಶಂಕಿಸುತ್ತಾರೆ -

**ಮೂಲ :- ಉಪಾಧಿಭೇದಾತ್ ಘಟತ ಇತಿ ಚೇತ್ ..... ।**

**ಮೂಲಾರ್ಥ :- ಜೀವ-ಬ್ರಹ್ಮರಲ್ಲಿ ಅಭೇದವಿದ್ದರೂ ಸಹ ಉಪಾಧಿ ನಿಮಿತ್ತಭೇದ ಇರುವುದರಿಂದ ಬ್ರಹ್ಮನು ಸರ್ವಜ್ಞನಾದರೂ ಜೀವನಿಗೆ ಅಜ್ಞಾನವು ಕೂಡುತ್ತದೆ ಎಂದು ಶಂಕೆ ಬಂದರೆ ......**

**ಅನುವಾದ :-** ಮೂಲದಲ್ಲಿ ಉಪಾಧಿಭೇದ ಎಂದರೆ ಉಪಾಧಿಗಳಲ್ಲಿ ಪರಸ್ಪರಭೇದ ಎಂದು ಅರ್ಥವಲ್ಲ. ಕಿಂತು ಉಪಾಧಿನಿಮಿತ್ತವಾದ ಭೇದ ಎಂದು ಅರ್ಥ. ಮೂಲದಲ್ಲಿ ಘಟತೇ ಎಂದಷ್ಟೇ ಇದೆ. ಹಿಂದಿನ ವಾಕ್ಯದಿಂದ ಅಜ್ಞತಾ ಎಂಬುದನ್ನು ತೆಗೆದುಕೊಂಡು 'ಅಜ್ಞತಾ ಘಟತೇ' ಎಂದು ಅನ್ವಯ ಮಾಡಿಕೊಳ್ಳಬೇಕು. ಅಜ್ಞಾನವು ಕೂಡುತ್ತದೆ ಎಂದು ಅದರ ಅರ್ಥ.

''ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವು (ಅಜ್ಞಾನಾಶ್ರಯತ್ವವು) ಕೂಡುವುದಿಲ್ಲ'' ಎಂಬುದಾಗಿ ಏನು ಹೇಳಿದಿರಿ ಅದು ಸರಿಯಲ್ಲ . ಏಕೆಂದರೆ - ವಾಚಸ್ಪತಿಮಿಶ್ರರ ಪ್ರಕಾರ ಅಜ್ಞಾನವು ಜೀವಾಶ್ರಿತವಾಗಿದೆ (ಅಜ್ಞಾನಕ್ಕೆ ಜೀವನು ಆಶ್ರಯ) ಎಂದು ಅಂಗೀಕರಿಸುವುದರಿಂದ ನಿಮ್ಮ ದೋಷ ನಮಗೆ ಬರುವುದಿಲ್ಲ.

---

44) ಜೀವ-ಬ್ರಹ್ಮಣೋರಿತಿ ಶೇಷಃ । (ಶ್ರೀನಿ)

45) ನಿರ್ಮಲತ್ವೇಽಪೀತ್ಯರ್ಥಃ ।

46) ಸಮಲತ್ವಂ ಇತ್ಯರ್ಥಃ ।

47) ಉಪಾಧೇಃ ಪ್ರತಿಬಿಂಬಪಕ್ಷಪಾತಿತ್ವಾದಿತಿ ಭಾವಃ । (ಶ್ರೀನಿ)

48) ಅಂತಃಕರಣಾದ್ಯುಪಾಧೇರಪಿ ಪ್ರತಿಬಿಂಬಭೂತಜೀವಪಕ್ಷಪಾತಿತ್ವಾದಿತಿ ಭಾವಃ । (ಶ್ರೀನಿ)

ಹೌದು, ಜೀವನು ಬ್ರಹ್ಮನಿಂದ ಭಿನ್ನನಲ್ಲ ಎಂದು ನಿಮ್ಮ ಮತ. ಹಾಗಾಗಿ ಜೀವನಲ್ಲಿ ಅಜ್ಞಾನವನ್ನು ಅಂಗೀಕರಿಸಿದರೆ ಬ್ರಹ್ಮನಲ್ಲಿಯೇ ಅಜ್ಞಾನವನ್ನು ಅಂಗೀಕರಿಸಿದಂತೆ ಆಗುತ್ತದೆ. ಅಂದಮೇಲೆ ನಮ್ಮ ದೋಷ ಬರುತ್ತದೆಯಲ್ಲವೇ ? ಎಂದರೆ, ಸತ್ಯವೇ. ಆದರೂ ಸಹ (ಜೀವ-ಬ್ರಹ್ಮರಲ್ಲಿ ಅಭೇದವೇ ಇದ್ದರೂ ಸಹ) ಜೀವ-ಬ್ರಹ್ಮರಲ್ಲಿ ಉಪಾಧಿನಿಮಿತ್ತವಾದ ಭೇದವು ಇದ್ದೇ ಇದೆ.

ಯಾವ ರೀತಿಯಾಗಿ ಬಿಂಬ-ಪ್ರತಿಬಿಂಬಗಳಲ್ಲಿ ಐಕ್ಯವು ಇದ್ದರೂ ಸಹ ದರ್ಪಣ ಮೊದಲಾದ ಉಪಾಧಿನಿಮಿತ್ತಭೇದದಿಂದಾಗಿ ಉಪಾಧಿಯು ಪ್ರತಿಬಿಂಬಪಕ್ಷಪಾತಿಯಾದ ಕಾರಣ (ಉಪಾಧಿಯು ತನ್ನಲ್ಲಿರುವ ದೋಷವನ್ನು ಪ್ರತಿಬಿಂಬದಲ್ಲಿ ತೋರಿಸುವ ಸ್ವಭಾವ ಉಳ್ಳದ್ದಾದ್ದರಿಂದ) ಬಿಂಬವು ನಿರ್ಮಲವಾಗಿದ್ದರೂ ಪ್ರತಿಬಿಂಬಕ್ಕೆ ಶ್ಯಾಮತ್ವವು (ಸಮಲತ್ವವು = ಮಲದೋಷವಿಶಿಷ್ಟತ್ವವು) ಹೇಗೆ ಉಪಪನ್ನವಾಗುವುದೋ, ಅದೇ ರೀತಿಯಾಗಿ ಜೀವ-ಬ್ರಹ್ಮರಲ್ಲಿ ಅಭೇದವು ಇದ್ದರೂ ಸಹ ಅಂತಃಕರಣ ಮೊದಲಾದ ಉಪಾಧಿನಿಮಿತ್ತಭೇದದಿಂದಾಗಿ ಅಂತಃಕರಣ ಮೊದಲಾದ ಉಪಾಧಿಯೂ ಸಹ ಪ್ರತಿಬಿಂಬಭೂತಜೀವಪಕ್ಷಪಾತಿಯಾದ್ದರಿಂದ (ಅಂತಃಕರಣಾದಿ ಉಪಾಧಿಯು ಅಜ್ಞಾನರೂಪದೋಷವನ್ನು ಪ್ರತಿಬಿಂಬನಾದ ಜೀವನಲ್ಲಿ ತೋರಿಸುವುದರಿಂದ) ಬ್ರಹ್ಮನು ಸರ್ವಜ್ಞನಾದರೂ ಜೀವನಿಗೆ ಅಜ್ಞಾನವು (ಅಜ್ಞಾನಾಶ್ರಯತ್ವವು) ಉಪಪನ್ನವಾಗಿಯೇ ಆಗುತ್ತದೆ ಎಂಬುದಾಗಿ ಮಾಯಾವಾದಿಗಳು ಶಂಕಿಸುತ್ತಾರೆ.

**ಟೀಕಾ :- [49] ತದಿದಂ ದೂಷಯಿತುಂ ಪೃಚ್ಛತಿ -**

**ಮೂಲ :- ಸ ಸ್ವಭಾವತಃ ॥ ಅಜ್ಞಾನತೋ ವಾ .....**

**ಟೀಕಾ :- ಸ್ಯಾದಪೀದಂ ಜೀವಾಜ್ಞಾನಮತಂ ಯದ್ಯುಪಾಧಿರುಪಪದ್ಯೇತ । [50] ಸ ಏವ ವಿವಿಚ್ಯತಾಮ್ । ಕಿಂ ಸ್ವಭಾವತಃ ಅಕಲ್ಪಿತ ಇತಿ ಯಾವತ್ । ಅಜ್ಞಾನತೋ ವಾ ಕಲ್ಪಿತಃ ಇತಿ ಶೇಷಃ । ಆದ್ಯಂ ದೂಷಯತಿ -**

**ಮೂಲ :- [51] ದ್ವೈತಸ್ಯ ಸತ್ಯತಾ [52] ಸ್ವತ ಏವ ಚೇತ್ ।**

**ಟೀಕಾ :- ತಥಾ ಚಾಪಸಿದ್ಧಾಂತಃ[53] ಸ್ಯಾತ್ ಇತಿ ಭಾವಃ ।**

---

49) ಅಜ್ಞಾನಂ ಜೀವಾಶ್ರಿತಮಿತಿ ವಾಚಸ್ಪತಿಮತಂ ದೂಷಯಿತುಮಿತ್ಯರ್ಥಃ ।

50) ಉಪಾಧಿರೇವ ।

**ಅನುವಾದ:-** ಅಜ್ಞಾನವು ಜೀವಾಶ್ರಿತವಾಗಿದೆ (ಜೀವನಲ್ಲಿ ಅಜ್ಞಾನವಿದೆ) ಎಂಬ ಈ ವಾಚಸ್ಪತಿಮಿಶ್ರರ ಪಕ್ಷ(ಮತ)ವನ್ನು ನಿರಾಕರಿಸುವುದಕ್ಕಾಗಿ ಪ್ರಶ್ನೆ (ವಿಕಲ್ಪ) ಮಾಡುತ್ತಾರೆ-

**ಮೂಲ :- ಸ ಸ್ವಭಾವತಃ । ಅಜ್ಞಾನತೋ ವಾ ..... ।**

(ಮೂಲಾರ್ಥ :- ಆ ಉಪಾಧಿಯು ಸ್ವಾಭಾವಿಕವೋ (ಅಕಲ್ಪಿತವೋ) ? ಅಥವಾ ಅಜ್ಞಾನದಿಂದ ಕಲ್ಪಿತವೋ ?)

ಅಜ್ಞಾನವು ಜೀವಾಶ್ರಿತವಾಗಿದೆ ಎಂಬ ಪಕ್ಷವು ಉಪಪನ್ನವಾಗುತ್ತಿತ್ತು . ಯಾವಾಗ ? ಒಂದುವೇಳೆ ಉಪಾಧಿಯು ಕೂಡುತ್ತಿದ್ದರೆ. ಆದರೆ ಉಪಾಧಿಯೇ ಕೂಡುವುದಿಲ್ಲ. ಅದು ಹೇಗೆಂದರೆ - ಉಪಾಧಿಯು ಸ್ವಾಭಾವಿಕವಾಗಿದೆ (ಅಕಲ್ಪಿತವಾಗಿದೆ) ಎಂದು ಹೇಳುತ್ತೀರೋ ? ಅಥವಾ ಅಜ್ಞಾನದಿಂದ ಕಲ್ಪಿತವಾಗಿದೆ ಎಂದು ಹೇಳುತ್ತೀರೋ ?

ಉಪಾಧಿಯು ಸ್ವಾಭಾವಿಕ (ಅಕಲ್ಪಿತ) ಎಂಬ ಮೊದಲನೇ ಪಕ್ಷವನ್ನು ನಿರಾಕರಿಸುತ್ತಾರೆ -

**ಮೂಲ :- ದ್ವೈತಸ್ಯ ಸತ್ಯತಾ ಸ್ವತ ಏವ ಚೇತ್ ।**

**ಮೂಲಾರ್ಥ :- ಉಪಾಧಿಯು ಸ್ವಾಭಾವಿಕ (ಅಕಲ್ಪಿತ) ಎನ್ನುವುದಾದರೆ, ದ್ವಿತೀಯವಸ್ತು ಸತ್ಯವಾಗಬೇಕಾಗುತ್ತದೆ.**

ದ್ವೈತ ಎನ್ನುವಲ್ಲಿ ದ್ವಿ ಎನ್ನುವುದು ಭಾವಪ್ರಧಾನನಿರ್ದೇಶವಾಗಿದೆ. ಹಾಗಾಗಿ ದ್ವಿ ಎಂದರೆ ದ್ವಿತ್ವ.

**''ದ್ವಿತ್ವೇನ (ದ್ವಿತ್ವಸಂಖ್ಯಯಾ) ಇತಂ ದ್ವೀತಂ, ದ್ವೀತಮೇವ ದ್ವೈತಂ ದ್ವಿತೀಯಂ ಇತ್ಯರ್ಥಃ ''**

---

51) ದ್ವೀತಿ ಭಾವಪ್ರಧಾನಂ, ತಥಾ ಚ ದ್ವಿತ್ವಸಂಖ್ಯಯಾ ಇತಂ ದ್ವೀತಂ, ದ್ವೀತಮೇವ ದ್ವೈತಂ ದ್ವಿತೀಯಂ, ತಸ್ಯ (ದ್ವಿತೀಯವಸ್ತುನಃ) ಇತ್ಯರ್ಥಃ । (ಶ್ರೀನಿ)

52) ಮೂಲೇ ಸ್ವತ ಏವೇತ್ಯಸ್ಯ ಸ್ವಭಾವತ ಏವ ಅಕಲ್ಪಿತಶ್ಚೇತ್ ಇತ್ಯರ್ಥಃ । (ಶ್ರೀನಿ)

53) ತಥಾ ಚ ದ್ವಿತೀಯೋಸ್ಯೋಪಾಧೇಃ ಸತ್ಯತ್ವಪ್ರಾಪ್ತ್ಯಾಽದ್ವೈತಭಂಗಾಪತ್ತಿಃ ಸ್ಯಾತ್ । ತಥಾ ಚ ಅಪಸಿದ್ಧಾಂತಃ ಇತ್ಯರ್ಥಃ ।

ಎಂಬುದಾಗಿ ಸಮಾಸ ಮಾಡಿಕೊಂಡರೆ ದ್ವೈತ ಎಂಬ ಶಬ್ದಕ್ಕೆ ದ್ವಿತೀಯವಸ್ತು ಎಂದು ಅರ್ಥ ಬರುತ್ತದೆ. ಪ್ರಕೃತದಲ್ಲಿ ಉಪಾಧಿಯು ಸ್ವಾಭಾವಿಕ (ಅಕಲ್ಪಿತ) ಎನ್ನುವುದಾದರೆ, ಬ್ರಹ್ಮನು ಸತ್ಯನಾಗಿದ್ದಾನೆ ಜೊತೆಗೆ ಉಪಾಧಿ ಎಂಬ ದ್ವಿತೀಯವಸ್ತುವೂ ಸತ್ಯವಾಗುವುದರಿಂದ ಅದ್ವೈತಭಂಗ ಆಗಬೇಕಾಗುತ್ತದೆ. ಅಂತಿಮವಾಗಿ ಅಪಸಿದ್ಧಾಂತ ಬರಬೇಕಾಗುತ್ತದೆ (ಬ್ರಹ್ಮ ಒಬ್ಬನೇ ಸತ್ಯ ಎನ್ನುವುದು ಅವರ ಅದ್ವೈತಸಿದ್ಧಾಂತ. ಪ್ರಕೃತ ಉಪಾಧಿಗೂ ಸತ್ಯತ್ವ ಹೇಳಿದರೆ ಸಿದ್ಧಾಂತವಿರೋಧ ಬರಬೇಕಾಗುತ್ತದೆ) ಎಂದು ಅಭಿಪ್ರಾಯ.

**ಟೀಕಾ :- ದ್ವಿತೀಯಂ ನಿರಾಕರೋತಿ -**

**ಮೂಲ :- ಅನವಸ್ಥಿತಿರಜ್ಞಾನಹೇತೌ ..... ।**

**ಟೀಕಾ :- ಅಜ್ಞಾನಹೇತಾವಿತಿ ತತ್ಪುರುಷೋ ಬಹುವ್ರೀಹಿಶ್ಚ ದ್ವಾವಪಿ ತಂತ್ರೇಣ ಉಪಾತ್ತೌ । ಸ ಇತಿ ಪ್ರಥಮಾಂತಂ ಪ್ರಕೃತಮಪಿ ಅರ್ಥಾತ್ ಇಹ ಸಪ್ತಮ್ಯಂತಂ ಸಂಬಧ್ಯತೇ । ಅಜ್ಞಾನಸ್ಯ ಹೇತೌ ಉಪಾಧೌ ಅಜ್ಞಾನಹೇತುಕೇ ಅಂಗೀಕ್ರಿಯಮಾಣೇ ಅನವಸ್ಥಿತಿಃ ಸ್ಯಾತ್ । ಸತಿ ಖಲು ಉಪಾಧೌ ತದ್ಭಿನ್ನಸ್ಯ ಜೀವಸ್ಯ ಅಜ್ಞಾನಂ ಸ್ಯಾತ್ । ಉಪಾಧಿಶ್ಚ ಅಜ್ಞಾನೇ ಸತಿ ಸ್ಯಾತ್ ಅಜ್ಞಾನಂ ಚ ಉಪಾಧೌ ಸತೀತಿ ।**

**ಅನುವಾದ :-** ಉಪಾಧಿಯು ಅಜ್ಞಾನದಿಂದ ಕಲ್ಪಿತವಾಗಿದೆ ಎಂಬ ಎರಡನೇ ಪಕ್ಷವನ್ನು ನಿರಾಕರಿಸುತ್ತಾರೆ-

**ಮೂಲ :- ಅನವಸ್ಥಿತಿರಜ್ಞಾನಹೇತೌ .... ।**

ಮೂಲಾರ್ಥ :- ಅಜ್ಞಾನಕ್ಕೆ ಹೇತುವಾಗಿರುವ ಉಪಾಧಿಯು ಅಜ್ಞಾನಹೇತುಕವಾಗಿದೆ (ಅಜ್ಞಾನವೇ ಹೇತುವಾಗಿ ಉಳ್ಳದ್ದಾಗಿದೆ) ಎಂದು ಅಂಗೀಕರಿಸಿದರೆ ಅನವಸ್ಥಾದೋಷ ಬರುತ್ತದೆ.

ಮೂಲದಲ್ಲಿರುವ 'ಅಜ್ಞಾನಹೇತೌ' ಎಂಬ ಪದವು ತಂತ್ರನ್ಯಾಯದಿಂದ ತತ್ಪುರುಷಸಮಾಸಾಂತವಾಗಿದೆ ಎಂದೂ, ಬಹುವ್ರೀಹಿಸಮಾಸಾಂತವಾಗಿದೆ ಎಂದೂ ವಿವಕ್ಷಿತವಾಗಿದೆ. 'ಸ ಸ್ವಭಾವತಃ' ಎಂಬ ಪೂರ್ವವಾಕ್ಯದಲ್ಲಿ 'ಸಃ' ಎಂಬುದಾಗಿ ಪ್ರಥಮಾವಿಭಕ್ತ್ಯಂತವಾಗಿ ಪ್ರಕೃತವಾಗಿದ್ದರೂ ಇಲ್ಲಿ ಅನ್ವಯೋಪಪತ್ತಿಗಾಗಿ 'ತಸ್ಮಿನ್' ಎಂಬುದಾಗಿ ಸಪ್ತಮೀವಿಭಕ್ತ್ಯಂತವಾಗಿ ಸಂಬದ್ಧವಾಗುತ್ತದೆ.

ಅಜ್ಞಾನಕ್ಕೆ ಹೇತುವಾಗಿರುವ ಉಪಾಧಿಯು ಅಜ್ಞಾನಹೇತುಕವಾಗಿದೆ (ಅಜ್ಞಾನವೇ ಹೇತುವಾಗಿ ಉಳ್ಳದ್ದಾಗಿದೆ) ಎಂದು ಅಂಗೀಕರಿಸಿದರೆ ಅನವಸ್ಥಾದೋಷ ಬರುತ್ತದೆ. ಉಪಾಧಿ ಇದ್ದರೆ ಆ ಉಪಾಧಿಭಿನ್ನವಾದ ಜೀವನಲ್ಲಿ ಅಜ್ಞಾನ ಕೂಡುತ್ತದೆ. ಹಾಗಾದರೆ ಅಜ್ಞಾನ ಇದ್ದರೆ ಆ ಅಜ್ಞಾನದಿಂದ ಕಲ್ಪಿತವಾದ ಉಪಾಧಿಯು ಇರುತ್ತದೆ, ಆ ಉಪಾಧಿ ಇದ್ದರೆ ಉಪಾಧಿಭಿನ್ನನಾದ ಜೀವನಲ್ಲಿ ಅಜ್ಞಾನ ಇರುತ್ತದೆ. ಹೀಗೆ ಅನವಸ್ಥಾದೋಷ ಬರುತ್ತದೆ.

**ವಿವರಣೆ :-** 'ಸಕೃತ್ ಉಕ್ತಂ ಅನೇಕೋಪಕಾರಕಂ ತಂತ್ರಂ' = ಒಂದುಬಾರಿ ಹೇಳಿದ್ದು ಅನೇಕ ಉಪಕಾರ ಮಾಡುತ್ತಿದ್ದರೆ ಅದಕ್ಕೆ ತಂತ್ರ ಎನ್ನುತ್ತಾರೆ. ಆ ತಂತ್ರನ್ಯಾಯದಿಂದ ಮೂಲದಲ್ಲಿರುವ 'ಅಜ್ಞಾನಹೇತೌ' ಎಂಬ ಪದವು ಒಮ್ಮೆ ತತ್ಪುರುಷಸಮಾಸಾಂತವಾಗಿದೆ (ಅಜ್ಞಾನಸ್ಯ ಹೇತುಃ ಅಜ್ಞಾನಹೇತುಃ ತಸ್ಮಿನ್ ಅಜ್ಞಾನಹೇತೌ ಎಂದು ವಿಗ್ರಹ) ಎಂದೂ, ಮತ್ತೊಮ್ಮೆ ಬಹುವ್ರೀಹಿಸಮಾಸಾಂತವಾಗಿದೆ (ಅಜ್ಞಾನಂ ಹೇತುಃ ಯಸ್ಯ ಸಃ ಅಜ್ಞಾನಹೇತುಃ ತಸ್ಮಿನ್ ಅಜ್ಞಾನಹೇತೌ ಎಂದು ವಿಗ್ರಹ) ಎಂದೂ ವಿವಕ್ಷಿತವಾಗಿದೆ.

'ಸ ಸ್ವಭಾವತಃ' ಎಂಬ ಪೂರ್ವವಾಕ್ಯದಿಂದ 'ಸಃ' ಎಂಬ ಪದವನ್ನು ಅನುವರ್ತನ ಮಾಡಿಕೊಳ್ಳಬೇಕು. ಆ 'ಸಃ' ಎಂಬ ಪದವು ಯಥಾಶ್ರುತ ಪ್ರಥಮಾವಿಭಕ್ತ್ಯಂತವೇ ಆಗಿಬಿಟ್ಟರೆ ವಾಕ್ಯಾರ್ಥದಲ್ಲಿ ಅನ್ವಯವಾಗುವುದಿಲ್ಲ. ಆ ಕಾರಣ ತದನ್ಯಥಾನುಪ- ಪತ್ತಿಯಿಂದ 'ಸಃ' ಎಂಬ ಪ್ರಥಮಾವಿಭಕ್ತ್ಯಂತವಾದ ಪದವು 'ತಸ್ಮಿನ್' ಎಂಬುದಾಗಿ ವಿಭಕ್ತಿವಿಪರಿಣಾಮವಾಗಿ ಸಪ್ತಮ್ಯಂತವಾಗಿ ಪ್ರಕೃತದಲ್ಲಿ ಸಂಬದ್ಧವಾಗುತ್ತದೆ.

ಅಜ್ಞಾನಕ್ಕೆ ಹೇತುವಾಗಿರುವ ಉಪಾಧಿಯು ಅಜ್ಞಾನಹೇತುಕವಾಗಿದೆ (ಅಜ್ಞಾನವೇ ಹೇತುವಾಗಿ ಉಳ್ಳದ್ದಾಗಿದೆ) ಎಂದು ಅಂಗೀಕರಿಸಿದರೆ ಅನವಸ್ಥಾದೋಷ ಬರುತ್ತದೆ. ಅದು ಹೇಗೆಂದರೆ :- ಅಜ್ಞಾನವು ಇರಬೇಕಾದರೆ ಅದಕ್ಕೊಂದು ಆಶ್ರಯ ಬೇಕು. ಪ್ರಕೃತ ಜೀವನೇ ಅಜ್ಞಾನಕ್ಕೆ ಆಶ್ರಯ. ಆ ಜೀವನು ಉಪಾಧಿಯಿಂದ ಭಿನ್ನನಾಗಿದ್ದಾನೆ. ಹಾಗಾಗಿ ಉಪಾಧಿ ಇದ್ದರೆ ಆ ಉಪಾಧಿಯಿಂದ ಭಿನ್ನನಾದ ಜೀವನಲ್ಲಿ ಅಜ್ಞಾನವು ಕೂಡುತ್ತದೆ. ಹಾಗಾದರೆ :- ಅಜ್ಞಾನ ಇದ್ದರೆ ಆ ಅಜ್ಞಾನದಿಂದ ಕಲ್ಪಿತವಾದ ಒಂದು ಉಪಾಧಿಯು ಇರುತ್ತದೆ. (ಅಂದರೆ ಮೊದಲನೇ ಉಪಾಧಿಯು ಮೊದಲ ಅಜ್ಞಾನಸಾಪೇಕ್ಷವಾಗಿದೆ.) ಆ ಮೊದಲನೇ ಉಪಾಧಿ ಇದ್ದರೆ ಆ ಉಪಾಧಿ

ಭಿನ್ನನಾದ ಜೀವನಲ್ಲಿ ಮತ್ತೊಂದು ಅಜ್ಞಾನವು (ಎರಡನೇ ಅಜ್ಞಾನವು) ಇರುತ್ತದೆ. (ಅಂದರೆ ಎರಡನೇ ಅಜ್ಞಾನವು ಮೊದಲ ಉಪಾಧಿಸಾಪೇಕ್ಷವಾಗಿದೆ.) ಆ ಅಜ್ಞಾನ ಇದ್ದರೆ ಆ ಅಜ್ಞಾನದಿಂದ ಕಲ್ಪಿತವಾದ ಮತ್ತೊಂದು ಉಪಾಧಿಯು (ಎರಡನೇ ಉಪಾಧಿಯು) ಇರುತ್ತದೆ. (ಅಂದರೆ ಎರಡನೇ ಉಪಾಧಿಯು ಎರಡನೇ ಅಜ್ಞಾನಸಾಪೇಕ್ಷವಾಗಿದೆ.) ಆ ಎರಡನೇ ಉಪಾಧಿ ಇದ್ದರೆ ಆ ಉಪಾಧಿಭಿನ್ನನಾದ ಜೀವನಲ್ಲಿ ಮೂರನೇ ಅಜ್ಞಾನ ಇರುತ್ತದೆ. ಆ ಮೂರನೇ ಅಜ್ಞಾನ ಇದ್ದರೆ ಆ ಅಜ್ಞಾನಕಲ್ಪಿತವಾದ ಮೂರನೇ ಉಪಾಧಿ ಇರುತ್ತದೆ.

ಅನವಸ್ಥಾ ದೋಷದ ಚಿತ್ರಣ




ಹೀಗೆ ಅನಂತ ಅಜ್ಞಾನ-ಉಪಾಧಿಗಳನ್ನು ಹೇಳುತ್ತಾ ಹೋದರೆ ಅನವಸ್ಥಾದೋಷ ಬರುತ್ತದೆ ಎಂದು ಅಭಿಪ್ರಾಯ.

**ಅವತಾರಿಕೆ :-** ನಾವು ಕೊಟ್ಟ ಅನವಸ್ಥಾದೋಷದ ಮೇಲೆ ಪರರು ಆಕ್ಷೇಪ ಮಾಡುತ್ತಾರೆ -

**ಟೀಕಾ :- ನನ್ವೇವಮಜ್ಞಾನೋಪಾಧಿಪರಂಪರೈವ ಸ್ಯಾತ್ ನಾನವಸ್ಥಾ ಇತಿ ಚೇನ್ನ । ಅಸಿದ್ಧವಿಷಯತ್ವೇನ ಅನವಸ್ಥಾತ್ವಾತ್ । ಅಜ್ಞಾನಂ ಪ್ರತೀತಿಸಿದ್ಧಂ ಪರಂಪರಾಂ ಕಲ್ಪಯಿಷ್ಯತೀತಿ ಚೇನ್ನ । ಆತ್ಯಂತಿಕಭೇದೇನೈವ ತಸ್ಯೋಪಪತ್ತೇಃ ।**

**ಅನುವಾದ :-** ಉಪಾಧಿಯು ಅಜ್ಞಾನಸಾಪೇಕ್ಷವಾಗಿದೆ. ಆ ಅಜ್ಞಾನವು ಉಪಾಧಿ ಸಾಪೇಕ್ಷವಾಗಿದೆ. ಆ ಉಪಾಧಿಯು ಪುನಃ ಅಜ್ಞಾನಸಾಪೇಕ್ಷವಾಗಿದೆ ಎಂದು ಅಂಗೀಕರಿಸಿದರೆ ಅಜ್ಞಾನ-ಉಪಾಧಿಗಳ ಪರಂಪರೆಯೇ ಉಂಟಾಗುತ್ತದೆ. ಹೊರತು ಅದು ಅನವಸ್ಥಾದೋಷವಾಗುವುದಿಲ್ಲ. ಹಾಗಾಗಿ ಬೀಜ-ಅಂಕುರಗಳ ಪರಂಪರೆಯನ್ನು ಅಂಗೀಕರಿಸಿದಾಗ ಅಲ್ಲಿ ಹೇಗೆ ಅನವಸ್ಥಾ ದೋಷವಾಗುವುದಿಲ್ಲವೋ ಅದೇ ರೀತಿಯಾಗಿ ಅಜ್ಞಾನ-ಉಪಾಧಿಗಳ ಪರಂಪರೆಯನ್ನು ಅಂಗೀಕರಿಸಿದಾಗಲೂ ಸಹ ಅನವಸ್ಥಾ ದೋಷವಾಗುವುದಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ ಬೀಜ-ಅಂಕುರಗಳ ಪರಂಪರೆ ಪ್ರಾಮಾಣಿಕವಾಗಿದೆ. ಆದ್ದರಿಂದ ಅಲ್ಲಿ ಅನವಸ್ಥಾ ದೋಷವಾಗುವುದಿಲ್ಲ. ಆದರೆ ಇಲ್ಲಿ ಅಜ್ಞಾನ-ಉಪಾಧಿಗಳ ಪರಂಪರೆಯು ಅಪ್ರಾಮಾಣಿಕವಾಗಿದೆ. ಆದ್ದರಿಂದ ಅನವಸ್ಥಾ ದೋಷವಾಗಿಯೇ ಆಗುತ್ತದೆ.

ಅಜ್ಞಾನವು 'ಅಹಂ ಅಜ್ಞಃ' ಎಂಬ ಸಾಕ್ಷಿರೂಪಪ್ರತೀತಿಸಿದ್ಧವಾದ್ದರಿಂದ ಪ್ರಾಮಾಣಿಕವಾಗಿದೆ. ಹೀಗಾಗಿ ಕಾರ್ಯವಾದ ಅಜ್ಞಾನವೇ ಕಾರಣಪರಂಪರೆಯನ್ನು ಸಾಬೀತುಪಡಿಸುತ್ತದೆ. ಆದ್ದರಿಂದ ಈ ಅಜ್ಞಾನ-ಉಪಾಧಿಗಳ ಪರಂಪರೆಯೂ ಅಪ್ರಾಮಾಣಿಕವಾಗಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಜೀವ-ಬ್ರಹ್ಮರಲ್ಲಿ ಆತ್ಯಂತಿಕ (ಪಾರಮಾರ್ಥಿಕ) ಭೇದವನ್ನು ಅಂಗೀಕರಿಸಿಯೇ ಜೀವನಲ್ಲಿ ಸತ್ಯಭೂತ-ಅಜ್ಞಾನಪ್ರತೀತಿಯನ್ನು ನಿರ್ವಾಹ ಮಾಡಲು ಬರುವಾಗ ಅನಂತ ಉಪಾಧಿ -ಅಜ್ಞಾನವ್ಯಕ್ತಿ ಪರಂಪರಾಕಲ್ಪನೆ ಮಾಡುವುದಾದರೆ ಗೌರವದೋಷ ಬರಬೇಕಾಗುತ್ತದೆ. ಆದ್ದರಿಂದ ಅಜ್ಞಾನ-ಉಪಾಧಿಗಳ ಪರಂಪರೆಯು ಅಪ್ರಾಮಾಣಿಕವಾಗಿರುವುದರಿಂದ ಅನವಸ್ಥಾದೋಷ ಬಂದೇ ಬರುತ್ತದೆ.

**ಟೀಕಾ :- ಸ್ಯಾದೇವಂ, ಯದಿ ಅಜ್ಞಾನೋಪಾಧಿವ್ಯಕ್ತಿಭೇದಃ ಸ್ಯಾತ್ । ನ ಚೈವಮ್ । ಏಕಮೇವ ಅಜ್ಞಾನಂ ಉಪಾಧಿಶ್ಚ ಇತ್ಯಂಗೀಕಾರಾದಿತಿ ಚೇತ್, ಏವಂ ತರ್ಹಿ ಮಾ ಭೂತ್ ಅನವಸ್ಥಾ । ಅನ್ಯೋನ್ಯಾಶ್ರಯಸ್ತು ಭವಿಷ್ಯತಿ ಇತ್ಯಾಹ -**

**ಮೂಲ :- ವಾಽನ್ಯೋನ್ಯಸಿದ್ಧಿತಾ ॥**

**ವಾಶಬ್ದೋ ವ್ಯವಸ್ಥಿತವಿಕಲ್ಪೇ । ಅನ್ಯೋನ್ಯೇನ ಸಿದ್ಧಿರ್ಯಯೋ-ಸ್ತಾವನ್ಯೋನ್ಯಸಿದ್ಧೀ । ತದ್ಭಾವೋಽನ್ಯೋನ್ಯಸಿದ್ಧಿತಾ । ಅಜ್ಞಾನೋಪಾಧ್ಯೋರಿತಿ ಸಂಬಂಧಃ ।**

**ಅನುವಾದ :-** ಈ ರೀತಿ ಅನವಸ್ಥಾ ಬರುತ್ತಿತ್ತು. ನಾವು ಅನಂತ ಉಪಾಧಿ ವ್ಯಕ್ತಿಗಳನ್ನು, ಅನಂತ ಅಜ್ಞಾನವ್ಯಕ್ತಿಗಳನ್ನು ಅಂಗೀಕರಿಸುತ್ತಿದ್ದರೆ ಆಗ ಈ ರೀತಿಯಾಗಿ ಅನವಸ್ಥಾದೋಷ ಬರುತ್ತಿತ್ತು . ಆದರೆ ನಾವು ಆ ರೀತಿಯಾಗಿ ಅಂಗೀಕರಿಸುವುದಿಲ್ಲ. ಕಿಂತು ಜೀವನಲ್ಲಿ ಒಂದೇ ಅಜ್ಞಾನವಿದೆ. ಆ ಅಜ್ಞಾನಕ್ಕೆ ಘಟಕವಾದ ಉಪಾಧಿಯೂ ಒಂದೇ ಆಗಿದೆ. ಹೀಗೆ ಒಂದೇ ಅಜ್ಞಾನ, ಒಂದೇ ಉಪಾಧಿ ಎಂಬುದಾಗಿ ಎರಡು ವ್ಯಕ್ತಿಗಳನ್ನು ಮಾತ್ರ ಅಂಗೀಕರಿಸುವುದರಿಂದ ಅನವಸ್ಥಾದೋಷ ಬರುವುದಿಲ್ಲ ಎಂದು ಶಂಕಿಸಿದರೆ, ಹಾಗಾದರೆ ಅನವಸ್ಥಾ ಬರುವುದು ಬೇಡ. ಕಿಂತು ಅನ್ಯೋನ್ಯಾಶ್ರಯವಂತೂ ಬಂದೇ ಬರುತ್ತದೆ ಎಂದು ಹೇಳುತ್ತಾರೆ -

**ಮೂಲ :-ವಾಽನ್ಯೋನ್ಯಸಿದ್ಧಿತಾ ।**

**ಮೂಲಾರ್ಥ :- ಒಂದೇ ಅಜ್ಞಾನ ಒಂದೇ ಉಪಾಧಿ ಎಂಬುದಾಗಿ ಎರಡೇ ವ್ಯಕ್ತಿಗಳನ್ನು ಅಂಗೀಕರಿಸುವುದಾದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ.**

ಮೂಲದಲ್ಲಿ ವ್ಯವಸ್ಥಿತವಿಕಲ್ಪ ತೋರಿಸುವುದಕ್ಕಾಗಿ 'ವಾ'ಶಬ್ದವನ್ನು ಬಳಸಿದ್ದಾರೆ. ಅಂದರೆ ಉಪಾಧಿವ್ಯಕ್ತಿ-ಅಜ್ಞಾನವ್ಯಕ್ತಿಗಳ ಆನಂತ್ಯಪಕ್ಷದಲ್ಲಿ ಅನವಸ್ಥಾದೋಷ ಹೇಳಲಾಯಿತು. ಅದೇ ಆನಂತ್ಯಪಕ್ಷದಲ್ಲಿಯೇನೇ ಅನ್ಯೋನ್ಯಾಶ್ರಯದೋಷವನ್ನೂ ಹೇಳುತ್ತಿದ್ದಾರೆ ಎಂಬುದಾಗಿ 'ವಾ' ಶಬ್ದದಿಂದ ತೋರುತ್ತದೆ. ಆದರೆ ಹಾಗೆ ಒಂದೇ ಪಕ್ಷಕ್ಕೆ ಎರಡು ದೋಷಗಳನ್ನು ಹೇಳುತ್ತಿಲ್ಲ. ಕಿಂತು ಉಪಾಧಿವ್ಯಕ್ತಿ-ಅಜ್ಞಾನವ್ಯಕ್ತಿಗಳ ಆನಂತ್ಯಪಕ್ಷಕ್ಕೆ ಅನವಸ್ಥಾ ದೋಷ ಹೇಳಿದ್ದು. ಉಪಾಧಿವ್ಯಕ್ತಿ-ಅಜ್ಞಾನವ್ಯಕ್ತಿಗಳು ಒಂದೊಂದೇ ಎಂಬ ಏಕತ್ವಪಕ್ಷಕ್ಕೆ ಅನ್ಯೋನ್ಯಾಶ್ರಯದೋಷ ಹೇಳಬೇಕು ಎಂಬುದಾಗಿ ಪಕ್ಷಭೇದದಿಂದ ವ್ಯವಸ್ಥಿತವಾದ ದೋಷಗಳನ್ನು ತಿಳಿಸುವುದಕ್ಕಾಗಿ 'ವಾ'ಶಬ್ದಪ್ರಯೋಗ ಮಾಡಿದ್ದಾರೆ ಆಚಾರ್ಯರು ಎಂದು ಭಾವ.

ಮೂಲದಲ್ಲಿ 'ಅನ್ಯೋನ್ಯಸಿದ್ಧಿತಾ' ಎನ್ನುವಲ್ಲಿ ''ಅನ್ಯೋನ್ಯೇನ ಸಿದ್ಧಿಃ ಯಯೋಃ ತೌ ಅನ್ಯೋನ್ಯಸಿದ್ಧೀ, (ಪರಸ್ಪರವಾಗಿ ಸಿದ್ಧಿ ಉಳ್ಳವುಗಳು = ಅಜ್ಞಾನ-ಉಪಾಧಿಗಳು.) ಅನ್ಯೋನ್ಯಸಿದ್ಧ್ಯೋಃ ಭಾವಃ ಅನ್ಯೋನ್ಯಸಿದ್ಧಿತಾ'' ಎಂಬುದಾಗಿ ವಿಗ್ರಹ ಮಾಡಿಕೊಳ್ಳಬೇಕು. ಹಾಗಾದರೆ - ಅಜ್ಞಾನವು ಸಿದ್ಧವಾದರೆ ಆ ಅಜ್ಞಾನದಿಂದ ಕಲ್ಪಿತವಾದ ಉಪಾಧಿಯು ಸಿದ್ಧವಾಗುತ್ತದೆ. ಉಪಾಧಿಯು ಸಿದ್ಧವಾದರೆ ಆ ಉಪಾಧಿಯಿಂದ ಭಿನ್ನನಾದ ಜೀವನಲ್ಲಿ ಅಜ್ಞಾನವು ಸಿದ್ಧವಾಗುತ್ತದೆ.

ಅನ್ಯೋನ್ಯಾಶ್ರಯ ದೋಷದ ಚಿತ್ರಣ

**ಅಜ್ಞಾನ** →→ಕಲ್ಪಿತ→→ **ಉಪಾಧಿ**
←ಉಪಾಧಿಭಿನ್ನಜೀವನಲ್ಲಿ←

ಹೀಗೆ ಅಜ್ಞಾನ-ಉಪಾಧಿಗಳು ಪರಸ್ಪರವಾಗಿ ಸಿದ್ಧಿ ಉಳ್ಳವುಗಳಾದ್ದರಿಂದ ಅಜ್ಞಾನ-ಉಪಾಧಿವ್ಯಕ್ತಿಗಳು ಒಂದೊಂದೇ ಎಂಬ ಏಕತ್ವಪಕ್ಷದಲ್ಲಿ ಅನ್ಯೋನ್ಯಾಶ್ರಯ ದೋಷ ಬರುತ್ತದೆ ಎಂದು ಭಾವ.

**ಅವತಾರಿಕೆ :-** ''ಅಜ್ಞಾನವು ಸಿದ್ಧವಾದರೆ ಅಜ್ಞಾನಕಲ್ಪಿತವಾದ ಉಪಾಧಿಯು ಸಿದ್ಧವಾಗುತ್ತದೆ. ಉಪಾಧಿಯು ಸಿದ್ಧವಾದರೆ ಉಪಾಧಿಭಿನ್ನನಾದ ಜೀವನಲ್ಲಿ ಅಜ್ಞಾನವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ಬರುತ್ತದೆ'' ಎಂಬುದಾಗಿ ನಾವು ಕೊಟ್ಟ (ಅನ್ಯೋನ್ಯಾಶ್ರಯದೋಷದ ಮೇಲೆ ಪರರು ಆಶಂಕಿಸುತ್ತಾರೆ) ಅನ್ಯೋನ್ಯಾಶ್ರಯ ದೋಷವನ್ನು ಪರಿಹರಿಸಿಕೊಳ್ಳಲು ಪರರು ಪ್ರಯತ್ನಿಸುತ್ತಾರೆ -

**ಟೀಕಾ :- ನನೂಪಾಧೇರಜ್ಞಾನನಿಮಿತ್ತಕತ್ವೇ[54]ಽಪ್ಯಜ್ಞಾನಸ್ಯ [55]ಉಪಾಧಿ ಹೇತುಕತ್ವಾಭಾವಾತ್ ಕಥಂ ಇತರೇತರಾಶ್ರಯಃ ? ಭೇದ ಏವ ಹ್ಯುಪಾಧಿ ನಿಮಿತ್ತೋ[56]ಽಂಗೀಕ್ರಿಯತ ಇತ್ಯತ ಆಹ -**

**ಮೂಲ :- ಚಕ್ರಕಾಪತ್ತಿರಥವಾ .... ।**

**ಟೀಕಾ :- ಅಥ ವಾ ಇತ್ಯಯಂ [57]ನಿಪಾತಸಮುದಾಯಃ [58]ಪಕ್ಷಾಂತರ-ದ್ಯೋತಕಃ । ಯದ್ಯಪಿ ಭೇದ ಏವೋಪಾಧ್ಯಧೀನ ಉಕ್ತಃ ತಥಾಪಿ ಉಪಾಧಿಭಿನ್ನೇ ಜೀವೇಽಪಿ ಅಜ್ಞಾನಮಂಗೀಕ್ರಿಯಮಾಣಂ ಪರಂಪರಯಾ ಉಪಾಧಿಹೇತುಕಂ**

---

54) ಅಜ್ಞಾನಕಲ್ಪಿತತ್ವೇಽಪಿ ಇತ್ಯರ್ಥಃ ।

55) ಉಪಾಧಿಕಲ್ಪಿತತ್ವಾಭಾವಾತ್ ಇತ್ಯರ್ಥಃ ।

56) ಔಪಾಧಿಕಃ ಇತ್ಯರ್ಥಃ ।

57) ಅಥ ವೇತಿ ನಿಪಾತಸಮುದಾಯಃ ಅವ್ಯಯದ್ವಯಮಿತ್ಯರ್ಥಃ । (ಶ್ರೀನಿ)

58) ಪೂರ್ವೋಕ್ತಪರಂಪರಾಶ್ರಯಣಪಕ್ಷಾತ್ ಪಕ್ಷಾಂತರಂ ಪರಂಪರಾನಾಶ್ರಯಣರೂಪಂ ತದ್ದ್ಯೋತಕ ಇತ್ಯರ್ಥಃ । (ಶ್ರೀನಿ)

**ಭವೇತ್ ಇತಿ [59]ನೇತರೇತರಾಶ್ರಯಃ ಶಕ್ಯಸಮಾಧಾನಃ । [60]ಪರಸ್ಪರಾನಾಶ್ರಯಣೇಽಪಿ ಚಕ್ರಕಮಾಪದ್ಯೇತ ಏವ । ಅಜ್ಞಾನಾಧೀನ[61] ಉಪಾಧಿಃ ತದಧೀನೋ[62] ಭೇದಃ [63]ಭಿನ್ನಾಶ್ರಯಮಜ್ಞಾನಮಿತಿ ।**

**ಅನುವಾದ :-** ಉಪಾಧಿಯು ಅಜ್ಞಾನನಿಮಿತ್ತಕವಾಗಿದೆ ಎಂದು ಅಂಗೀಕರಿಸಿದರೂ ಸಹ ಅಜ್ಞಾನವು ಉಪಾಧಿನಿಮಿತ್ತಕವಾಗಿದೆ ಎಂದು ಅಂಗೀಕರಿಸುವುದಿಲ್ಲ. ಉಪಾಧಿನಿಮಿತ್ತಕವಾದ ಭೇದವು ಮಾತ್ರವೇ ಅಜ್ಞಾನಕ್ಕೆ ನಿಮಿತ್ತವಾಗಿದೆ ಎಂದು ಅಂಗೀಕರಿಸುತ್ತೇವೆ. ಆದ್ದರಿಂದ ಅನ್ಯೋನ್ಯಾಶ್ರಯದೋಷ ಹೇಗೆ ಬರುತ್ತದೆ ?

(ಅಜ್ಞಾನವು ಸಿದ್ಧವಾದರೆ ಆ ಅಜ್ಞಾನಕಲ್ಪಿತವಾದ ಉಪಾಧಿಯು ಸಿದ್ಧವಾಗುತ್ತದೆ ಎಂದು ಅಂಗೀಕರಿಸುತ್ತೇವೆ. ಆದರೆ ಉಪಾಧಿಯು ಸಿದ್ಧವಾದರೆ ಅಜ್ಞಾನವು ಸಿದ್ಧವಾಗುತ್ತದೆ ಎಂದು ಅಂಗೀಕರಿಸುವುದಿಲ್ಲ. ಕಾರಣ ಅಜ್ಞಾನವು ಉಪಾಧಿ ಕಲ್ಪಿತವಾಗಿಲ್ಲ. ಕಿಂತು ಉಪಾಧಿನಿಮಿತ್ತಕವಾದ ಜೀವ-ಬ್ರಹ್ಮರ ಭೇದವೇ ಅಜ್ಞಾನಕ್ಕೆ ನಿಮಿತ್ತ ಎಂದು ಅಂಗೀಕರಿಸುತ್ತೇವೆ. ಆದ್ದರಿಂದ ಅನ್ಯೋನ್ಯಾಶ್ರಯದೋಷ ಬರುವುದಿಲ್ಲವಲ್ಲ ?)

ಎಂಬುದಾಗಿ ಪರರು ಶಂಕಿಸಿದರೆ , ಅದಕ್ಕೆ ಆಚಾರ್ಯರು ಹೇಳಿದರು -

**ಮೂಲ :- ಚಕ್ರಕಾಪತ್ತಿರಥ ವಾ ..... ।**

---

59) ನೇತರೇತರಾಶ್ರಯಃ ಶಕ್ಯಸಮಾಧಾನ ಇತಿ । ತಥಾ ಚಾಜ್ಞಾನಸಿದ್ಧೌ ತತ್ಕಲ್ಪಿತೋಪಾಧಿ ಸಿದ್ಧಿಃ । ತತ್ಸಿದ್ಧೌ ಚ ಉಪಾಧಿಭಿನ್ನೇ ಜೀವೇಽಜ್ಞಾನಸಿದ್ಧಿರಿತಿ ಕೋಟಿದ್ವಯಮಭ್ಯುಪೇತ್ಯ ಪೂರ್ವೋಕ್ತಾನ್ಯೋನ್ಯಾಶ್ರಯಃ ನ ಶಕ್ಯಸಮಾಧಾನಃ । ಸಮಾಧಾನಂ ಕರ್ತುಂ ಪರಿಹರ್ತುಮಿತಿ ಯಾವತ್ । ನ ಶಕ್ಯಃ । ಅನ್ಯೋನ್ಯಾಶ್ರಯೋ ಭವಿಷ್ಯತ್ಯೇವ ಇತ್ಯರ್ಥಃ । (ಶ್ರೀನಿ)

60) ಅಜ್ಞಾನಂ ಭೇದದ್ವಾರಾ ಉಪಾಧಿಹೇತುಕಂ ಇತ್ಯನಂಗೀಕಾರೇಽಪೀತ್ಯರ್ಥಃ । (ಶ್ರೀನಿ)

61) ಅಜ್ಞಾನಕಲ್ಪಿತಃ ।

62) ಉಪಾಧಿನಿಮಿತ್ತಃ (ಔಪಾಧಿಕಃ) ।

63) ಉಪಾಧಿಭಿನ್ನಜೀವವೃತ್ತಿ ।

**ಮೂಲಾರ್ಥ :- ಅಜ್ಞಾನ-ಉಪಾಧಿಗಳು ಸಾಕ್ಷಾತ್ತಾಗಿ ಪರಸ್ಪರಹೇತುಕಗಳಾಗಿಲ್ಲ ಎಂಬ ಪಕ್ಷದಲ್ಲಿ ಅನ್ಯೋನ್ಯಾಶ್ರಯದೋಷ ಬರದಿದ್ದರೂ ಚಕ್ರಕದೋಷವು ಬಂದೇ ಬರುತ್ತದೆ.**

ಮೂಲದಲ್ಲಿ 'ಅಥ ವಾ' ಎಂಬ ಈ ನಿಪಾತಸಮುದಾಯವು (ಎರಡು ಅವ್ಯಯಗಳು) ಪಕ್ಷಾಂತರದ್ಯೋತಕವಾಗಿದೆ. (ಹಿಂದೆ ಹೇಳಿದ ಪರಸ್ಪರಾಶ್ರಯಣ ಪಕ್ಷದಿಂದ ಭಿನ್ನವಾದ ಪರಸ್ಪರಾನಾಶ್ರಯಣಪಕ್ಷಕ್ಕೆ ದ್ಯೋತಕವಾಗಿದೆ.)

ಯದ್ಯಪಿ ಭೇದವು ಮಾತ್ರವೇ ಉಪಾಧ್ಯಧೀನವಾಗಿದೆ ಎಂದು ಹೇಳಿದ್ದು. ಅಜ್ಞಾನವು ಉಪಾಧ್ಯಧೀನವಾಗಿದೆ ಎಂದು ಹೇಳಿಲ್ಲ. ಆದರೂ ಸಹ ಉಪಾಧಿಯು ಸಿದ್ಧವಾದರೆ ಉಪಾಧಿಭಿನ್ನನಾದ ಜೀವನಲ್ಲಿ ಅಜ್ಞಾನವನ್ನು ಅಂಗೀಕರಿಸುವುದರಿಂದ, ಅಜ್ಞಾನವು ಪರಂಪರಯಾ (ಭೇದದ್ವಾರಾ) ಉಪಾಧಿಹೇತುಕವಾದಂತಾಯಿತು. ಹಾಗಾಗಿ ಅಜ್ಞಾನ-ಉಪಾಧಿಗಳು ಅನ್ಯೋನ್ಯಸಿದ್ಧಿ ಉಳ್ಳವುಗಳೇ ಆಗುವುದರಿಂದ ಅನ್ಯೋನ್ಯಾಶ್ರಯಕ್ಕೆ ಸಮಾಧಾನ (ಪರಿಹಾರ) ಹೇಳಲು ಶಕ್ಯವಿಲ್ಲ. ಅನ್ಯೋನ್ಯಾಶ್ರಯದೋಷವು ಬಂದೇ ಬರುತ್ತದೆ.

ಇನ್ನು ಅಜ್ಞಾನವು ಪರಂಪರಯಾ ಉಪಾಧಿಹೇತುಕವಾಗಿದೆಯೇ ಹೊರತು ಸಾಕ್ಷಾತ್ ಉಪಾಧಿಹೇತುಕವಾಗಿಲ್ಲ. ಆದ್ದರಿಂದ ಅನ್ಯೋನ್ಯಾಶ್ರಯ ಬರುವುದಿಲ್ಲ ಎಂದು ಶಂಕಿಸಿದರೆ, ಹೀಗೆ ಪರಸ್ಪರಾನಾಶ್ರಯಣಪಕ್ಷದಲ್ಲಿ (ಅಜ್ಞಾನ-ಉಪಾಧಿಗಳು ಸಾಕ್ಷಾತ್ತಾಗಿ ಪರಸ್ಪರಹೇತುಕಗಳಾಗಿಲ್ಲ ಎಂಬ ಪಕ್ಷದಲ್ಲಿ) ಚಕ್ರಕದೋಷವು ಬಂದೇ ಬರುತ್ತದೆ.

ಅಜ್ಞಾನವು ಇದ್ದರೆ ಅಜ್ಞಾನಕಲ್ಪಿತವಾದ ಉಪಾಧಿಯು ಸಿದ್ಧವಾಗುತ್ತದೆ.
ಉಪಾಧಿಯು ಇದ್ದರೆ ಉಪಾಧ್ಯಧೀನವಾದ ಭೇದವು ಸಿದ್ಧವಾಗುತ್ತದೆ.
ಭೇದವು ಇದ್ದರೆ ಭೇದ ಉಳ್ಳ ಜೀವನಲ್ಲಿ ಅಜ್ಞಾನವು ಸಿದ್ಧವಾಗುತ್ತದೆ.

ಹೀಗೆ ಈ ಪಕ್ಷದಲ್ಲಿ ಅನ್ಯೋನ್ಯಾಶ್ರಯ ದೋಷವು ಬರದಿದ್ದರೂ ಚಕ್ರಕದೋಷವು ಬಂದೇ ಬರುತ್ತದೆ.

ಚಕ್ರಕದೋಷದ ಚಿತ್ರಣ-




**ಟೀಕಾ :- ಅಥ ವಾ ಅಥಶಬ್ದ ಏವ [64] ಪೂರ್ವತ್ರ ಸಂಬಧ್ಯತೇ । ವಾಶಬ್ದೇನ ಆತ್ಮಾಶ್ರಯತ್ವಾದಿಕಂ [65] ಪಕ್ಷಾಂತರೇ ಸೂಚಯತಿ ।**

**[66] ತತ್ರೇಯಮಾಶಂಕಾ । ಸ್ಯಾದೇತದನ್ಯೋನ್ಯಾಶ್ರಯಾದಿಕಂ ಯದಿ ಅಂತಃಕರಣಾದಿಕಂ [67] ಅಜ್ಞಾನಾದನ್ಯದೇವೋಪಾಧಿತಯಾ ಅಂಗೀಕ್ರಿಯತೇ । [68] ನ ಚೈವಮ್ । ಅಜ್ಞಾನಸ್ಯೋಪಾಧಿತಯಾ ಅಂಗೀಕಾರಾತ್ ।**

**ಅನುವಾದ :-** ಅಥವಾ 'ಚಕ್ರಕಾಪತ್ತಿರಥ ವಾ' ಎಂಬ ಮೂಲದಲ್ಲಿರುವ ಅಥ ಮತ್ತು ವಾ ಎಂಬ ಅವ್ಯಯಗಳಿಗೆ ಪ್ರತ್ಯೇಕವಾಗಿ ಅನ್ವಯ. ಅಂದರೆ - ಅಥಶಬ್ದವು 'ಚಕ್ರಕಾಪತ್ತಿರಥ' ಎಂಬ ಹಿಂದಿನ ವಾಕ್ಯದಲ್ಲಿಯೇ ಸಂಬದ್ಧ(ಅನ್ವಿತ)ವಾಗುತ್ತದೆ. ಇನ್ನು 'ವಾ'ಶಬ್ದದಿಂದ ಪಕ್ಷಾಂತರದಲ್ಲಿ (ಅಂತಃಕರಣಾದಿಗಳೇ ಜೀವ-ಬ್ರಹ್ಮಭೇದ ಹೇತುವಾದ ಉಪಾಧಿಯಾಗಿದೆ ಎಂಬ ವಾಚಸ್ಪತಿಗಳ ಪಕ್ಷದಿಂದ ಭಿನ್ನವಾದ

---

64) ಪೂರ್ವತ್ರೇತಿ । ಚಕ್ರಕಾಪತ್ತಿರಥ ಇತ್ಯೇವಂ ಪೂರ್ವವಾಕ್ಯ ಏವ ಸಂಬಧ್ಯತ ಇತ್ಯರ್ಥಃ । (ಶ್ರೀನಿ)

65) ಪಕ್ಷಾಂತರ ಇತಿ । ಅಂತಃಕರಣಾದಿಕಮೇವ ಜೀವಬ್ರಹ್ಮಭೇದಹೇತುಭೂತೋಪಾಧಿರಿತಿ ವಾಚಸ್ಪತಿಪಕ್ಷಾತ್ ಪಕ್ಷಾಂತರೇ ವಿವರಣಕಾರಪಕ್ಷ ಇತ್ಯರ್ಥಃ । (ಶ್ರೀನಿ)

66) ಪಕ್ಷಾಂತರಮೇವ ದರ್ಶಯತಿ । ತತ್ರೇಯಮಾಶಂಕೇತಿ । (ಶ್ರೀನಿ)

67) ಅಂತಃಕರಣಾದಿಕಮಿತ್ಯತ್ರ ಆದಿಪದೇನ ದೇಹೇಂದ್ರಿಯಗ್ರಹಣಮ್ । (ಶ್ರೀನಿ)

68) ಅಂತಃಕರಣಾದಿಕಂ ಉಪಾಧಿತಯಾ ನ ಅಂಗೀಕುರ್ಮ ಇತ್ಯರ್ಥಃ ।

ವಿವರಣಕಾರರ ಪಕ್ಷದಲ್ಲಿ=ಅಜ್ಞಾನವೇ ಉಪಾಧಿಯಾಗಿದೆ ಎಂಬ ಪಕ್ಷದಲ್ಲಿ) ಆತ್ಮಾಶ್ರಯ ಮೊದಲಾದ ದೋಷಗಳನ್ನು ಸೂಚಿಸುತ್ತಿದ್ದಾರೆ ಆಚಾರ್ಯರು.

ಆ ಪಕ್ಷಾಂತರ (ವಿವರಣಕಾರರ ಪಕ್ಷ) ಯಾವುದು (ಏನು) ? ಎಂದು ತಿಳಿಸುತ್ತಾರೆ- 'ತತ್ರೇಯಮಾಶಂಕಾ' ಇತ್ಯಾದಿಯಾಗಿ.

ವಿವರಣಕಾರರು ಶಂಕಿಸುತ್ತಾರೆ - ಈ ರೀತಿ ಅನ್ಯೋನ್ಯಾಶ್ರಯ ಮೊದಲಾದ ದೋಷಗಳು ಬರುತ್ತಿದ್ದವು. ಯಾವಾಗ ? ಒಂದುವೇಳೆ ಅಜ್ಞಾನದಿಂದ ಭಿನ್ನವಾದ ಅಂತಃಕರಣಾದಿಗಳನ್ನು (ಅಂತಃಕರಣ-ದೇಹ-ಇಂದ್ರಿಯಗಳನ್ನು) ಉಪಾಧಿಯನ್ನಾಗಿ ಅಂಗೀಕರಿಸುತ್ತಿದ್ದಾರೆ ಆಗ ಅನ್ಯೋನ್ಯಾಶ್ರಯಾದಿಗಳಿಗೆ ಅವಕಾಶವಿರುತ್ತಿತ್ತು . ಆದರೆ ನಾವು ಅಂತಃಕರಣಾದಿಗಳನ್ನು ಉಪಾಧಿಯನ್ನಾಗಿ ಅಂಗೀಕರಿಸುವುದಿಲ್ಲ. ಕಿಂತು ಅಜ್ಞಾನವನ್ನೇ ಉಪಾಧಿಯನ್ನಾಗಿ ಅಂಗೀಕರಿಸುತ್ತೇವೆ. ಅಜ್ಞಾನವೇ ಉಪಾಧಿ ಎಂಬ ಈ ನಮ್ಮ ಪಕ್ಷದಲ್ಲಿ ಅನ್ಯೋನ್ಯಾಶ್ರಯಾದಿಗಳಿಗೆ ಅವಕಾಶವಿಲ್ಲ ಎಂಬುದಾಗಿ ವಿವರಣಕಾರರ ಆಕ್ಷೇಪ.

**ಟೀಕಾ :- ನನ್ವವಿದ್ಯಾ [69]ಕಿಂಸಂಬಂಧಿನೀ ಭೇದನಿಮಿತ್ತಂ ? । ದರ್ಪಣಾದಿ-ದ್ರವ್ಯಮಪಿ [70]ಕಿಂಸಂಬಂಧಿ ಭೇದನಿಮಿತ್ತಂ ? । [71]ಮುಖಮಾತ್ರಸಂಬಂಧಿ ಇತಿ ಚೇತ್, ಇಹಾಪಿ [72]ಚಿತ್ಸ್ವರೂಪಮಾತ್ರಸಂಬಂಧಿ ಅಜ್ಞಾನಂ ಜೀವಬ್ರಹ್ಮಭೇದಂ ಕರೋತಿ । ಸ್ವರೂಪಮಾತ್ರಸಂಬಂಧಿನೋಽಪ್ಯಜ್ಞಾನಸ್ಯ [73]ಜೀವಭಾಗಪಕ್ಷಪಾತಿತಾ [74]ದರ್ಪಣಾದಿವತ್ ಯುಜ್ಯತ ಇತಿ ।**

---

69) ಕಿಂ ಪ್ರತಿಬಿಂಬಭೂತಂ ಜೀವಂ ಸಂಬದ್ಧ್ಯ ಭೇದಂ ಕರೋತಿ ? ಉತ ಬಿಂಬಭೂತಂ ಬ್ರಹ್ಮ ಸಂಬದ್ಧ್ಯ ? ಇತಿ ಪ್ರಶ್ನಾಭಿಪ್ರಾಯಃ ।

70) ಕಿಂ ಬಿಂಬಭೂತಂ ಮುಖಂ ಸಂಬದ್ಧ್ಯ ಭೇದಂ ಕರೋತಿ ? ಉತ ಪ್ರತಿಬಿಂಬಭೂತಂ ಪ್ರತಿಮುಖಂ ಸಂಬದ್ಧ್ಯ ? ಇತಿ ಪ್ರಶ್ನಾಭಿಪ್ರಾಯಃ ।

71) ದರ್ಪಣಾದಿದ್ರವ್ಯಂ ಬಿಂಬಭೂತಂ ಮುಖಮಾತ್ರಮೇವ ಸಂಬದ್ಧ್ಯ ಭೇದನಿಮಿತ್ತಂ ಭವತಿ । ನ ಯತ್ಕಿಂಚಿತ್ ಘಟಾದಿಕಂ ಸಂಬದ್ಧ್ಯೇತಿ ಮಾತ್ರಶಬ್ದಾರ್ಥಃ । (ಶ್ರೀನಿ)

72) ಬಿಂಬಪ್ರತಿಬಿಂಬಭೂತಜೀವಬ್ರಹ್ಮಾನುಸ್ಯೂತಚಿನ್ಮಾತ್ರರೂಪಸ್ವರೂಪಮಾತ್ರೇತ್ಯರ್ಥಃ । (ಶ್ರೀನಿ)

73) ಉಪಾಧೇಃ ಪ್ರತಿಬಿಂಬಪಕ್ಷಪಾತಿತ್ವಸ್ವಭಾವ್ಯೇನ ಸ್ವಭಾವಸ್ಯಾನಪಾಯಾತ್ ಇತ್ಯರ್ಥಃ । ಚಿತ್ಸ್ವರೂಪಮಾತ್ರಸಂಬಂಧಿ ಅಜ್ಞಾನಂ ಸ್ವಕಾರ್ಯದುಃಖಾದಿಕಂ ಪ್ರತಿಬಿಂಬಭೂತೇ ಜೀವೇ ದರ್ಶಯತೀತ್ಯೇತದಿತ್ಯರ್ಥಃ ॥ (ಶ್ರೀನಿ)

**ಅನುವಾದ :-**

**ಸಿದ್ಧಾಂತಿಯ ಪ್ರಶ್ನೆ** - ಅವಿದ್ಯೆಯು (ಅಜ್ಞಾನ ಎಂಬ ಉಪಾಧಿಯು) ಅಸಂಬದ್ಧವಾಗಿ ಭೇದನಿಮಿತ್ತ(ಭೇದಕ)ವಾಗುವುದಾದರೆ ಅತಿಪ್ರಸಂಗ ಬರುವುದರಿಂದ ಸಂಬದ್ಧವಾಗಿಯೇ ಭೇದನಿಮಿತ್ತವಾಗುತ್ತದೆ ಎಂದು ಹೇಳಬೇಕು. ಹಾಗಾದರೆ ಅವಿದ್ಯೆಯು ಯಾವುದನ್ನು ಸಂಬಂಧಿಸಿ ಭೇದನಿಮಿತ್ತವಾಗುತ್ತದೆ ?.

**ಪೂರ್ವಪಕ್ಷಿಯ ಮರುಪ್ರಶ್ನೆ** - ಮುಖ-ಪ್ರತಿಮುಖಗಳಲ್ಲಿ ಬಿಂಬ-ಪ್ರತಿಬಿಂಬಭಾವಕ್ಕೆ ಉಪಾಧಿಯಾಗಿರುವ ದರ್ಪಣಾದಿದ್ರವ್ಯವೂ ಸಹ ಯಾವುದನ್ನು ಸಂಬಂಧಿಸಿ ಭೇದನಿಮಿತ್ತವಾಗಿದೆ ಎನ್ನುತ್ತೀರಿ ?

**ಸಿದ್ಧಾಂತಿಯ ಉತ್ತರ** - ದರ್ಪಣಾದಿದ್ರವ್ಯವು ಬಿಂಬಭೂತವಾದ ಮುಖಮಾತ್ರವನ್ನು ಸಂಬಂಧಿಸಿ ಭೇದನಿಮಿತ್ತವಾಗುತ್ತದೆ ಎನ್ನುತ್ತೇವೆ.

**ಪೂರ್ವಪಕ್ಷಿಯ ಉತ್ತರ** - ಹಾಗಾದರೆ ಇಲ್ಲಿಯೂ ಸಹ ಅಜ್ಞಾನವು (ಜೀವ-ಬ್ರಹ್ಮರಲ್ಲಿ ಅನುಸ್ಯೂತವಾದ) ಚಿತ್ಸ್ವರೂಪವನ್ನು ಮಾತ್ರ ಸಂಬಂಧಿಸಿ ಭೇದನಿಮಿತ್ತವಾಗುತ್ತದೆ ಎಂದು ನಾವೂ ಹೇಳುತ್ತೇವೆ. ಅಜ್ಞಾನವು ಚಿತ್ಸ್ವರೂಪಮಾತ್ರಸಂಬಂಧಿಯಾಗಿದ್ದರೂ ಸಹ ದರ್ಪಣಾದಿಗಳಂತೆ ಅದಕ್ಕೆ ಜೀವಭಾಗಪಕ್ಷಪಾತಿತ್ವವು ಉಪಪನ್ನವಾಗುತ್ತದೆ.

ಇದು ವಿವರಣಕಾರರ ಪೂರ್ವಪಕ್ಷಾಭಿಪ್ರಾಯ.

**ವಿವರಣೆ :-**

**ಸಿದ್ಧಾಂತೀ :-** ಅಜ್ಞಾನವೇ ಉಪಾಧಿ ಎನ್ನುವುದಾದರೆ, ಆ ಅಜ್ಞಾನವು ಭೇದನಿಮಿತ್ತವಾಗಿದೆ (ಭೇದಕವಾಗಿದೆ = ಭೇದಕ್ಕೆ ನಿಮಿತ್ತಕಾರಣವಾಗಿದೆ) ಎಂಬುದಾಗಿ ಅವಶ್ಯವಾಗಿ ಹೇಳಲೇಬೇಕು. ಆ ಅಜ್ಞಾನ ಎಂಬ ಉಪಾಧಿಯು ಅಸಂಬದ್ಧವಾಗಿ ಭೇದನಿಮಿತ್ತವಾಗುತ್ತದೆಯೋ ? ಸಂಬದ್ಧವಾಗಿ ಭೇದನಿಮಿತ್ತವಾಗುತ್ತದೆಯೋ ?

---

74) ಯಥಾ ಮುಖಪ್ರತಿಮುಖಾನುಸ್ಯೂತಮುಖಮಾತ್ರಂ ಸಂಬದ್ಧ್ಯಾಪಿ ದರ್ಪಣಾದಿಕಂ ಸ್ವಕಾರ್ಯಮಾಲಿನ್ಯಾದಿಕಂ ಪ್ರತಿಮುಖೇ ಏವ ಪ್ರದರ್ಶಯತಿ । ನಾನ್ಯತ್ರ । ತದ್ವದಿತ್ಯರ್ಥಃ ।

ಅಸಂಬದ್ಧವಾಗಿ (ಯಾವುದನ್ನೂ ಸಂಬಂಧಿಸದೇ) ಭೇದನಿಮಿತ್ತವಾಗುತ್ತದೆ ಎನ್ನುವುದಾದರೆ ಘಟಪಟಾದಿಗಳೂ ಭೇದನಿಮಿತ್ತವಾಗಲಿ ಎಂಬ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಸಂಬದ್ಧವಾಗಿಯೇ ಭೇದನಿಮಿತ್ತವಾಗುತ್ತದೆ ಎಂದು ಹೇಳಬೇಕು. ಸಂಬದ್ಧವಾಗಿ ಭೇದನಿಮಿತ್ತವಾಗುವುದಾದರೆ, ಪ್ರತಿಬಿಂಬನಾದ ಜೀವನನ್ನು ಸಂಬಂಧಿಸಿ ಭೇದವನ್ನು ಹುಟ್ಟಿಸುತ್ತದೆಯೋ ? ಅಥವಾ ಬಿಂಬನಾದ ಬ್ರಹ್ಮನನ್ನು ಸಂಬಂಧಿಸಿ ಭೇದವನ್ನು ಹುಟ್ಟಿಸುತ್ತದೆಯೋ ?

**ಪೂರ್ವಪಕ್ಷೀ :-** ಮುಖ-ಪ್ರತಿಮುಖಗಳಲ್ಲಿನ ಬಿಂಬ-ಪ್ರತಿಬಿಂಬಭಾವಕ್ಕೆ ಉಪಾಧಿಯಾಗಿರುವ ದರ್ಪಣಾದಿದ್ರವ್ಯವೂ ಮುಖ-ಪ್ರತಿಮುಖಭೇದನಿಮಿತ್ತ-ವಾಗಿದೆ. ಅಲ್ಲಿ ದರ್ಪಣಾದಿದ್ರವ್ಯವು ಅಸಂಬದ್ಧವಾಗಿ ಭೇದನಿಮಿತ್ತವಾಗಿದೆ ಎಂದರೆ ಅತಿಪ್ರಸಂಗ ಬರುವುದರಿಂದ ಸಂಬಂದ್ಧವಾಗಿಯೇ ಭೇದನಿಮಿತ್ತವಾಗುತ್ತದೆ ಎಂದು ಹೇಳಬೇಕು. ಹಾಗಾದರೆ ದರ್ಪಣಾದಿದ್ರವ್ಯವು ಬಿಂಬವಾದ ಮುಖವನ್ನು ಸಂಬಂಧಿಸಿ ಭೇದನಿಮಿತ್ತವಾಗುತ್ತದೆಯೋ ? ಅಥವಾ ಪ್ರತಿಬಿಂಬವಾದ ಪ್ರತಿಮುಖವನ್ನು ಸಂಬಂಧಿಸಿ ಭೇದನಿಮಿತ್ತವಾಗುತ್ತದೆಯೋ ?

ಅಲ್ಲಿ ನೀವು ಏನು ಉತ್ತರ ನೀಡುತ್ತೀರೋ ನನ್ನದೂ ಅದೇ ಉತ್ತರವೇ.

**ಸಿದ್ಧಾಂತೀ :-** ದರ್ಪಣಾದಿದ್ರವ್ಯವು ಬಿಂಬಭೂತವಾದ ಮುಖಮಾತ್ರವನ್ನೇ ಸಂಬಂಧಿಸಿ ಭೇದನಿಮಿತ್ತವಾಗುತ್ತದೆ. (ಹೊರತು ಯಾವುದೋ ಘಟಾದಿಗಳನ್ನು ಸಂಬಂಧಿಸಿ ಅಲ್ಲ ಎನ್ನುವುದು 'ಮಾತ್ರ'ಶಬ್ದಾರ್ಥವಾಗಿದೆ.)

ಈ ರೀತಿಯಾಗಿ ಸಿದ್ಧಾಂತಿಗೆ ಅಭಿಪ್ರೇತವಾದ 'ಮಾತ್ರ'ಶಬ್ದಾರ್ಥವನ್ನು ತಿಳಿಯದೇ ''ಸಿದ್ಧಾಂತಿಗಳು ಬಿಂಬ-ಪ್ರತಿಬಿಂಬಭೂತ ಮುಖ-ಪ್ರತಿಮುಖಗಳಲ್ಲಿ ಅನುಸ್ಯೂತವಾದ ಮುಖಮಾತ್ರವನ್ನು 'ಮಾತ್ರ'ಶಬ್ದದಿಂದ ವಿವಕ್ಷಿಸಿದ್ದಾರೆ'' ಎಂದು ತಿಳಿದು ಮಾಯಾವಾದಿಗಳು ಉತ್ತರಿಸುತ್ತಾರೆ :-

**ಪೂರ್ವಪಕ್ಷೀ :-**

**ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ ।**
**ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ॥**

ಎಂಬುದಾಗಿ ವಿವರಣಕಾರರು ಹೇಳಿದಂತೆ ಅಜ್ಞಾನೋಪಾಧಿಯೂ ಸಹ ಬಿಂಬ-ಪ್ರತಿಬಿಂಬಭೂತರಾದ ಜೀವ-ಬ್ರಹ್ಮರಲ್ಲಿ ಅನುಸ್ಯೂತವಾದ ಚಿನ್ಮಾತ್ರರೂಪ ಸ್ವರೂಪಮಾತ್ರವನ್ನೇ ಸಂಬಂಧಿಸಿ ಭೇದನಿಮಿತ್ತವಾಗುತ್ತದೆ ಎಂದು ಹೇಳುತ್ತೇವೆ.

ಹೌದು, ಜೀವ-ಬ್ರಹ್ಮರಲ್ಲಿ ಅನುಸ್ಯೂತವಾದ ಚಿನ್ಮಾತ್ರರೂಪಸ್ವರೂಪಮಾತ್ರವನ್ನು ಸಂಬಂಧಿಸಿ ಅಜ್ಞಾನವು ತನ್ನ ಕಾರ್ಯವಾದ ದುಃಖಾದಿಗಳನ್ನು ಪ್ರತಿಬಿಂಬನಾದ ಜೀವನಲ್ಲಿಯೇ ಏಕೆ ತೋರಿಸುತ್ತದೆ ? ಬಿಂಬನಾದ ಬ್ರಹ್ಮನಲ್ಲಿ ಏಕೆ ತೋರಿಸುವುದಿಲ್ಲ? ಎಂದರೆ ಉತ್ತರಿಸುತ್ತಾರೆ -

**'ಸ್ವರೂಪಮಾತ್ರಸಂಬಂಧಿನೋऽಪಿ'**

ಇತ್ಯಾದಿಯಾಗಿ.

ಅಂದರೆ ಉಪಾಧಿಯು ಸ್ವಭಾವತಃ ಪ್ರತಿಬಿಂಬಪಕ್ಷಪಾತಿಯಾಗಿದೆ. (ತನ್ನಲ್ಲಿದ್ದ ದೋಷಗಳನ್ನು ಪ್ರತಿಬಿಂಬದಲ್ಲಿ ತೋರಿಸುವ ಸ್ವಭಾವ ಉಳ್ಳದ್ದಾಗಿದೆ.) ಅದಕ್ಕೆ ದೃಷ್ಟಾಂತ ದರ್ಪಣಾದಿಗಳು. ದರ್ಪಣಾದಿ ಉಪಾಧಿಗಳು ತಮ್ಮಲ್ಲಿರುವ ಮಾಲಿನ್ಯಾದಿದೋಷಗಳನ್ನು ಪ್ರತಿಬಿಂಬವಾದ ಪ್ರತಿಮುಖದಲ್ಲಿ ತೋರಿಸುತ್ತವೆಯೇ ಹೊರತು ಬಿಂಬವಾದ ಮುಖದಲ್ಲಿ ತೋರಿಸುವುದಿಲ್ಲ. ಹೀಗಾಗಿ ಉಪಾಧಿಗೆ ಪ್ರತಿಬಿಂಬಪಕ್ಷಪಾತಿತ್ವವು ಸ್ವಭಾವವಾದ್ದರಿಂದ, ಸ್ವಭಾವಕ್ಕೆ ಬದಲಾವಣೆ (ನಾಶ) ಆಗದ ಕಾರಣ, ಅಜ್ಞಾನೋಪಾಧಿಯು ತನ್ನ ಕಾರ್ಯವಾದ ದುಃಖಾದಿಗಳನ್ನು ಪ್ರತಿಬಿಂಬನಾದ ಜೀವನಲ್ಲಿಯೇ ತೋರಿಸುತ್ತದೆ. ಹೊರತು ಬಿಂಬನಾದ ಬ್ರಹ್ಮನಲ್ಲಿ ತೋರಿಸುವುದಿಲ್ಲ. ಆದ್ದರಿಂದ ಅಜ್ಞಾನೋಪಾಧಿಯು ಜೀವ-ಬ್ರಹ್ಮರಲ್ಲಿ ಅನುಸ್ಯೂತವಾದ ಚಿನ್ಮಾತ್ರರೂಪಸ್ವರೂಪಮಾತ್ರವನ್ನು ಸಂಬಂಧಿಸಿ ಭೇದನಿಮಿತ್ತವಾಗುತ್ತದೆ.

ಇದು ವಿವರಣಕಾರರ ವಿವರಣೆ. (ಪೂರ್ವಪಕ್ಷಾಭಿಪ್ರಾಯ.)

**ಅವತಾರಿಕೆ :-** ವಿವರಣಕಾರರ ಈ ಅಭಿಪ್ರಾಯವನ್ನು ವಿಕಲ್ಪಪೂರ್ವಕವಾಗಿ ನಿರಾಕರಿಸುತ್ತಾರೆ -

**ಟೀಕಾ :- ತತ್ರಾಪಿ ವಕ್ತವ್ಯಂ ತದಜ್ಞಾನಂ ಅಜ್ಞಾನಕಲ್ಪಿತಂ ? ಉತ ನ ? ಇತಿ । ನೇತಿ ಪಕ್ಷೇ [75] ಪೂರ್ವವದಪಸಿದ್ಧಾಂತಃ । ಆದ್ಯೇ ತ್ವಾತ್ಮಾಶ್ರಯಃ ಸ್ಯಾದಿತಿ ।**

**ಅನುವಾದ :-** ಅಜ್ಞಾನವೇ ಉಪಾಧಿ ಎಂಬ ಈ ಪಕ್ಷದಲ್ಲಿಯೂ ಸಹ ಉಪಾಧಿಭೂತವಾದ ಆ ಅಜ್ಞಾನವು ಅಜ್ಞಾನಕಲ್ಪಿತ ಎನ್ನುತ್ತೀರೋ ? ಅಜ್ಞಾನಕಲ್ಪಿತವಲ್ಲ ಎನ್ನುತ್ತೀರೋ ?

ಅಜ್ಞಾನವು ಅಜ್ಞಾನಕಲ್ಪಿತವಲ್ಲ ಎಂಬ ಎರಡನೇ ಪಕ್ಷದಲ್ಲಿ ಹಿಂದಿನಂತೆ ಅಪಸಿದ್ಧಾಂತದೋಷ ಬರುತ್ತದೆ. ಅಂದರೆ - ಅಂತಃಕರಣಾದಿಗಳು ಉಪಾಧಿ ಎಂಬ ವಾಚಸ್ಪತಿಗಳ ಪಕ್ಷದಲ್ಲಿ ಉಪಾಧಿಭೂತವಾದ ಅಂತಃಕರಣಾದಿಗಳು ಅಜ್ಞಾನಕಲ್ಪಿತವಲ್ಲ ಎಂದು ಅಂಗೀಕರಿಸಿದಾಗ ಅಂತಃಕರಣಾದಿಗಳು ಬ್ರಹ್ಮನಂತೆ ಸತ್ಯವಾಗುವುದರಿಂದ ಅದ್ವೈತಭಂಗ ಉಂಟಾಗುವ ಕಾರಣ ಅಪಸಿದ್ಧಾಂತದೋಷವನ್ನು ಹೇಳಲಾಯಿತು. ಅದೇ ಪ್ರಕಾರವಾಗಿ ಅಜ್ಞಾನವೇ ಉಪಾಧಿ ಎಂಬ ವಿವರಣಕಾರರ ಈ ಪಕ್ಷದಲ್ಲಿಯೂ ಸಹ ಅಜ್ಞಾನರೂಪವಾದ ಉಪಾಧಿಯು ಅಜ್ಞಾನಕಲ್ಪಿತವಲ್ಲ ಎಂದು ಅಂಗೀಕರಿಸಿದರೆ ಅಜ್ಞಾನೋಪಾಧಿಗೆ ಸತ್ಯತ್ವಪ್ರಾಪ್ತಿ, ಅದ್ವೈತಭಂಗ ಉಂಟಾಗುವ ಕಾರಣ ಅಪಸಿದ್ಧಾಂತ ಬರುತ್ತದೆ ಎಂದು ಭಾವ.

ಇನ್ನು ಅಜ್ಞಾನವು ಅಜ್ಞಾನಕಲ್ಪಿತವಾಗಿದೆ ಎಂಬ ಮೊದಲನೇ ಪಕ್ಷದಲ್ಲಿ ಆತ್ಮಾಶ್ರಯದೋಷ ಬರುತ್ತದೆ. ಅಂದರೆ - ಈ ಪಕ್ಷದಲ್ಲಿ ಅಜ್ಞಾನವು ಅಜ್ಞಾನಕಲ್ಪಿತ ಎಂದಾಗ ಅಜ್ಞಾನವೇ ಕಲ್ಪಿತ, ಅಜ್ಞಾನವೇ ಕಲ್ಪಕ ಎಂದು ಹೇಳಿದಂತಾಗುತ್ತದೆ. ಕಲ್ಪಿತವಾದ ವಸ್ತುವಿಗಿಂತಲೂ ಕಲ್ಪಕವಾದ ವಸ್ತು ಮೊದಲು ಇರಬೇಕು. ಆದರೆ ಇಲ್ಲಿ ಕಲ್ಪಿತವಾದ ವಸ್ತು ಹಾಗೂ ಕಲ್ಪಕವಾದ ವಸ್ತು ಎರಡೂ ಅಜ್ಞಾನವೇ ಆಗಿರುವ ಕಾರಣ, ಅಜ್ಞಾನವು ತನಗಿಂತಲೂ ತಾನು ಮೊದಲು ಇರಬೇಕಾದ ಪ್ರಸಂಗ ಬರುತ್ತದೆ. ಅಂತೆಯೇ ಸ್ವಾಪೇಕ್ಷಯಾ ಸ್ವಸ್ಯ ಪೂರ್ವವೃತ್ತಿತ್ವ (ತನಗಿಂತಲೂ ಮೊದಲು ತಾನು ಇರುವುದು) ರೂಪವಾದ ಆತ್ಮಾಶ್ರಯದೋಷ ಬರುತ್ತದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಅಜ್ಞಾನವು ಚಿನ್ಮಾತ್ರಾಶ್ರಿತವಾಗಿದೆ ಎಂದು ಹೇಳುವ ವಾದಿಗಳು ಮತ್ತು ಜೀವಾಶ್ರಿತವಾಗಿದೆ ಎಂದು ಹೇಳುವ ವಾದಿಗಳು ಶಂಕಿಸುತ್ತಾರೆ -

---

75) ಪೂರ್ವವದಿತಿ ॥ ಅಂತಃಕರಣಾದ್ಯುಪಾಧೇರಜ್ಞಾನಾಕಲ್ಪಿತತ್ವಾಂಗೀಕಾರೇ ಸತ್ಯತ್ವಪ್ರಾಪ್ತ್ಯಾ ಅದ್ವೈತಭಂಗಾಪತ್ತ್ಯಾ ಅಪಸಿದ್ಧಾಂತ ಉಕ್ತಃ । ತದ್ವತ್ ಅಜ್ಞಾನರೂಪೋಪಾಧೇರಪಿ ಅಜ್ಞಾನಾಕಲ್ಪಿತತ್ವಾಂಗೀಕಾರೇ ಅಪಸಿದ್ಧಾಂತ ಇತ್ಯರ್ಥಃ । (ಶ್ರೀನಿ)

ಟೀಕಾ :- ನನ್ವಜ್ಞಾನಂ ಜೀವಬ್ರಹ್ಮಭೇದಶ್ಚಾನಾದಿರೇವ[76] । ಕಿಂ ನಾಮ ? ಅಜ್ಞಾನಾಧೀನ ಏವೇತಿ ಕಥಮಾತ್ಮಾಶ್ರಯಾದಿಕಂ ? ಇತಿ । ಮೈವಮ್ । ಕಿಂಚಿದುಪಕಾರಾಭಾವೇ[77] ತದಧೀನತಾಯಾ ಏವ ಮೃಷಾತ್ವಾತ್ ।[78] ತದ್ಭಾವೇ ತ್ವಾತ್ಮಾಶ್ರಯಾದ್ಯನಿಸ್ತಾರಾತ್ । ಉತ್ಪತ್ತಿಜ್ಞಪ್ತ್ಯೋರಿವ ಪ್ರವೃತ್ತ್ಯಾದೇರಪಿ[79] ಪ್ರತಿಬಂಧೇನ ತಸ್ಯ ದೂಷಣತ್ವಾತ್ । ಬಿಂಬಪ್ರತಿಬಿಂಬಯೋರಭೇದಾಭಾವಸ್ಯ[80] ಅನ್ಯತ್ರೋಪಪಾದಿತತ್ವಾತ್ ದೃಷ್ಟಾಂತೋ ನಿರಸ್ತ ಏವ ।

ಅನುವಾದ :-

ಜೀವ ಈಶೋ ವಿಶುದ್ಧಾ ಚಿತ್ ಭೇದಸ್ತಸ್ಯಾಸ್ತಯೋರ್ದ್ವಯೋಃ ।
ಅವಿದ್ಯಾ ತಚ್ಚಿತೋರ್ಯೋಗಃ ಷಡಸ್ಮಾಕಮನಾದಯಃ ॥

ಎಂಬ ವಚನಾನುಸಾರವಾಗಿ ಅಜ್ಞಾನ ಹಾಗೂ ಜೀವಬ್ರಹ್ಮಭೇದ ಎರಡೂ ಅನಾದಿಯೇ ಆಗಿವೆ. ಆದರೆ ಅಜ್ಞಾನಾಧೀನವಾಗಿವೆ ಎಂದು ಅಂಗೀಕರಿಸುತ್ತೇವೆ. ಹೀಗಾಗಿ ಅಜ್ಞಾನವು ಅನಾದಿಯಾಗಿರುವುದರಿಂದ ಅಜ್ಞಾನಕಲ್ಪಿತವಾಗದ ಕಾರಣ ಆತ್ಮಾಶ್ರಯದೋಷ ಬರುವುದಿಲ್ಲ. ಅದರಂತೆ ಜೀವಬ್ರಹ್ಮವಿಭಾಗವೂ ಅನಾದಿಯಾದ್ದರಿಂದ ಅಜ್ಞಾನಕಲ್ಪಿತವಲ್ಲದ ಕಾರಣ ಅನ್ಯೋನ್ಯಾಶ್ರಯದೋಷವೂ ಬರುವುದಿಲ್ಲ. ಆದ್ದರಿಂದ ಉತ್ಪತ್ತಿ-ಜ್ಞಪ್ತಿಪ್ರತಿಬಂಧಕವಾಗದ ಕಾರಣ ಆತ್ಮಾಶ್ರಯಾದಿಪ್ರಸಂಗವು ದೋಷವಾಗುವುದಿಲ್ಲ ಎಂಬುದಾಗಿ ಶಂಕಿಸಿದರೆ, ಅದು ಸರಿಯಲ್ಲ.

---

76) ಜೀವ ಈಶೋ ವಿಶುದ್ಧಾ ಚಿದ್ಭೇದಸ್ತಸ್ಯಾಸ್ತಯೋರ್ದ್ವಯೋಃ । ಅವಿದ್ಯಾ ತಚ್ಚಿತೋರ್ಯೋಗಃ ಷಡಸ್ಮಾಕಮನಾದಯಃ ॥ ಇತಿ ವಚನಾದಿತಿ ಭಾವಃ । (ಶ್ರೀನಿ)

77) ಉತ್ಪತ್ತಿಜ್ಞಪ್ತಿರೂಪೋಪಕಾರಾಭಾವೇ ಇತ್ಯರ್ಥಃ । (ಶ್ರೀನಿ)

78) ಪ್ರಯುಕ್ತಿರೂಪೋಪಕಾರಸದ್ಭಾವೇ ತು ಇತ್ಯರ್ಥಃ । (ಶ್ರೀನಿ)

79) ಆದಿಪದೇನ ಪ್ರಯುಕ್ತಿಃ ಗೃಹ್ಯತೇ । ಪ್ರವೃತ್ತಿಗ್ರಹಣಂ ದೃಷ್ಟಾಂತಾರ್ಥಮ್ । ಯಥಾ ಹಿ ಸ್ವಸ್ಯೈವ ಸ್ವಪ್ರವರ್ತಕತ್ವೇ ತತ್ಪ್ರವರ್ತ್ಯಸ್ಯೈವ ತತ್ಪ್ರವರ್ತಕತ್ವೇ ವಾ ಪ್ರವೃತ್ತಿಪ್ರತಿ-ಬಂಧಾತ್ ಆತ್ಮಾಶ್ರಯಾದಿಕಮ್ । ಏವಂ ಸ್ವಸ್ಯೈವ ಸ್ವಪ್ರಯೋಜಕತ್ವೇ ಸ್ವಪ್ರಯುಕ್ತಸ್ಯ ಸ್ವಪ್ರಯೋಜಕತ್ವೇ ವಾ ಪ್ರಯುಕ್ತಿಬಂಧಕತ್ವಾತ್ ಆತ್ಮಾಶ್ರಯಾದಿಕಂ ಭವಿಷ್ಯತ್ಯೇವ ।

80) ತತ್ವನಿರ್ಣಯಟೀಕಾದೌ ಇತ್ಯರ್ಥಃ ।

ಏಕೆಂದರೆ - ''ಅಜ್ಞಾನ-ಜೀವಬ್ರಹ್ಮಭೇದಗಳು ಅನಾದಿಯಾಗಿದ್ದರೂ ಅಜ್ಞಾನಾಧೀನವಾಗಿವೆ'' ಎಂದು ಹೇಳಲು ಬರುವುದಿಲ್ಲ. ಕಾರಣ ಅಜ್ಞಾನವು ಅಜ್ಞಾನ-ಜೀವಬ್ರಹ್ಮಭೇದಗಳಿಗೆ ಉತ್ಪತ್ತಿರೂಪವಾದ ಉಪಕಾರವನ್ನಾದರೂ ಉಂಟುಮಾಡಿರಬೇಕು. ಅಥವಾ ಜ್ಞಪ್ತಿರೂಪವಾದ ಉಪಕಾರವನ್ನಾದರೂ ಉಂಟುಮಾಡಿರಬೇಕು. ಆದರೆ ಉತ್ಪತ್ತಿ-ಜ್ಞಪ್ತಿ ಈ ಯಾವ ವಿಧವಾದ ಉಪಕಾರವನ್ನೂ ಮಾಡದೇ ತದಧೀನತ್ವವನ್ನು (ಅಜ್ಞಾನ-ಜೀವಬ್ರಹ್ಮಭೇದಗಳಿಗೆ ಅಜ್ಞಾನಾಧೀನತ್ವವನ್ನು) ಹೇಳಲು ಬರುವುದಿಲ್ಲ.

ಅಜ್ಞಾನವು ಅಜ್ಞಾನದಿಂದ ಹುಟ್ಟುತ್ತದೆ ಎಂದು ಹೇಳಿದರೆ ಆಗ ಆತ್ಮಾಶ್ರಯದೋಷಕ್ಕೆ ಅವಕಾಶ ಇರುತ್ತಿತ್ತು. ಆದರೆ ಪ್ರಕೃತ ನಾವು ಹಾಗೆ ಹೇಳುವುದಿಲ್ಲ. ಕಿಂತು ಅಜ್ಞಾನವು ಅನಾದಿಯಾದ್ದರಿಂದ ಅದಕ್ಕೆ ಅಜ್ಞಾನದಿಂದ ಉತ್ಪತ್ತಿ ಇಲ್ಲದಿದ್ದರೂ ಸಹ ಅಜ್ಞಾನವು ಅಜ್ಞಾನಪ್ರಯುಕ್ತವಾಗಿದೆ ಎಂದು ಅಂಗೀಕರಿಸಿದ್ದರಿಂದ ಆತ್ಮಾಶ್ರಯದೋಷ ಬರುವುದಿಲ್ಲ. ಮತ್ತು ದ್ರವ್ಯತ್ವ-ಗುಣವತ್ತ್ವಗಳು ಅನಾದಿಯಾಗಿದ್ದರೂ ಸಹ ಪ್ರಯುಕ್ತ್ಯಾದಿಗಳಲ್ಲಿ (ಪ್ರಯೋಜ್ಯ-ಪ್ರಯೋಜಕಭಾವ ವಿಷಯದಲ್ಲಿ)[81] ಅನ್ಯೋನ್ಯಾಧೀನವಾಗಿದ್ದರೂ ಸಹ ಹೇಗೆ ಅನ್ಯೋನ್ಯಾಶ್ರಯದೋಷ ಬರುವುದಿಲ್ಲವೋ, ಅದೇ ರೀತಿಯಾಗಿ ಅಜ್ಞಾನ-ಜೀವಬ್ರಹ್ಮವಿಭಾಗಗಳು ಅನಾದಿಯಾದ್ದರಿಂದ ಉತ್ಪತ್ತ್ಯಾದಿವಿಷಯದಲ್ಲಿ ಅನ್ಯೋನ್ಯಾಧೀನವಾಗದಿದ್ದರೂ ಪ್ರಯುಕ್ತ್ಯಾದಿವಿಷಯದಲ್ಲಿ ಅನ್ಯೋನ್ಯಾಧೀನತ್ವವನ್ನು ಅಂಗೀಕರಿಸಿದ್ದರಿಂದ ಅನ್ಯೋನ್ಯಾಶ್ರಯದೋಷವೂ ಬರುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಹೀಗೆ ಪ್ರಯುಕ್ತಿರೂಪ ಉಪಕಾರವನ್ನು ಅಂಗೀಕರಿಸುವುದಾದರೂ ಆತ್ಮಾಶ್ರಯಾದಿಗಳು ಪರಿಹಾರವಾಗುವುದಿಲ್ಲ.

ಉತ್ಪತ್ತಿ-ಜ್ಞಪ್ತಿಗಳ ವಿಷಯದಲ್ಲಿ (ಉತ್ಪತ್ತಿ-ಜ್ಞಪ್ತಿಗಳಿಗೆ ಪ್ರತಿಬಂಧಕವಾಗುವುದರಿಂದ) ಆತ್ಮಾಶ್ರಯ-ಅನ್ಯೋನ್ಯಾಶ್ರಯಗಳು ಹೇಗೆ ದೋಷವಾಗುತ್ತವೆಯೋ ಆದರಂತೆ ಪ್ರಯುಕ್ತಿ-ಪ್ರವೃತ್ತಿಗಳ ವಿಷಯದಲ್ಲಿಯೂ (ಪ್ರಯುಕ್ತಿ-ಪ್ರವೃತ್ತಿಗಳಿಗೆ ಪ್ರತಿಬಂಧಕವಾಗುವುದರಿಂದ) ಆತ್ಮಾಶ್ರಯ-ಅನ್ಯೋನ್ಯಾಶ್ರಯಗಳು ದೋಷವಾಗಿಯೇ ಆಗುತ್ತವೆ.

---

81) ಒಮ್ಮೆ ದ್ರವ್ಯತ್ವ ಪ್ರಯೋಜಕ, ಗುಣವತ್ತ್ವ ಪ್ರಯೋಜ್ಯ. ಮತ್ತೊಮ್ಮೆ ಗುಣವತ್ತ್ವ ಪ್ರಯೋಜಕ, ದ್ರವ್ಯತ್ವ ಪ್ರಯೋಜ್ಯ ಹೀಗೆ ಪ್ರಯುಕ್ತಿ (ಪ್ರಯೋಜ್ಯ-ಪ್ರಯೋಜಕಭಾವ) ವಿಷಯದಲ್ಲಿ ದ್ರವ್ಯತ್ವ-ಗುಣವತ್ತ್ವಗಳು ಅನ್ಯೋನ್ಯಾಧೀನವಾಗಿದ್ದರೂ ಸಹ ಎಂದು ಅರ್ಥ.

ಹಾಗಾಗಿ ಅಜ್ಞಾನವು ಅಜ್ಞಾನಪ್ರಯುಕ್ತವಾಗಿದೆ ಎಂದು ಅಂಗೀಕರಿಸಿದರೆ ಪ್ರಯುಕ್ತಿವಿಷಯದಲ್ಲಿಯೇ ಆತ್ಮಾಶ್ರಯದೋಷ ಬರುತ್ತದೆ. ಆದಿಪದದಿಂದ ಅನ್ಯೋನ್ಯಾಶ್ರಯವನ್ನು ತೆಗೆದುಕೊಳ್ಳಬೇಕು. ಅನ್ಯೋನ್ಯಾಶ್ರಯ ಹೇಗೆಂದರೆ :- ದ್ರವ್ಯತ್ವಜಾತಿಯು ವ್ಯಂಗ್ಯವಾಗಿದೆ, ಗುಣವತ್ವವು ವ್ಯಂಜಕವಾಗಿದೆ. ವ್ಯಂಗ್ಯವಾದ ದ್ರವ್ಯತ್ವವು ವ್ಯಂಜಕವಾದ ಗುಣವತ್ವದಿಂದ ಪ್ರಯುಕ್ತವಾದರೂ ವ್ಯಂಜಕವು ವ್ಯಂಗ್ಯಪ್ರಯುಕ್ತವಾಗಬೇಕೆಂದು ನಿಯಮವಿಲ್ಲ. ಏಕೆಂದರೆ - ಘಟಾದಿಗಳು ವ್ಯಂಗ್ಯವಾಗಿವೆ. ಸ್ವಜ್ಞಾನಾದಿವಿಷಯದಲ್ಲಿ ಆಲೋಕವು ವ್ಯಂಜಕವಾಗಿದೆ. ವ್ಯಂಗ್ಯವಾದ ಘಟಾದಿಗಳು ಆಲೋಕಪ್ರಯುಕ್ತವಾದರೂ ಸಹ ವ್ಯಂಜಕವಾದ ಆಲೋಕವು ವ್ಯಂಗ್ಯಘಟಾದಿಪ್ರಯುಕ್ತವಾಗಿಲ್ಲವಾದ್ದರಿಂದ, ವ್ಯಂಗ್ಯವು ವ್ಯಂಜಕಪ್ರಯುಕ್ತವಾದರೂ ವ್ಯಂಜಕವು ವ್ಯಂಗ್ಯಪ್ರಯುಕ್ತವಾಗಬೇಕೆಂದು ನಿಯಮವಿಲ್ಲ ಎಂಬುದಾಗಿ ತಿಳಿದುಬರುತ್ತದೆ. ಆದ್ದರಿಂದ ಅಲ್ಲಿ ಅನ್ಯೋನ್ಯಾಶ್ರಯ ದೋಷವಾಗುವುದಿಲ್ಲ.

ಆದರೆ ಇಲ್ಲಿ ಮಾತ್ರ ಜೀವ-ಬ್ರಹ್ಮವಿಭಾಗವು ಅವಿದ್ಯಾಪ್ರಯುಕ್ತವಾಗಿದೆ. ಆ ಅವಿದ್ಯೆಯು ಜೀವಾಶ್ರಿತವಾಗಿದೆ. ಆದ್ದರಿಂದ ಜೀವ-ಅಜ್ಞಾನ ಎರಡೂ ಅನ್ಯೋನ್ಯಪ್ರಯುಕ್ತವಾಗಿವೆಯಾದ ಕಾರಣ ಪ್ರಯುಕ್ತಿಪ್ರತಿಬಂಧಕವಾದ್ದರಿಂದ ಅನ್ಯೋನ್ಯಾಶ್ರಯದೋಷ ಬಂದೇ ಬರುತ್ತದೆ ಎಂದು ಭಾವ.

ಈ ಹಿಂದೆ ''ಯಾವ ರೀತಿಯಾಗಿ ಬಿಂಬ-ಪ್ರತಿಬಿಂಬಗಳಲ್ಲಿ ಐಕ್ಯ ಇದ್ದರೂ ದರ್ಪಣಾದಿ ಉಪಾಧಿನಿಮಿತ್ತಭೇದದಿಂದಾಗಿ ಬಿಂಬವು ಅವದಾತ(ಶುಭ್ರ) ವಾಗಿದ್ದರೂ ಪ್ರತಿಬಿಂಬಕ್ಕೆ ಶ್ಯಾಮತ್ವ ಕೂಡುತ್ತದೆಯೋ ಅದರಂತೆ ಜೀವ-ಬ್ರಹ್ಮರಲ್ಲಿ ಅಭೇದವಿದ್ದರೂ ಉಪಾಧಿನಿಮಿತ್ತಭೇದದಿಂದಾಗಿ ಬ್ರಹ್ಮನಿಗೆ ಸರ್ವಜ್ಞತ್ವ ಇದ್ದರೂ ಜೀವನಿಗೆ ಅಜ್ಞತ್ವವು (ಅಜ್ಞಾನವು) ಕೂಡುತ್ತದೆ'' ಎಂಬುದಾಗಿ ಕೊಟ್ಟ ಬಿಂಬ-ಪ್ರತಿಬಿಂಬಗಳ ಐಕ್ಯದೃಷ್ಟಾಂತವನ್ನು ನಿರಾಕರಿಸುತ್ತಾರೆ - ''ಬಿಂಬ-ಪ್ರತಿಬಿಂಬಯೋಃ ಅಭೇದಾಭಾವಸ್ಯ'' ಇತ್ಯಾದಿಯಾಗಿ.

ಬಿಂಬ-ಪ್ರತಿಬಿಂಬಗಳಲ್ಲಿ ಅಭೇದವಿಲ್ಲ, ಕಿಂತು ಭೇದವೇ ಇದೆ ಎಂಬುದಾಗಿ ಅನ್ಯತ್ರ=ವಿಷ್ಣುತತ್ತ್ವನಿರ್ಣಯಟೀಕಾ ಮೊದಲಾದ ಗ್ರಂಥಗಳಲ್ಲಿ ಸಮರ್ಥನೆ ಮಾಡಿರುವುದರಿಂದ (ಬಿಂಬ-ಪ್ರತಿಬಿಂಬಗಳಲ್ಲಿ ಐಕ್ಯವೇ ಇಲ್ಲವಾದ್ದರಿಂದ) ಆ ದೃಷ್ಟಾಂತವೂ ನಿರಾಕೃತವಾದಂತೆಯೇ ಆಯಿತು.

**ಗಮನಿಸಬೇಕಾದ ಅಂಶ :** ಬಿಂಬ-ಪ್ರತಿಬಿಂಬಗಳಲ್ಲಿ ಅಭೇದವಿಲ್ಲ, ಕಿಂತು ಭೇದವೇ ಇದೆ ಎಂಬುದನ್ನು ಶ್ರೀನಿವಾಸತೀರ್ಥರು ತಮ್ಮ ಟಿಪ್ಪಣಿಯಲ್ಲಿ ಬಹಳ ವಿಸ್ತಾರವಾಗಿ ಸುಂದರವಾಗಿ ಸಮರ್ಥಿಸಿದ್ದಾರೆ. ಹೆಚ್ಚಿನ ಜಿಜ್ಞಾಸುಗಳು ಅವಲೋಕಿಸಬೇಕು.

**ಅವತಾರಿಕೆ :-** ಮಾಯಾವಾದಿಗಳು ಭೇದವನ್ನು ಉಪಾಧಿಕೃತ (ಉಪಾಧಿಜನ್ಯ) ಎಂದು ಅಂಗೀಕರಿಸಿಲ್ಲವಾದ್ದರಿಂದ ''ಭೇದಶ್ಚೋಪಾಧಿತಃ ಕುತಃ'' ಎಂದು ಆಚಾರ್ಯರು ಹೇಳುವುದು ಅನುಕ್ತೋಪಾಲಂಭ ಆಗುತ್ತದೆಯಲ್ಲ ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ ಈ ವಾಕ್ಯವು ಮಾಯಾವಾದಮತವನ್ನು ನಿರಾಕರಿಸಲು ಹೊರಟಿಲ್ಲ. ಕಿಂತು ಭಾಸ್ಕರಾಚಾರ್ಯರ ಮತವನ್ನು ನಿರಾಕರಿಸಲು ಹೊರಟಿದೆ. ಆದ್ದರಿಂದ ಅನುಕ್ತೋಪಾಲಂಭ ದೋಷ ಬರುವುದಿಲ್ಲ ಎಂದು ಹೇಳುತ್ತಾರೆ -

**ಟೀಕಾ :- [82]ಅಪರ ಆಹ - ''ಸ್ಯಾದಿದಂ [83]ಮಾಯಾವಾದಿನಾಂ ದೂಷಣಂ ನಾಸ್ಮಾಕಮ್ । 'ಏಕಮೇವ ಬ್ರಹ್ಮ [84]ಅಂತಃಕರಣಾದ್ಯನಂತೋಪಾಧ್ಯವಚ್ಛೇದಾತ್ ಅನಂತಜೀವಭಾವಮಾಪಾದ್ಯತೇ' ಇತ್ಯಂಗೀಕಾರೇಽಪಿ ಭೇದಸ್ಯ ಉಪಾಧೀನಾಂ ಚ ಅಸ್ಮಾಭಿಃ ಮಿಥ್ಯಾತ್ವಾನಂಗೀಕಾರಾತ್ । ಭೇದಸತ್ಯತ್ವಾಂಗೀಕಾರೇಽಪಿ ಸ್ವಾಭಾವಿಕಭೇದಾನಂಗೀಕಾರೇಣ[85] [86]ಅದ್ವೈತವಾದಾವಿರೋಧಾತ್ । ಉಪಾಧೇಃ ಅಜ್ಞಾನಕಲ್ಪಿತತ್ವಾಭಾವೇನ ಅನವಸ್ಥಾದ್ಯಭಾವಾತ್ । [87]ಅಂಶಾಂಶಿಭಾವೇನ ಬಿಂಬಪ್ರತಿಬಿಂಬಭಾವಾಭಾವಾತ್ । ಅತೋ ಬ್ರಹ್ಮಜೀವಸಂಬಂಧಿನೀ ಸರ್ವಜ್ಞತ್ವಾಜ್ಞತ್ವೇ ನ ವಿರುದ್ಧ್ಯೇತೇ'' ಇತಿ । ತತ್ರಾಹ :-**

---

82) ಭಾಸ್ಕರ ಇತ್ಯರ್ಥಃ । (ಶ್ರೀನಿ)

83) ಮಾಯಾವಾದಿನಾಂ ವಾಚಸ್ಪತಿವಿವರಣಕಾರಾದೀನಾಮ್ । (ಶ್ರೀನಿ)

84) ಅಂತಃಕರಣಾದೀತ್ಯಾದಿಪದೇನ ದೇಹೇಂದ್ರಿಯಾದಿಕಂ ಗ್ರಾಹ್ಯಮ್ । (ಶ್ರೀನಿ)

85) ಸತ್ಯಭೂತಔಪಾಧಿಕಭೇದಾಂಗೀಕಾರೇಣ ಇತ್ಯರ್ಥಃ ।

86) ಅಭೇದಃ ಸ್ವಭಾವಿಕ ಇತ್ಯದ್ವೈತವಾದೇತ್ಯರ್ಥಃ । (ಶ್ರೀನಿ)

87) ಜೀವಾನಾಂ ಬ್ರಹ್ಮಾಂಶತ್ವೇನ ಜೀವಬ್ರಹ್ಮಣೋಃ ಅಂಶಾಂಶಿಭಾವಾಂಗೀಕಾರೇಣ ... (ಶ್ರೀನಿ)

**ಮೂಲ :- ಭೇದಶ್ಚೋಪಾಧಿತಃ ಕುತಃ ।**

**ಮಾಯಾವಾದೇ ಹ್ಯುಪಾಧೇರ್ಭೇದಸ್ಯ ಚ ಕಲ್ಪಿತತ್ವೇನ ಅನವಸ್ಥಾದಿದೋಷ-ಪ್ರಸಕ್ತಾವಪಿ ಉಪಾಧಿನಿಮಿತ್ತೋ ಭೇದಾವಭಾಸ ಇತ್ಯೇತಾವಾನಂಶೋ ಯುಜ್ಯತೇ । [88]ಅಂಗುಲ್ಯವಷ್ಟಂಭಾದಿನಾ ಚಂದ್ರಾದಿಭೇದಾಧ್ಯಾಸದರ್ಶನಾತ್ । ಅಸ್ಮಿಂಸ್ತು ಪಕ್ಷೇ ಅನವಸ್ಥಾದಿದೋಷಾಭಾವೇಽಪಿ ಉಪಾಧಿತಃ ಭೇದೋ [89]ಭವತೀತ್ಯೇತನ್ನ ಯುಜ್ಯತೇ । [90]ತದಯೋಗೇ ಚ ಜೀವಬ್ರಹ್ಮಾಶ್ರಯತಯಾ ಅಜ್ಞತಾಸರ್ವಜ್ಞತ್ವಯೋರ್ವ್ಯವಸ್ಥಾನಂ ಸುತರಾಂ ನ ಯುಜ್ಯತ ಇತಿ ಚಶಬ್ದಾರ್ಥಃ।**

**ಅನುವಾದ :-** ಇಲ್ಲಿ ಭಾಸ್ಕರಾಚಾರ್ಯರು ಈ ರೀತಿಯಾಗಿ ಶಂಕಿಸುತ್ತಾರೆ - ''ಈ ಹಿಂದೆ ಹೇಳಿದಂತೆ ಅನವಸ್ಥಾದಿದೋಷಗಳು ಮಾಯಾವಾದಿಗಳಿಗೆ (ವಾಚಸ್ಪತಿಮಿಶ್ರ- ವಿವರಣಕಾರರಿಗೆ) ಬರುತ್ತದೆ. ಹೊರತು ನಮಗೆ ಬರುವುದಿಲ್ಲ. ಏಕೆಂದರೆ - ''ಒಬ್ಬನೇ ಬ್ರಹ್ಮನು ಅಂತಃಕರಣ-ದೇಹ-ಇಂದ್ರಿಯಾದಿ ಅನಂತ ಉಪಾಧಿಸಂಬಂಧದಿಂದಾಗಿ ಅನಂತಜೀವಭಾವವನ್ನು ಹೊಂದುತ್ತಾನೆ'' ಎಂಬುದಾಗಿ ನಾವು ಅಂಗೀಕರಿಸಿದರೂ ಸಹ ಮಾಯಾವಾದಿಗಳಂತೆ ಭೇದ ಹಾಗೂ ಉಪಾಧಿಗಳಿಗೆ ನಾವು ಮಿಥ್ಯಾತ್ವವನ್ನು ಅಂಗೀಕರಿಸುವುದಿಲ್ಲ. ಕಿಂತು ಭೇದ-ಉಪಾಧಿಗಳಿಗೆ ಸತ್ಯತ್ವವನ್ನೇ ಅಂಗೀಕರಿಸುತ್ತೇವೆ.

ಭೇದ-ಉಪಾಧಿಗಳಿಗೆ ಸತ್ಯತ್ವವನ್ನು ಅಂಗೀಕರಿಸಿದರೆ ಅದ್ವೈತಭಂಗ ಆಗುವುದಲ್ಲ ? ಎಂದರೆ, ಅದು ಸರಿಯಲ್ಲ. ನಾವು ಭೇದಕ್ಕೆ ಸತ್ಯತ್ವವನ್ನು ಅಂಗೀಕರಿಸಿದರೂ ಸಹ ಸ್ವಾಭಾವಿಕಭೇದವನ್ನು ಅಂಗೀಕರಿಸಿಲ್ಲವಾದ್ದರಿಂದ ಅದ್ವೈತವಾದದ (ಅಭೇದವು ಸ್ವಾಭಾವಿಕ ಎಂಬ ಅದ್ವೈತವಾದದ) ವಿರೋಧ ಬರುವುದಿಲ್ಲ. ಇನ್ನು ಉಪಾಧಿಗಳಿಗೆ ಅಜ್ಞಾನಕಲ್ಪಿತತ್ವವನ್ನು ಅಂಗೀಕರಿಸಿದ್ದರೆ ಮಾಯಾವಾದಿಗಳಿಗೆ ಬರುವಂತೆ ಅನವಸ್ಥಾದಿದೋಷಗಳು ಬರುತ್ತಿದ್ದವು. ಆದರೆ ಉಪಾಧಿಗಳಿಗೆ ಸತ್ಯತ್ವವನ್ನು ಅಂಗೀಕರಿಸಿದ್ದರಿಂದ, ಅಜ್ಞಾನಕಲ್ಪಿತತ್ವವನ್ನು ಅಂಗೀಕರಿಸಿಲ್ಲವಾದ್ದರಿಂದ ಅನವಸ್ಥಾದಿದೋಷಗಳೂ ಬರುವುದಿಲ್ಲ.

---

88) ಚಕ್ಷುಷಃ ಅಂಗುಲ್ಯವಷ್ಟಂಭರೂಪೋಪಾಧಿನಾ ಇತ್ಯರ್ಥಃ । (ಶ್ರೀನಿ)

89) ಜಾಯತೇ ಇತ್ಯರ್ಥಃ ।

90) ಉಪಾಧಿತಃ ಭೇದಜನನಾಯೋಗೇ ಸತೀತ್ಯರ್ಥಃ । (ಶ್ರೀನಿ)

ಜಗತ್ತಿನಲ್ಲಿ ಬಿಂಬ-ಪ್ರತಿಬಿಂಬಗಳಲ್ಲಿನ ಭೇದವು ಮಿಥ್ಯೆಯಾಗಿರುವುದು ಕಂಡಿದ್ದರಿಂದ ಪ್ರಕೃತ ಬಿಂಬ-ಪ್ರತಿಬಿಂಬರಾಗಿರುವ ಜೀವ-ಬ್ರಹ್ಮರ ಭೇದವು ಸತ್ಯ ಹೇಗಾಗುತ್ತದೆ ? ಎಂದು ಶಂಕೆ ಬಂದರೆ, ಅದೂ ಸರಿಯಲ್ಲ. ಕಾರಣ ಜೀವ-ಬ್ರಹ್ಮರಲ್ಲಿ ನಾವು ಬಿಂಬ-ಪ್ರತಿಬಿಂಬಭಾವವನ್ನು ಅಂಗೀಕರಿಸುವುದಿಲ್ಲ. ಕಿಂತು ಜೀವರೆಲ್ಲರೂ ಬ್ರಹ್ಮನ ಅಂಶರಾದ್ದರಿಂದ ಜೀವ-ಬ್ರಹ್ಮರಲ್ಲಿ ಅಂಶಾಂಶಿಭಾವವನ್ನು ಅಂಗೀಕರಿಸುವುದರಿಂದ ತಂತು-ಪಟಗಳಲ್ಲಿಯಂತೆ ಭೇದಾಭೇದವನ್ನು ಅಂಗೀಕರಿಸುತ್ತೇವೆ. ಆದ್ದರಿಂದ ಜೀವ-ಬ್ರಹ್ಮರ ಭೇದವು ಔಪಾಧಿಕ ಹಾಗೂ ಸತ್ಯವಾಗಲು ಯಾವ ಭಾದಕವಿಲ್ಲ. ಹೀಗಾಗಿ ಜೀವ-ಬ್ರಹ್ಮರ ಸಂಬಂಧಿಯಾದ ಸರ್ವಜ್ಞತ್ವ-ಅಲ್ಪಜ್ಞತ್ವಗಳು ವಿರುದ್ಧವಾಗುವುದಿಲ್ಲ ಎಂಬುದಾಗಿ ಭಾಸ್ಕರಾಚಾರ್ಯರು ಅಭಿಪ್ರಾಯಪಡುತ್ತಾರೆ.

ಭಾಸ್ಕರಾಚಾರ್ಯರ ಈ ಮತವನ್ನು ಆಚಾರ್ಯರು ನಿರಾಕರಿಸುತ್ತಾರೆ -

**ಮೂಲ :- ಭೇದಶ್ಚೋಪಾಧಿತಃ ಕುತಃ ।**

**ಮೂಲಾರ್ಥ :- ಭೇದವು ಉಪಾಧಿಯಿಂದ ಹುಟ್ಟುತ್ತದೆ ಎಂದು ಹೇಗೆ ಹೇಳಲು ಸಾಧ್ಯ ? ಭಾಸ್ಕರಾಚಾರ್ಯರ ಈ ಪಕ್ಷದಲ್ಲಿ ಭೇದವು ಉಪಾಧಿಜನ್ಯ ಎಂಬ ಅಂಶವು ಉಪಪನ್ನವಾಗುವುದಿಲ್ಲ.**

ಮಾಯವಾದಮತದಲ್ಲಿ ಭೇದ ಹಾಗೂ ಉಪಾಧಿಗಳಿಗೆ ಕಲ್ಪಿತತ್ವವನ್ನು ಅಂಗೀಕರಿಸಿದ್ದರಿಂದ ಅನವಸ್ಥಾ ಮೊದಲಾದ ದೋಷಗಳು ಪ್ರಸಕ್ತವಾದರೂ ಸಹ, 'ಉಪಾಧಿನಿಮಿತ್ತವಾಗಿ ಭೇದಪ್ರತೀತಿಯು ಉಂಟಾಗುತ್ತದೆ' ಎಂಬ ಅಂಶವು ಉಪಪನ್ನವಾಗುತ್ತದೆ. ಏಕೆಂದರೆ, ಜಗತ್ತಿನಲ್ಲಿ ಚಕ್ಷುರಿಂದ್ರಿಯಕ್ಕೆ ಅಂಗುಲ್ಯವಷ್ಟಂಭ ರೂಪವಾದ ಉಪಾಧಿಯಿಂದಾಗಿ ಚಂದ್ರನಲ್ಲಿ ಭೇದಾಧ್ಯಾಸ (ಭೇದಭ್ರಮವು) ಕಂಡಿದೆಯಾದ್ದರಿಂದ.

ಪ್ರಕೃತ ಈ ಭಾಸ್ಕರಾಚಾರ್ಯರ ಪಕ್ಷದಲ್ಲಿ ಭೇದ-ಉಪಾಧಿಗಳಿಗೆ ಅಜ್ಞಾನಕಲ್ಪಿತತ್ವವನ್ನು ಹೇಳದೇ ಸತ್ಯತ್ವವನ್ನು ಹೇಳಿದ್ದರಿಂದ ಅನವಸ್ಥಾ ಮೊದಲಾದ ದೋಷಗಳು ಬರುವುದಿಲ್ಲವಾದರೂ ಸಹ 'ಉಪಾಧಿಯಿಂದ ಭೇದವು ಹುಟ್ಟುತ್ತದೆ' ಎಂಬ ಅಂಶವು ಕೂಡುವುದಿಲ್ಲ. (ಉಪಾಧಿಯಿಂದ ಭೇದವು ಹುಟ್ಟಲು ಸಾಧ್ಯವಿಲ್ಲ.)

**ಮೂಲ :- ಭೇದಶ್ಚೋಪಾಧಿತಃ ಕುತಃ ।**

**ಮಾಯಾವಾದೇ ಹ್ಯುಪಾಧೇರ್ಭೇದಸ್ಯ ಚ ಕಲ್ಪಿತತ್ವೇನ ಅನವಸ್ಥಾದಿದೋಷ-ಪ್ರಸಕ್ತಾವಪಿ ಉಪಾಧಿನಿಮಿತ್ತೋ ಭೇದಾವಭಾಸ ಇತ್ಯೇತಾವಾನಂಶೋ ಯುಜ್ಯತೇ ।** [88]**ಅಂಗುಲ್ಯವಷ್ಟಂಭಾದಿನಾ ಚಂದ್ರಾದಿಭೇದಾಧ್ಯಾಸದರ್ಶನಾತ್ । ಅಸ್ಮಿಂಸ್ತು ಪಕ್ಷೇ ಅನವಸ್ಥಾದಿದೋಷಾಭಾವೇಽಪಿ ಉಪಾಧಿತಃ ಭೇದೋ** [89]**ಭವತೀತ್ಯೇತನ್ನ ಯುಜ್ಯತೇ ।** [90]**ತದಯೋಗೇ ಚ ಜೀವಬ್ರಹ್ಮಾಶ್ರಯತಯಾ ಅಜ್ಞತಾಸರ್ವಜ್ಞತ್ವಯೋರ್ವ್ಯವಸ್ಥಾನಂ ಸುತರಾಂ ನ ಯುಜ್ಯತ ಇತಿ ಚಶಬ್ದಾರ್ಥಃ।**

**ಅನುವಾದ :-** ಇಲ್ಲಿ ಭಾಸ್ಕರಾಚಾರ್ಯರು ಈ ರೀತಿಯಾಗಿ ಶಂಕಿಸುತ್ತಾರೆ - ''ಈ ಹಿಂದೆ ಹೇಳಿದಂತೆ ಅನವಸ್ಥಾದಿದೋಷಗಳು ಮಾಯಾವಾದಿಗಳಿಗೆ (ವಾಚಸ್ಪತಿಮಿಶ್ರ- ವಿವರಣಕಾರರಿಗೆ) ಬರುತ್ತದೆ. ಹೊರತು ನಮಗೆ ಬರುವುದಿಲ್ಲ. ಏಕೆಂದರೆ - ''ಒಬ್ಬನೇ ಬ್ರಹ್ಮನು ಅಂತಃಕರಣ-ದೇಹ-ಇಂದ್ರಿಯಾದಿ ಅನಂತ ಉಪಾಧಿಸಂಬಂಧದಿಂದಾಗಿ ಅನಂತಜೀವಭಾವವನ್ನು ಹೊಂದುತ್ತಾನೆ'' ಎಂಬುದಾಗಿ ನಾವು ಅಂಗೀಕರಿಸಿದರೂ ಸಹ ಮಾಯಾವಾದಿಗಳಂತೆ ಭೇದ ಹಾಗೂ ಉಪಾಧಿಗಳಿಗೆ ನಾವು ಮಿಥ್ಯಾತ್ವವನ್ನು ಅಂಗೀಕರಿಸುವುದಿಲ್ಲ. ಕಿಂತು ಭೇದ-ಉಪಾಧಿಗಳಿಗೆ ಸತ್ಯತ್ವವನ್ನೇ ಅಂಗೀಕರಿಸುತ್ತೇವೆ.

ಭೇದ-ಉಪಾಧಿಗಳಿಗೆ ಸತ್ಯತ್ವವನ್ನು ಅಂಗೀಕರಿಸಿದರೆ ಅದ್ವೈತಭಂಗ ಆಗುವುದಲ್ಲ ? ಎಂದರೆ, ಅದು ಸರಿಯಲ್ಲ. ನಾವು ಭೇದಕ್ಕೆ ಸತ್ಯತ್ವವನ್ನು ಅಂಗೀಕರಿಸಿದರೂ ಸಹ ಸ್ವಾಭಾವಿಕಭೇದವನ್ನು ಅಂಗೀಕರಿಸಿಲ್ಲವಾದ್ದರಿಂದ ಅದ್ವೈತವಾದದ (ಅಭೇದವು ಸ್ವಾಭಾವಿಕ ಎಂಬ ಅದ್ವೈತವಾದದ) ವಿರೋಧ ಬರುವುದಿಲ್ಲ. ಇನ್ನು ಉಪಾಧಿಗಳಿಗೆ ಅಜ್ಞಾನಕಲ್ಪಿತತ್ವವನ್ನು ಅಂಗೀಕರಿಸಿದ್ದರೆ ಮಾಯಾವಾದಿಗಳಿಗೆ ಬರುವಂತೆ ಅನವಸ್ಥಾದಿದೋಷಗಳು ಬರುತ್ತಿದ್ದವು. ಆದರೆ ಉಪಾಧಿಗಳಿಗೆ ಸತ್ಯತ್ವವನ್ನು ಅಂಗೀಕರಿಸಿದ್ದರಿಂದ, ಅಜ್ಞಾನಕಲ್ಪಿತತ್ವವನ್ನು ಅಂಗೀಕರಿಸಿಲ್ಲವಾದ್ದರಿಂದ ಅನವಸ್ಥಾದಿದೋಷಗಳೂ ಬರುವುದಿಲ್ಲ.

---

88) ಚಕ್ಷುಷಃ ಅಂಗುಲ್ಯವಷ್ಟಂಭರೂಪೋಪಾಧಿನಾ ಇತ್ಯರ್ಥಃ । (ಶ್ರೀನಿ)

89) ಜಾಯತೇ ಇತ್ಯರ್ಥಃ ।

90) ಉಪಾಧಿತಃ ಭೇದಜನನಾಯೋಗೇ ಸತೀತ್ಯರ್ಥಃ । (ಶ್ರೀನಿ)

ಜಗತ್ತಿನಲ್ಲಿ ಬಿಂಬ-ಪ್ರತಿಬಿಂಬಗಳಲ್ಲಿನ ಭೇದವು ಮಿಥ್ಯೆಯಾಗಿರುವುದು ಕಂಡಿದ್ದರಿಂದ ಪ್ರಕೃತ ಬಿಂಬ-ಪ್ರತಿಬಿಂಬರಾಗಿರುವ ಜೀವ-ಬ್ರಹ್ಮರ ಭೇದವು ಸತ್ಯ ಹೇಗಾಗುತ್ತದೆ ? ಎಂದು ಶಂಕೆ ಬಂದರೆ, ಅದೂ ಸರಿಯಲ್ಲ. ಕಾರಣ ಜೀವ-ಬ್ರಹ್ಮರಲ್ಲಿ ನಾವು ಬಿಂಬ-ಪ್ರತಿಬಿಂಬಭಾವವನ್ನು ಅಂಗೀಕರಿಸುವುದಿಲ್ಲ. ಕಿಂತು ಜೀವರೆಲ್ಲರೂ ಬ್ರಹ್ಮನ ಅಂಶರಾದ್ದರಿಂದ ಜೀವ-ಬ್ರಹ್ಮರಲ್ಲಿ ಅಂಶಾಂಶಿಭಾವವನ್ನು ಅಂಗೀಕರಿಸುವುದರಿಂದ ತಂತು-ಪಟಗಳಲ್ಲಿಯಂತೆ ಭೇದಾಭೇದವನ್ನು ಅಂಗೀಕರಿಸುತ್ತೇವೆ. ಆದ್ದರಿಂದ ಜೀವ-ಬ್ರಹ್ಮರ ಭೇದವು ಔಪಾಧಿಕ ಹಾಗೂ ಸತ್ಯವಾಗಲು ಯಾವ ಭಾದಕವಿಲ್ಲ. ಹೀಗಾಗಿ ಜೀವ-ಬ್ರಹ್ಮರ ಸಂಬಂಧಿಯಾದ ಸರ್ವಜ್ಞತ್ವ-ಅಲ್ಪಜ್ಞತ್ವಗಳು ವಿರುದ್ಧವಾಗುವುದಿಲ್ಲ ಎಂಬುದಾಗಿ ಭಾಸ್ಕರಾಚಾರ್ಯರು ಅಭಿಪ್ರಾಯಪಡುತ್ತಾರೆ.

ಭಾಸ್ಕರಾಚಾರ್ಯರ ಈ ಮತವನ್ನು ಆಚಾರ್ಯರು ನಿರಾಕರಿಸುತ್ತಾರೆ -

**ಮೂಲ :- ಭೇದಶ್ಚೋಪಾಧಿತಃ ಕುತಃ ।**

**ಮೂಲಾರ್ಥ :- ಭೇದವು ಉಪಾಧಿಯಿಂದ ಹುಟ್ಟುತ್ತದೆ ಎಂದು ಹೇಗೆ ಹೇಳಲು ಸಾಧ್ಯ ? ಭಾಸ್ಕರಾಚಾರ್ಯರ ಈ ಪಕ್ಷದಲ್ಲಿ ಭೇದವು ಉಪಾಧಿಜನ್ಯ ಎಂಬ ಅಂಶವು ಉಪಪನ್ನವಾಗುವುದಿಲ್ಲ.**

ಮಾಯವಾದಮತದಲ್ಲಿ ಭೇದ ಹಾಗೂ ಉಪಾಧಿಗಳಿಗೆ ಕಲ್ಪಿತತ್ವವನ್ನು ಅಂಗೀಕರಿಸಿದ್ದರಿಂದ ಅನವಸ್ಥಾ ಮೊದಲಾದ ದೋಷಗಳು ಪ್ರಸಕ್ತವಾದರೂ ಸಹ, 'ಉಪಾಧಿನಿಮಿತ್ತವಾಗಿ ಭೇದಪ್ರತೀತಿಯು ಉಂಟಾಗುತ್ತದೆ' ಎಂಬ ಅಂಶವು ಉಪಪನ್ನವಾಗುತ್ತದೆ. ಏಕೆಂದರೆ, ಜಗತ್ತಿನಲ್ಲಿ ಚಕ್ಷುರಿಂದ್ರಿಯಕ್ಕೆ ಅಂಗುಲ್ಯವಷ್ಟಂಭ ರೂಪವಾದ ಉಪಾಧಿಯಿಂದಾಗಿ ಚಂದ್ರನಲ್ಲಿ ಭೇದಾಧ್ಯಾಸ (ಭೇದಭ್ರಮವು) ಕಂಡಿದೆಯಾದ್ದರಿಂದ.

ಪ್ರಕೃತ ಈ ಭಾಸ್ಕರಾಚಾರ್ಯರ ಪಕ್ಷದಲ್ಲಿ ಭೇದ-ಉಪಾಧಿಗಳಿಗೆ ಅಜ್ಞಾನಕಲ್ಪಿತತ್ವವನ್ನು ಹೇಳದೇ ಸತ್ಯತ್ವವನ್ನು ಹೇಳಿದ್ದರಿಂದ ಅನವಸ್ಥಾ ಮೊದಲಾದ ದೋಷಗಳು ಬರುವುದಿಲ್ಲವಾದರೂ ಸಹ 'ಉಪಾಧಿಯಿಂದ ಭೇದವು ಹುಟ್ಟುತ್ತದೆ' ಎಂಬ ಅಂಶವು ಕೂಡುವುದಿಲ್ಲ. (ಉಪಾಧಿಯಿಂದ ಭೇದವು ಹುಟ್ಟಲು ಸಾಧ್ಯವಿಲ್ಲ.)

ಜೀವ-ಬ್ರಹ್ಮರಲ್ಲಿ ಔಪಾಧಿಕವಾದ (ಉಪಾಧಿಜನ್ಯವಾದ) ಭೇದವು ಕೂಡುವುದಿಲ್ಲ ಎಂದಾದರೆ, ಆ ಔಪಾಧಿಕಭೇದನಿಮಿತ್ತದಿಂದ ಜೀವನಲ್ಲಿ ಅಜ್ಞತ್ವ, ಬ್ರಹ್ಮನಲ್ಲಿ ಸರ್ವಜ್ಞತ್ವವು ಆಶ್ರಿತವಾಗಿದೆ ಎಂಬ ವ್ಯವಸ್ಥೆಯು ಸುತರಾಂ ಕೂಡುವುದಿಲ್ಲ ಎನ್ನುವುದು 'ಭೇದಶ್ಚ' ಎಂಬ ಮೂಲದಲ್ಲಿನ 'ಚ'ಶಬ್ದದ ಅರ್ಥವಾಗಿದೆ.

**ಅವತಾರಿಕೆ :-** ಕಾರಣಕ್ಕೆ ಅನುಗುಣವಾಗಿ ಕಾರ್ಯವು ಆಗಬೇಕು ಎಂಬ ಅಭಿಪ್ರಾಯದಿಂದ ಶಂಕಿಸುತ್ತಾರೆ -

**ಟೀಕಾ :- ಕುತಃ ಸತ್ಯೋಽಪಾಧಿತಃ ಸತ್ಯಭೇದೋತ್ಪತ್ತಿಃ ನ ಯುಜ್ಯತೇ ? ಇತ್ಯತ ಆಹ -**

**ಮೂಲ :- ವಿದ್ಯಮಾನಸ್ಯ ಭೇದಸ್ಯ ಜ್ಞಾಪಕೋ ನೈವ ಕಾರಕಃ ।**
**ಉಪಾಧಿರ್ದೃಷ್ಟಪೂರ್ವೋ ಹಿ ......**

**ಹಿಶಬ್ದೋ ಹೇತೌ । ಯಸ್ಮಾತ್ [91] ಮಹಾರಜನಾದ್ಯುಪಾಧಿಃ ವಿದ್ಯಮಾನಸ್ಯೈವ ಪಟಾದ್ಯವಯವಭೇದಸ್ಯ ಜ್ಞಾಪಕ ಏವ ದೃಷ್ಟಪೂರ್ವಃ ನ ತು ಪ್ರಾಗವಿದ್ಯಮಾನಸ್ಯ ಕಾರಕಃ । ಅತೋ ಭೇದಶ್ಚೋಽಪಾಧಿತಃ ಕುತಃ ಇತಿ ಸಂಬಂಧಃ । ಅತ್ರ ಉಪಾಧಿಃ ಕಾರಕೋ ನ ದೃಷ್ಟಪೂರ್ವ ಇತ್ಯೇತಾವದೇವ ವಕ್ತವ್ಯಮ್ । ವಿದ್ಯಮಾನಸ್ಯ ಜ್ಞಾಪಕ ಇತ್ಯುಕ್ತಿಸ್ತು 'ಕಾರಕತ್ವಾಭಾವೇ ವೈಯರ್ಥ್ಯಂ ಸ್ಯಾತ್' ಇತಿ [92] ಶಂಕಾನಿರಾಸಾರ್ಥಾ ಇತಿ ಜ್ಞಾತವ್ಯಮ್।**

**ಅನುವಾದ :-** ಸತ್ಯವಾದ ಉಪಾಧಿಯಿಂದ ಸತ್ಯವಾದ ಭೇದದ ಉತ್ಪತ್ತಿಯು (''ಸತ್ಯವಾದ ಉಪಾಧಿಯಿಂದ ಸತ್ಯವಾದ ಭೇದವು ಹುಟ್ಟುತ್ತದೆ'' ಎಂಬ ಅಂಶವು) ಏಕೆ ಕೂಡುವುದಿಲ್ಲ ? ಎಂದು ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ-

---

91) ಪಟೇನ ಸಂಬದ್ಧೋ ಮಹಾರಜನಾದ್ಯುಪಾಧಿಃ ವಿದ್ಯಮಾನಸ್ಯ ಪಟಾವಯವಜನ್ಯಭೇದಸ್ಯ ಜ್ಞಾಪಕೋ ದೃಷ್ಟಪೂರ್ವಃ ಇತ್ಯರ್ಥಃ । ಭೇದೋ ಹಿ ವಸ್ತುಸ್ವರೂಪಮ್ । ಸ ಚ ಪಟೇನ ಸಹ ಪಟಾವಯವಜನ್ಯಃ । ಸ ಚ ಉಪಾಧಿಸಂಬಂಧಾತ್ ಪ್ರಾಕ್ಕಾಲೀನ ಇತಿ ನೋಪಾಧಿ ಜನ್ಯಃ, ಕಿಂತು ತಜ್ಜ್ಞಾಪ್ಯ ಏವ ಇತಿ ಭಾವಃ । (ಸತ್ಯನಾಥಟಿಪ್ಪಣೀ)

92) ವೈಯರ್ಥ್ಯಂ ಸ್ಯಾತ್ ಇತಿ ಶಂಕಾನಿರಾಸಾರ್ಥೇತಿ । 'ಔಪಾಧಿಕೋ ಭೇದ ಇತಿ ವ್ಯವಹಾರೇ ಔಪಾಧಿಕಶಬ್ದಸ್ಯ ನೈರರ್ಥಕ್ಯಂ ಸ್ಯಾತ್' ಇತಿ ಶಂಕಾನಿರಾಸಾರ್ಥೇತಿ ಜ್ಞಾತವ್ಯಮಿತ್ಯರ್ಥಃ । ಉಪಾಧಿಜ್ಞಾಪ್ಯತ್ವಂ 'ಔಪಾಧಿಕ'ಶಬ್ದಾರ್ಥ ಇತಿ ಭಾವಃ ॥ (ಸತ್ಯನಾಥಟಿಪ್ಪಣೀ)

**ಮೂಲ :- ವಿದ್ಯಮಾನಸ್ಯ ಭೇದಸ್ಯ ಜ್ಞಾಪಕೋ ನೈವ ಕಾರಕಃ ।**
**ಉಪಾಧಿಃ ದೃಷ್ಟಪೂರ್ವೋ ಹಿ ......**

**ಮೂಲಾರ್ಥ :-** ಉಪಾಧಿಯು ಮೊದಲೇ ಇದ್ದಂತಹ ಭೇದಕ್ಕೆ ಜ್ಞಾಪಕವಾಗಿರುವುದು ಕಂಡಿದೆ. ಹೊರತು ಮೊದಲು ಇಲ್ಲದಿದ್ದ ಭೇದಕ್ಕೆ ಕಾರಕ-(ಜನಕ)ವಾಗಿರುವುದು ಕಂಡಿಲ್ಲ. ಹಿ = ಯಾವ ಕಾರಣ ಹಾಗೆ ಕಂಡಿಲ್ಲವೋ ಆದ್ದರಿಂದ ''ಭೇದಶ್ಚೋಪಾಧಿತಃ ಕುತಃ'' ಎಂದು ಹಿಂದಿನ ವಾಕ್ಯದಿಂದ ಅನ್ವಯ.

ಮೂಲದಲ್ಲಿ 'ಹಿ'ಶಬ್ದವು ಹೇತು (ಯಸ್ಮಾತ್) ಎಂಬ ಅರ್ಥದಲ್ಲಿದೆ. ಹಾಗಾದರೆ - ಯಾವ ಕಾರಣ ಮಹಾರಜನ ಮೊದಲಾದ ಉಪಾಧಿಯು ಮೊದಲೇ ಇದ್ದಂತಹ ಪಟಾದಿಅವಯವಭೇದಕ್ಕೆ ಜ್ಞಾಪಕವಾಗಿರುವುದೇ (ತಿಳಿಸಿಕೊಡುವುದೇ) ಕಂಡಿದೆ. ಹೊರತು ಮೊದಲು ಇಲ್ಲದ ನೂತನಭೇದಕ್ಕೆ ಕಾರಕ(ಜನಕ)ವಾಗಿರುವುದು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ''ಭೇದಶ್ಚೋಪಾಧಿತಃ ಕುತಃ'' ಉಪಾಧಿಯಿಂದ ಭೇದವು ಹೇಗೆ ಹುಟ್ಟುತ್ತದೆ ? ಎಂಬುದಾಗಿ ಹಿಂದಿನ ವಾಕ್ಯದಿಂದ ಅರ್ಥಸಂಬಂಧ.

ಇಲ್ಲಿ ''ಉಪಾಧಿಃ ಕಾರಕೋ ನ ದೃಷ್ಟಪೂರ್ವಃ'' (ಉಪಾಧಿಯು ಹೊಸಭೇದಕ್ಕೆ ಜನಕವಾಗಿರುವುದು ಎಲ್ಲಿಯೂ ಕಂಡಿಲ್ಲ) ಎಂದಷ್ಟೇ ಹೇಳಬೇಕಿತ್ತು. ಆದರೆ ''ವಿದ್ಯಮಾನಸ್ಯ ಜ್ಞಾಪಕಃ'' (ಮೊದಲೇ ಇದ್ದಂತಹ ಭೇದಕ್ಕೆ ಜ್ಞಾಪಕವಾಗುತ್ತದೆ) ಎಂದು ಹೇಳಿದ್ದು ಯಾಕೆ ? ಎಂದರೆ, ''ಉಪಾಧಿಯು ಭೇದಕ್ಕೆ ಕಾರಕವಾಗದೇ ಹೋದರೆ ಉಪಾಧಿಗೆ ವೈಯರ್ಥ್ಯ ಬರಬೇಕಾಗುತ್ತದೆ'' ಎಂಬ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಹಾಗೆ ಹೇಳಿದ್ದಾರೆ ಎಂದು ತಿಳಿಯಬೇಕು.

**ವಿವರಣೆ :- (ಅ)** ಉಪಾಧಿಯಿಂದ ಭೇದವು ತಿಳಿಯಲ್ಪಡುತ್ತದೆ ಎಂದು ಹೇಳಬೇಕೇ ಹೊರತು ಉಪಾಧಿಯಿಂದ ಭೇದವು ಹುಟ್ಟುತ್ತದೆ ಎಂದು ಹೇಳಬಾರದು. ಏಕೆಂದರೆ :- ಪಟದಲ್ಲಿ ಅವಯವಭೇದವಿದೆ. ಅಂದರೆ ಪಟದಲ್ಲಿ 100 ಅವಯವಗಳು (ತಂತುಗಳು) ಇವೆ ಎಂದಿಟ್ಟುಕೊಳ್ಳೋಣ. ಅವುಗಳಲ್ಲಿ ಕೆಲವು ತಂತುಗಳು ಬಿಳಿ ಬಣ್ಣದ್ದಾಗಿವೆ, ಇನ್ನು ಕೆಲವು ಕಪ್ಪು ಬಣ್ಣದ್ದಾಗಿವೆ. ಮತ್ತೆ ಕೆಲವು ನೀಲಿ ಬಣ್ಣದ್ದಾಗಿವೆ. ಈ ಬಿಳಿ-ಕಪ್ಪು-ನೀಲಿ ಬಣ್ಣದ ತಂತುಗಳಲ್ಲಿ ಮೊದಲಿನಿಂದಲೂ (ಪಟದಲ್ಲಿ ಬಣ್ಣಗಳು ಬರುವುದಕ್ಕಿಂತ ಮೊದಲಿನಿಂದಲೂ) ಪರಸ್ಪರಭೇದವಿದ್ದೇ ಇದೆ. ಆದರೆ (ಪಟದಲ್ಲಿ ಒಂದೇ ಬಣ್ಣವಿದ್ದಾಗ) ಇದ್ದ ಭೇದವು ತೋರುತ್ತಿರುವುದಿಲ್ಲ.

ತಂತುಗಳಲ್ಲಿ ಅನೇಕ ಬಣ್ಣಗಳು ಬಂದಾಗ ಮೊದಲೇ ಇದ್ದ ಭೇದವನ್ನು ಈ ಬಿಳಿ-ಕಪ್ಪು-ನೀಲಿ ಬಣ್ಣಗಳೆಂಬ ಉಪಾಧಿಗಳು ಸ್ಪಷ್ಟವಾಗಿ ತಿಳಿಸಿಕೊಡುತ್ತವೆ.

ಹೊರತು ಪಟದಲ್ಲಿ ಈ ಬಿಳಿ-ಕಪ್ಪು-ನೀಲಿ ಬಣ್ಣಗಳು ಬರುವುದಕ್ಕಿಂತ ಮೊದಲು ತಂತುಗಳಲ್ಲಿ ಪರಸ್ಪರಭೇದ ಇರಲೇ ಇಲ್ಲ. ಮೊದಲು ಇಲ್ಲದಿದ್ದ ಭೇದವನ್ನು ಈ ಬಣ್ಣಗಳು ಹುಟ್ಟಿಸುತ್ತವೆ ಎಂದಲ್ಲ.

ಜಗತ್ತಿನಲ್ಲಿ ಹೀಗೆ ಕಂಡಿದ್ದರಿಂದ 'ಉಪಾಧಿಯು ಭೇದಕ್ಕೆ ಜ್ಞಾಪಕ' ಎಂದು ಹೇಳಬೇಕೇ ಹೊರತು 'ಉಪಾಧಿಯು ಭೇದಕ್ಕೆ ಕಾರಕ ' ಎಂದು ಹೇಳಬಾರದು ಎಂದು ಅಭಿಪ್ರಾಯ.

**(ಆ)** ಉಪಾಧಿಯು ಭೇದಕ್ಕೆ ಕಾರಕ ಎಂದು ಹೇಳುವ ಮತವನ್ನು ನಿರಾಕರಿಸುವ ಉದ್ದೇಶವಿದ್ದದ್ದಾದರೆ ಮೂಲದಲ್ಲಿ ''ಉಪಾಧಿಃ ನೈವ ಕಾರಕಃ'' ಎಂದಷ್ಟೇ ಹೇಳಬೇಕಿತ್ತು. ''ವಿದ್ಯಮಾನಸ್ಯ ಭೇದಸ್ಯ ಜ್ಞಾಪಕಃ'' ಎಂದು ಅದನ್ನೇಕೆ ಹೇಳಿದರು? ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಆಚಾರ್ಯರು ''ಉಪಾಧಿಃ ನೈವ ಕಾರಕಃ'' (ಉಪಾಧಿಯು ಭೇದವನ್ನು ಹುಟ್ಟಿಸುವುದಿಲ್ಲ) ಎಂದಷ್ಟೇ ಹೇಳಿಬಿಟ್ಟಿದ್ದರೆ, ಹಾಗಾದರೆ ಉಪಾಧಿಯಿಂದ ಯಾವ ಪ್ರಯೋಜನವೂ ಇಲ್ಲದ ಕಾರಣ ಉಪಾಧಿಯು ವ್ಯರ್ಥ ಎಂಬುದಾಗಿ ಉಪಾಧಿಗೆ ವೈಯರ್ಥ್ಯಶಂಕೆ ಬರುತ್ತದೆ. ಅದಕ್ಕಾಗಿ ಉಪಾಧಿಗೆ ವೈಯರ್ಥ್ಯ ಶಂಕೆಯನ್ನು ಪರಿಹರಿಸುವುದಕ್ಕಾಗಿ 'ಉಪಾಧಿಃ ಭೇದಸ್ಯ ಜ್ಞಾಪಕಃ' (ಉಪಾಧಿಯು ಭೇದಕ್ಕೆ ಕಾರಕವಾಗದಿದ್ದರೂ ಜ್ಞಾಪಕವಾಗುತ್ತದೆ) ಎಂಬ ಅಂಶವನ್ನು ಹೇಳಿದ್ದಾರೆ. ಉಪಾಧಿಯಿಂದ ಭೇದಜನನಕಾರ್ಯ ಉಂಟಾಗದಿದ್ದರೂ, ಭೇದಜ್ಞಾಪನರೂಪವಾದ ಪ್ರಯೋಜನ ಇರುವುದರಿಂದ ಉಪಾಧಿಯು ವ್ಯರ್ಥವಲ್ಲ ಎಂಬುದಾಗಿ ಉಪಾಧಿ ವೈಯರ್ಥ್ಯಶಂಕಾವನ್ನು ಈ ಮೂಲಕ ಪರಿಹರಿಸಿದ್ದಾರೆ ಆಚಾರ್ಯರು ಎಂದು ಭಾವ.

**ಟೀಕಾ :- ನ ಚ ಮಹಾರಜನಾದಿಃ ಪಟಸ್ಯೈವ ಭೇದಕಃ 'ದ್ವೌ ಪಟೌ' ಇತ್ಯಪ್ರತೀತೇಃ । ನ ಚ ದಂಡಕುಂಡಲೋಪಾಧಿಭ್ಯಾಂ ಏಕ ಏವ ದೇವದತ್ತೋ ಭಿದ್ಯತ ಇತಿ ವಾಚ್ಯಮ್ । ದೇವದತ್ತಭೇದಸ್ಯ ಅಪ್ರತೀತೇಃ । ದಂಡಕುಂಡಲ-ಸಂಬಂಧಾತ್ ವಿಶಿಷ್ಟದ್ವಯಸ್ಯೈವೋತ್ಪತ್ತೇಃ ।**

**ಅನುವಾದ :-** ಮಹಾರಜನಾದಿ ಉಪಾಧಿಯು ಪಟದ ಅವಯವಗಳಿಗೆ ಭೇದಕ (ಭೇದಜನಕ) ಎಂದು ಅಂಗೀಕರಿಸುವುದಿಲ್ಲ. ಒಂದುವೇಳೆ ಹಾಗೆ ಅಂಗೀಕರಿಸಿದ್ದರೆ, ಆ ಪಟದ ಅವಯವಗಳು ಮೊದಲೇ ಸಿದ್ಧವಾದ್ದರಿಂದ ''ಉಪಾಧಿಯು ವಿದ್ಯಮಾನವಾದ ಭೇದಕ್ಕೆ ಜ್ಞಾಪಕವಾಗಿದ್ದೇ ಕಂಡಿದೆ. ಹೊರತು ಕಾರಕವಾದದ್ದು ಕಂಡಿಲ್ಲ'' ಎಂದು ಹೇಳಿದ್ದು ಯುಕ್ತವಾಗುತ್ತಿತ್ತು. ಆದರೆ ನಾವು ಉಪಾಧಿಯು ಪಟದ ಅವಯವಗಳಿಗೆ ಭೇದಕ ಎಂದು ಹೇಳುವುದಿಲ್ಲ. ಕಿಂತು ಪಟರೂಪವಾದ ಅವಯವಿಗೇ ಭೇದಕ ಎಂದು ಹೇಳುತ್ತೇವೆ. ಆದ್ದರಿಂದ ಪಟರೂಪವಾದ ಅವಯವಿಯಲ್ಲಿ ಭೇದವು ಇಲ್ಲದಿರುವುದರಿಂದ ಉಪಾಧಿಯು ಅವಿದ್ಯಮಾನವಾದ ಭೇದಕ್ಕೆ ಕಾರಕವೇ ಆಗುತ್ತದೆ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ಹಾಗೆ ಉಪಾಧಿಯು ಪಟರೂಪವಾದ ಅವಯವಿಯಲ್ಲಿ ಭೇದಕ ಎಂದು ಹೇಳಿದರೆ ''ದ್ವೌ ಪಟೌ'' ಎಂದು ಪ್ರತೀತಿ ಬರಬೇಕಾಗುತ್ತದೆ. ಈಗಲಾದರೋ ಪಟವನ್ನು ನೋಡಿದಾಗ ''ಏಕಃ ಪಟಃ'' ಎಂದೇ ಪ್ರತೀತಿ ಬರುತ್ತದೆಯೇ ಹೊರತು ''ದ್ವೌ ಪಟೌ'' ಎಂದು ಪ್ರತೀತಿ ಬರುವುದಿಲ್ಲ. ಆದ್ದರಿಂದ ಉಪಾಧಿಯು ಪಟರೂಪವಾದ ಅವಯವಿಯಲ್ಲಿ ಭೇದಕ ಎಂದು ಹೇಳುವುದು ಸರಿಯಲ್ಲ.

ಒಬ್ಬನೇ ದೇವದತ್ತನು ದಂಡ-ಕುಂಡಲರೂಪವಾದ ನಾನಾಉಪಾಧಿ ಸಂಬಂಧದಿಂದಾಗಿ 'ದಂಡೀ ದೇವದತ್ತಃ' 'ಕುಂಡಲೀ ದೇವದತ್ತಃ' ಎಂಬುದಾಗಿ ನಾನಾ ಪ್ರಕಾರವಾಗಿ ವ್ಯವಹರಿಸಲ್ಪಡುತ್ತಾನೆ. ವ್ಯವಹ್ರಿಯಮಾಣವಾದ ವಸ್ತುವಿನಲ್ಲಿ ಭೇದವಿಲ್ಲದಿದ್ದರೆ ವ್ಯವಹಾರಭೇದವು ಸಂಭವಿಸುವುದಿಲ್ಲ. ಆದ್ದರಿಂದ ದಂಡ-ಕುಂಡಲ ಮೊದಲಾದ ಉಪಾಧಿಯು ದೇವದತ್ತ ಎಂಬ ಅವಯವಿಯಲ್ಲಿಯೇ ಭೇದಕ (ಭೇದಜನಕ) ಎಂದು ಅಂಗೀಕರಿಸಲೇಬೇಕು ಎಂದು ಶಂಕೆ ಬಂದರೆ, ಅದೂ ಸರಿಯಲ್ಲ.

ಏಕೆಂದರೆ - ದಂಡಾದಿ ಉಪಾಧಿಯು ದೇವದತ್ತನಲ್ಲಿಯೇ ಭೇದಕ ಎನ್ನುವುದಾದರೆ (ದೇವದತ್ತನಲ್ಲಿ ಭೇದವಿರುವುದಾದರೆ) ''ದ್ವೌ ದೇವದತ್ತೌ'' ಎಂದು ಪ್ರತೀತಿ ಬರಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ದಂಡಾದಿ ಉಪಾಧಿಯು ದೇವದತ್ತನಲ್ಲಿ ಭೇದಕ ಅಲ್ಲ.

ಹಾಗಾದರೆ ಒಂದುವೇಳೆ ದಂಡ-ಕುಂಡಲರೂಪವಾದ ಉಪಾಧಿಗಳಿಂದ ದೇವದತ್ತನಲ್ಲಿ ಭೇದ ಹುಟ್ಟುವುದಿಲ್ಲ ಎಂದಾದರೆ, ಆ ದಂಡ-ಕುಂಡಲರೂಪವಾದ ಉಪಾಧಿಗಳಿಂದ ಏನು ಹುಟ್ಟುತ್ತದೆ ? ಏನೂ ಹುಟ್ಟುವುದಿಲ್ಲ ಎಂದಾದರೆ ಉಪಾಧಿಗಳಿಗೆ ವೈಯರ್ಥ್ಯ ಬರಬೇಕಾಗುತ್ತದೆ ಎಂದು ಪ್ರಶ್ನೆ ಬಂದರೆ, ಅದಕ್ಕೆ ಈ ರೀತಿ ಸಮಾಧಾನ. ಒಬ್ಬನೇ ದೇವದತ್ತನಲ್ಲಿ ದಂಡರೂಪ ಉಪಾಧಿಸಂಬಂಧದಿಂದಾಗಿ ದಂಡವೈಶಿಷ್ಟ್ಯವು ಹುಟ್ಟುತ್ತದೆ. (ದಂಡವಿಶಿಷ್ಟದೇವದತ್ತ ಎಂಬ ವಿಶಿಷ್ಟಪದಾರ್ಥಾಂತರವು ಹುಟ್ಟುತ್ತದೆ.) ಕುಂಡಲರೂಪ ಉಪಾಧಿಸಂಬಂಧದಿಂದಾಗಿ ಕುಂಡಲವೈಶಿಷ್ಟ್ಯವು ಹುಟ್ಟುತ್ತದೆ. (ಕುಂಡಲವಿಶಿಷ್ಟ ದೇವದತ್ತ ಎಂಬ ವಿಶಿಷ್ಟಪದಾರ್ಥಾಂತರವು ಹುಟ್ಟುತ್ತದೆ.) ಹೀಗೆ ದಂಡ-ಕುಂಡಲರೂಪವಾದ ಉಪಾಧಿಗಳಿಂದಾಗಿ ಎರಡು ವಿಶಿಷ್ಟವಸ್ತುಗಳು ಹುಟ್ಟುತ್ತವೆಯೇ ಹೊರತು ದೇವದತ್ತಸ್ವರೂಪದಲ್ಲಿಯೇ ಭೇದವು ಹುಟ್ಟುವುದಿಲ್ಲ.

**ಟೀಕಾ :- ನ ಚೈವಮೇವಾಸ್ತು ಪ್ರಕೃತ ಇತಿ ವಾಚ್ಯಮ್ । ಉಪಾಧ್ಯಪಗಮೇ ಜೀವಸ್ಯ ವಿನಾಶ ಏವ ನ ಬ್ರಹ್ಮೈಕ್ಯಾಪತ್ತಿಃ ಇತ್ಯಾಪತ್ತೇಃ । ಜೀವೇ ನಷ್ಟೇ ಸ್ವರೂಪಮಾತ್ರಾವಶೇಷ ಏವ ತಥೋಚ್ಯತ ಇತಿ ಚೇತ್ । ತರ್ಹಿ ಬ್ರಹ್ಮಣ್ಯೇವ ಬಂಧಮೋಕ್ಷಾವಂಗೀಕೃತೌ ಸ್ಯಾತಾಮಿತ್ಯುಕ್ತದೋಷಾಪತ್ತಿರಿತಿ ।**

**ಅನುವಾದ :-** ದಂಡ-ಕುಂಡಲರೂಪ ಉಪಾಧಿಸಂಬಂಧದಿಂದ ಎರಡು ವಿಶಿಷ್ಟ ವಸ್ತುಗಳೇ ಹುಟ್ಟುತ್ತವೆ ಎಂದು ನೀವು ಹೇಳುವುದಾದರೆ, ಹಾಗಾದರೆ ನಾವೂ ಹಾಗೆಯೇ ಹೇಳುತ್ತೇವೆ. ಅಂತಃಕರಣಾದಿರೂಪ ಉಪಾಧಿಸಂಬಂಧದಿಂದ ಜೀವರೂಪವು ದುಃಖ- ಅಜ್ಞಾನಾದಿಗಳಿಂದ ವಿಶಿಷ್ಟವಾಗಿ ಹುಟ್ಟುತ್ತದೆ ಎಂದೇ ಹೇಳುತ್ತೇವೆ ಎಂಬುದಾಗಿ ಶಂಕೆ ಬಂದರೆ, ಅದೂ ಸರಿಯಲ್ಲ. ಏಕೆಂದರೆ ಯಾವ ರೀತಿಯಾಗಿ ದಂಡಾದಿ ಉಪಾಧಿಯು ನಿವೃತ್ತವಾದರೆ ತದ್ವಿಶಿಷ್ಟವಾದದ್ದಕ್ಕೇನೇ ನಾಶವು ಕಂಡಿದೆಯೋ ಅದೇ ರೀತಿಯಾಗಿ ಅಂತಃಕರಣಾದಿ ಉಪಾಧಿಯು ನಿವೃತ್ತವಾದರೆ ತದ್ವಿಶಿಷ್ಟ ಜೀವನಿಗೆ ವಿನಾಶವೇ ಆಗುತ್ತದೆ, ಹೊರತು ಬ್ರಹ್ಮನಿಂದ ಐಕ್ಯಾಪತ್ತಿ ಇಲ್ಲ ಎಂದಾಗಬೇಕಾಗುತ್ತದೆ.

ದುಃಖಾದಿವಿಶಿಷ್ಟನಾದ ಜೀವನು ನಷ್ಟವಾಗುತ್ತಿರಲು ಏನು ಸ್ವರೂಪಮಾತ್ರವು (ವಿಶೇಷ್ಯಮಾತ್ರವು) ಉಳಿಯುವುದೋ ಆ ಸ್ವರೂಪಮಾತ್ರಾವಶೇಷವೇ ಬ್ರಹ್ಮೈಕ್ಯಾಪತ್ತಿ ಎಂದು ಕರೆಯಲ್ಪಡುತ್ತದೆ ಎಂಬುದಾಗಿ ಹೇಳುವುದಾದರೆ,

ಹಾಗಾದರೆ ಬ್ರಹ್ಮನಲ್ಲಿಯೇ ಬಂಧ-ಮೋಕ್ಷಗಳನ್ನು ಅಂಗೀಕರಿಸಬೇಕಾದ ಪ್ರಸಂಗ ಬರುತ್ತದೆ.

ಅಂದರೆ - ಯಾವ ರೀತಿಯಾಗಿ ದೇವದತ್ತರೂಪ ವಿಶೇಷ್ಯಮಾತ್ರದಲ್ಲಿ ದಂಡಾದಿ ಉಪಾಧಿಸಂಬಂಧದಿಂದ 'ದಂಡವಿಶಿಷ್ಟ ದೇವದತ್ತ' ಎಂಬ ವಿಶಿಷ್ಟಪದಾರ್ಥಾಂತರದ ಉತ್ಪತ್ತಿ ಉಂಟಾಗುವುದೋ ಮತ್ತು ದಂಡಾದಿ ಉಪಾಧಿ ಸಂಬಂಧ ನಾಶವಾದರೆ 'ದಂಡವಿಶಿಷ್ಟ ದೇವದತ್ತ' ಎಂಬ ವಿಶಿಷ್ಟಪದಾರ್ಥಾಂತರದ ನಾಶವೂ ಉಂಟಾಗುವುದೋ ಅದೇ ರೀತಿಯಾಗಿ ವಿಶೇಷ್ಯಭೂತವಾದ ಚಿನ್ಮಾತ್ರದಲ್ಲಿಯೇ ಅಂತಃಕರಣಾದಿ ಉಪಾಧಿಸಂಬಂಧದಿಂದ ಅದರ ಕಾರ್ಯವಾದ ಅಜ್ಞಾನ-ದುಃಖಾದಿರೂಪಬಂಧವು ಬರುವುದರಿಂದ, ಬಂಧ-ಮೋಕ್ಷಗಳಿಗೆ ಸಾಮಾನಾಧಿಕರಣ್ಯನಿಯಮ ಇರುವ ಕಾರಣ ಶ್ರವಣಾದಿಸಾಧ್ಯವಾದ ಅಪರೋಕ್ಷಜ್ಞಾನದಿಂದ ಅಂತಃಕರಣಾದಿ ಉಪಾಧಿಯು ನಾಶವಾಗುತ್ತಿರಲು ಅಜ್ಞಾನಾದಿರೂಪಬಂಧದ ಧ್ವಂಸವನ್ನೂ ಅಲ್ಲಿಯೇ (ಆ ಚಿನ್ಮಾತ್ರದಲ್ಲಿಯೇ = ಬ್ರಹ್ಮನಲ್ಲಿಯೇ) ಅಂಗೀಕರಿಸಬೇಕಾದ ಪ್ರಸಂಗ ಬರುತ್ತದೆ ಎಂದು ಅಭಿಪ್ರಾಯ.

ಆಗಲಿ, ಬ್ರಹ್ಮನಿಗೇನೇ ಬಂಧ-ಮೋಕ್ಷಗಳನ್ನು ಅಂಗೀಕರಿಸೋಣ. ಏನು ದೋಷ ? ಎಂದರೆ ಅದಕ್ಕೆ ಹೇಳಿದರು -

**''ಉಕ್ತದೋಷಾಪತ್ತಿಃ''**

ಅಂದರೆ - ಬ್ರಹ್ಮನಿಗೆ ಅಜ್ಞಾನರೂಪಬಂಧವನ್ನು ಅಂಗೀಕರಿಸಿದರೆ

**''ಅಜ್ಞತಾಽಖಿಲಸಂವೇತ್ತುಃ ಘಟತೇ ನ ಕುತಶ್ಚನ ।''**

ಎಂಬುದಾಗಿ ಹೇಳಿದ ದೋಷ ಬರಬೇಕಾಗುತ್ತದೆ. ಇನ್ನು ಬ್ರಹ್ಮನಿಗೆ ದುಃಖರೂಪಬಂಧವನ್ನು ಅಂಗೀಕರಿಸಿದರೆ

**''ಆನಂದಾದಿರೂಪಸ್ಯ ದುಃಖಾದಿಕಮಪಿ ನ ಘಟತೇ ।''**

(ಸ್ವತಃ ಆನಂದಾದಿರೂಪನಾದ ಬ್ರಹ್ಮನಿಗೆ ದುಃಖಾದಿಗಳೂ ಕೂಡುವುದಿಲ್ಲ) ಎಂಬುದಾಗಿ ಹೇಳಿದ ದೋಷವು ಬರಬೇಕಾಗುತ್ತದೆ ಎಂದು ಅಭಿಪ್ರಾಯ.

**ಅವತಾರಿಕೆ :-** ''ಉಪಾಧಿಯು ವಿದ್ಯಮಾನವಾದ (ಮೊದಲೇ ಇದ್ದಂತಹ) ಭೇದಕ್ಕೆ ಜ್ಞಾಪಕವಾಗಿದ್ದು ಕಂಡಿದೆಯೇ ಹೊರತು ಭೇದಕವಾಗಿದ್ದು (ಹೊಸ ಭೇದಕ್ಕೆ

ಜನಕವಾಗಿದ್ದು) ಕಂಡಿಲ್ಲ'' ಎಂಬ ನಮ್ಮ ಅಭಿಪ್ರಾಯದ ಮೇಲೆ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುತ್ತಾರೆ -

**ಟೀಕಾ :- ನನ್ವೇಕಸ್ಮಿನ್ನೇವಾಕಾಶೇ ಘಟಮಠಾದ್ಯುಪಾಧಿಭಿರ್ಭೇದಃ ಕ್ರಿಯಮಾಣೋ ದೃಶ್ಯತ ಏವ । ನೇತ್ಯಾಹ-**

104 **ಮೂಲ :- ... ಖೇಽಪಿ ದೇಶಾಂತರಸ್ಯ ಸಃ ।**

**ಜ್ಞಾಪಕೋ ವಿದ್ಯಮಾನಸ್ಯ......**

**ಯದಾ [93]ಆಕಾಶೇ ಭೇದೋ ನಾಸ್ತೀತಿ[94] ಸಿದ್ಧಾಂತಃ ತದಾ ಅಂತರಶಬ್ದೋ ವಿಶೇಷವಚನಃ । ತತಶ್ಚ 'ಖೇಽಪಿ[95] ಪ್ರಾಗೇವ ವಿದ್ಯಮಾನಸ್ಯ [96]ದೇಶವಿಶೇಷಸ್ಯ ಜ್ಞಾಪಕ ಏವ ಸ ಉಪಾಧಿರಂಗೀಕ್ರಿಯತೇ ನ ತು ಭೇದಸ್ಯ ಕಾರಕಃ' ಇತಿ ನಾಯಂ[97] ದೃಷ್ಟಾಂತ ಇತ್ಯರ್ಥಃ ।**

**ಯದಾ ತು [98]ಘಟಮಠಾದ್ಯಾಕಾಶಭೇದಾಭ್ಯುಪಗಮಃ ತದಾ [99]ಖೇಽಪಿ ಘಟಾದ್ಯುಪಾಧಿಃ ಪ್ರಾಗ್ವಿದ್ಯಮಾನಸ್ಯೈವ ದೇಶಾಂತರಸ್ಯ ದೇಶಭೇದಸ್ಯ ಜ್ಞಾಪಕ ಏವ ನ ತು ಕಾರಕ ಇತಿ [100]ಯೋಜ್ಯಮ್ ।**

**ಅನುವಾದ :-** 'ಉಪಾಧಿಯು ವಿದ್ಯಮಾನವಾದ ಭೇದಕ್ಕೆ ಜ್ಞಾಪಕವಾಗುತ್ತದೆಯೇ ಹೊರತು ಭೇದಕವಲ್ಲ' ಎಂಬ ನಿಮ್ಮ ಅಭಿಪ್ರಾಯವು ಸರಿಯಲ್ಲ. ಏಕೆಂದರೆ -

---

93) ಅವ್ಯಾಕೃತಾಕಾಶೇ ಇತ್ಯರ್ಥಃ । (ಶ್ರೀನಿ)

94) ಅಂಶಾಂಶಿನೋಃ ಅಂಶಾನಾಂ ಚ ಅಂಶಿನಾಂ ಚ ಪರಸ್ಪರಂ ಚಾತ್ಯಂತಾಭೇದಾಂಗೀಕಾರಾದಿತ್ಯರ್ಥಃ । (ಶ್ರೀನಿ)

95) ಖೇಽಪಿ ಅವ್ಯಾಕೃತಾಕಾಶೇಽಪಿ । (ಶ್ರೀನಿ)

96) ದೇಶಾಂತರಸ್ಯ ಇತ್ಯಸ್ಯಾರ್ಥೋ ದೇಶವಿಶೇಷಸ್ಯ ಇತಿ । (ಶ್ರೀನಿ)

97) ಅಯಂ ಅವ್ಯಾಕೃತಾಕಾಶಃ । (ಶ್ರೀನಿ)

98) ಭೂತಾಕಾಶೇ ಘಟಮಠಾದ್ಯವಚ್ಛಿನ್ನಾಕಾಶೇನ ಭೇದಾಭ್ಯುಪಗಮಃ ಇತ್ಯರ್ಥಃ । (ಶ್ರೀನಿ)

99) ಖೇಽಪಿ ಭೂತಾಕಾಶೇಽಪಿ । (ಶ್ರೀನಿ)

100 ಮೂಲಂ ಯೋಜ್ಯಂ ಇತ್ಯರ್ಥಃ ।

ಒಂದೇ ಆಕಾಶದಲ್ಲಿಯೇ ಘಟ-ಮಠಾದಿ ಉಪಾಧಿಗಳಿಂದ 'ಅಯಂ ಘಟಾಕಾಶಃ' 'ಅಯಂ ಮಠಾಕಾಶಃ' (ಇದು ಘಟಾಕಾಶ, ಇದು ಮಠಾಕಾಶ) ಎಂಬುದಾಗಿ ಭೇದ ಉಂಟಾಗುವುದು (ಹುಟ್ಟುವುದು ) ಕಂಡಿದೆಯಲ್ಲವೇ ? ಎಂದು ಶಂಕೆ ಬಂದರೆ, ಅದು ಸರಿಯಲ್ಲ ಎಂದು ಹೇಳುತ್ತಾರೆ -

**ಮೂಲ :- ....ಖೇऽಪಿ ದೇಶಾಂತರಸ್ಯ ಸಃ ।**
**ಜ್ಞಾಪಕೋ ವಿದ್ಯಮಾನಸ್ಯ .....**

**ಮೂಲಾರ್ಥ - 1. ಅವ್ಯಾಕೃತ ಆಕಾಶದಲ್ಲಿಯೂ ಸಹ ಘಟಮಠಾದಿ ಉಪಾಧಿಯು ವಿದ್ಯಮಾನವಾದ (ಮೊದಲೇ ಇದ್ದಂತಹ) ದೇಶಾಂತರಕ್ಕೆ = ದೇಶವಿಶೇಷಕ್ಕೆ ಜ್ಞಾಪಕವಾಗುತ್ತದೆ.**

**ಮೂಲಾರ್ಥ 2. ಭೂತಾಕಾಶದಲ್ಲಿಯೂ ಸಹ ಘಟಮಠಾದಿ ಉಪಾಧಿಯು ವಿದ್ಯಮಾನವಾದ (ಮೊದಲೇ ಇದ್ದಂತಹ) ದೇಶಾಂತರಕ್ಕೆ = ದೇಶಭೇದಕ್ಕೆ ಜ್ಞಾಪಕವಾಗುತ್ತದೆ. ಹೊರತು ದೇಶಭೇದಕ್ಕೆ ಕಾರಕವಲ್ಲ.**

ಆಕಾಶವು ಎರಡುವಿಧ :- 1) ಅವ್ಯಾಕೃತ ಆಕಾಶ. 2) ಭೂತಾಕಾಶ. ಮೊದಲನೇ ಅವ್ಯಾಕೃತ ಆಕಾಶದಲ್ಲಿ ಭೇದ ಇಲ್ಲವೇ ಇಲ್ಲ. ಅಂದರೆ - ಆ ಆಕಾಶದ ಅಂಶಗಳು = ದೇಶವಿಶೇಷಗಳು ಯಾವದ್ದ್ರವ್ಯಭಾವಿಯಾದ್ದರಿಂದ ಅಲ್ಲಿ ಅತ್ಯಂತಾಭೇದವನ್ನೇ ಅಂಗೀಕರಿಸಲಾಗಿದೆ. ಅಲ್ಲಿ ಅಂಶ-ಅಂಶಿಗಳಿಗೆ, ಅಂಶಗಳಲ್ಲಿ ಹಾಗೂ ಅಂಶಿಗಳಲ್ಲಿ ಪರಸ್ಪರವಾಗಿ ಅತ್ಯಂತಾಭೇದವನ್ನೇ ಅಂಗೀಕರಿಸಲಾಗಿದೆ ಎಂದು ಅಭಿಪ್ರಾಯ. ಇನ್ನು ಎರಡನೇ ಭೂತಾಕಾಶದಲ್ಲಿ ಭೇದ ಇದೆ. ಆದರೆ ಆ ಭೇದವು ಉಪಾಧಿಯಿಂದ ಜ್ಞಾಪ್ಯವಾಗಿದೆಯೋ ಹೊರತು ಉಪಾಧಿಕೃತ ಅಲ್ಲ ಎನ್ನುವುದು ಸಿದ್ಧಾಂತ.

ಪ್ರಕೃತ ''ಒಂದೇ ಆಕಾಶದಲ್ಲಿ ಘಟಮಠಾದಿ ಉಪಾಧಿಯು ಭೇದಕವಾಗಿರುವುದು ಕಂಡಿದೆಯಲ್ಲ ?'' ಎಂದು ಶಂಕಿಸುವಾಗ ಆಕಾಶಪದದಿಂದ ಅವ್ಯಾಕೃತ ಆಕಾಶ ಹಾಗೂ ಭೂತಾಕಾಶ ಯಾವುದನ್ನೇ ತೆಗೆದುಕೊಂಡರೂ ನಿಮ್ಮ ಶಂಕೆ ಸರಿಯಲ್ಲ ಎಂದು ಹೇಳುವುದಕ್ಕಾಗಿ ಆಕಾಶದ್ವಯಪರವಾಗಿಯೂ ಮೂಲವನ್ನು ವ್ಯಾಖ್ಯಾನಿಸುತ್ತಾರೆ.

ಹೇಗೆಂದರೆ : ಒಂದುವೇಳೆ 'ಅವ್ಯಾಕೃತ ಆಕಾಶದಲ್ಲಿ ಭೇದವಿಲ್ಲ' ಎಂಬ ಸಿದ್ಧಾಂತವನ್ನು ಅವಲಂಬಿಸುವುದಾದರೆ ಆಗ ಮೂಲದಲ್ಲಿರುವ ಅಂತರಶಬ್ದಕ್ಕೆ

(ದೇಶಾಂತರಸ್ಯ ಎನ್ನುವಲ್ಲಿನ ಅಂತರಶಬ್ದಕ್ಕೆ) ವಿಶೇಷ ಎಂದು ಅರ್ಥ. (ದೇಶಾಂತರ ಎಂದರೆ ದೇಶವಿಶೇಷ ಎಂದು ಅರ್ಥ.) ಹಾಗಾಗಿ ಘಟ-ಮಠಾದಿ ಉಪಾಧಿಯು ಅವ್ಯಾಕೃತ ಆಕಾಶದಲ್ಲಿಯೂ ಸಹ ವಿದ್ಯಮಾನವಾದ (ಮೊದಲೇ ಇರುವ) ದೇಶಾಂತರಕ್ಕೆ =ದೇಶವಿಶೇಷಕ್ಕೆ ಜ್ಞಾಪಕವಾಗುತ್ತದೆಯೇ ಹೊರತು ಭೇದಕ್ಕೆ ಕಾರಕವಾಗುವುದಿಲ್ಲವಾದ್ದರಿಂದ ಈ ಅವ್ಯಾಕೃತ ಆಕಾಶವೂ ದೃಷ್ಟಾಂತವಾಗುವುದಿಲ್ಲ ಎಂದು ಮೂಲದ ಅರ್ಥ.

ಇನ್ನು 'ಭೂತಾಕಾಶದಲ್ಲಿ ಭೇದವಿದೆ' ಎಂಬ ಸಿದ್ಧಾಂತವನ್ನು ಅವಲಂಬಿಸುವುದಾದರೆ (ಘಟಾವಚ್ಛಿನ್ನ ಆಕಾಶಕ್ಕೆ ಮಠಾವಚ್ಛಿನ್ನ ಆಕಾಶದಿಂದ ಭೇದವನ್ನು ಒಪ್ಪುವುದಾದರೆ) ಆಗಲೂ ಸಹ ಭೂತಾಕಾಶದಲ್ಲಿಯೂ ಕೂಡ ಘಟ-ಮಠಾದಿ ಉಪಾಧಿಯು ವಿದ್ಯಮಾನವಾದ (ಮೊದಲೇ ಇದ್ದಂತಹ) ದೇಶಾಂತರಕ್ಕೆ = ದೇಶಭೇದಕ್ಕೆ ಜ್ಞಾಪಕವಾಗುತ್ತದೆಯೇ ಹೊರತು ದೇಶಭೇದಕಾರಕವಾಗುವುದಿಲ್ಲ ಎಂದು ಮೂಲವನ್ನು ಯೋಜಿಸಿಕೊಳ್ಳಬೇಕು.

**ಅವತಾರಿಕೆ :-** ''ಉಪಾಧಿಯು ಭೇದಕ್ಕೆ ಜ್ಞಾಪಕ'' ಎಂಬ ನಮ್ಮ ಅಭಿಪ್ರಾಯದ ಮೇಲೆ ಶಂಕೆ ಮಾಡುತ್ತಾರೆ -

**ಟೀಕಾ :- ನನು ಭೇದೋ ನಾಮ [101]ವಸ್ತುಸ್ವರೂಪಮೇವ । [102]ಸ [103]ತದ್ದರ್ಶನೇನೈವ ದೃಶ್ಯಃ । ನ ಚೋಪಾಧೇಃ [104]ಸ್ವರೂಪದರ್ಶನೇ ಉಪಯೋಗೋಽಸ್ತಿ । ತತ್ಕಥಮುಚ್ಯತೇ ಉಪಾಧಿರ್ಭೇದಸ್ಯ ಜ್ಞಾಪಕ ಇತಿ ? ತತ್ರಾಹ -**

---

101 ಭೇದೋ ನಾಮ ಅನ್ಯೋನ್ಯಾಭಾವಃ । ಸ ಚ ಭವನ್ಮತೇ ವಸ್ತುಸ್ವರೂಪಮೇವ । ಯಥೋಕ್ತಂ 'ಭಾವಾಭಾವಸ್ವರೂಪತ್ವಾತ್ ನಾನ್ಯೋನ್ಯಾಭಾವತಾ ಪೃಥಕ್ ।' ಇತಿ ।

102 ಸ ಭೇದಃ ।

103 ತದ್ದರ್ಶನೇನೈವ ವಸ್ತುದರ್ಶನೇನೈವ ।

104 ವಸ್ತುಸ್ವರೂಪದರ್ಶನೇ ಇತ್ಯರ್ಥಃ ।

105 ಅನೇನ ಮೂಢಬುದ್ಧಿವ್ಯಪೇಕ್ಷಯಾ ಖೇಽಪಿ ದೇಶಾಂತರಸ್ಯ ಭೇದಸ್ಯ ಸ ಉಪಾಧಿಃ ಜ್ಞಾಪಕ ಇತ್ಯನ್ವಯೋ ದ್ರಷ್ಟವ್ಯ ಇತಿ ಸೂಚಿತಂ ಭವತಿ । ಜ್ಞಾನಿನಾಂ ತು ವಸ್ತುಪ್ರತೀತೇರೇವ ಭೇದಪ್ರತೀತಿತ್ವೇನ ನ ತಾನ್ ಪ್ರತಿ ಉಪಾಧಿಃ ಭೇದಜ್ಞಾಪನೋಪಯುಕ್ತ ಇತ್ಯಾಶಯೇನ ಮೂಢಬುದ್ಧಿವ್ಯಪೇಕ್ಷಯಾ ಇತ್ಯುಕ್ತಮಿತಿ ಜ್ಞಾತವ್ಯಮ್ ॥ (ಶ್ರೀನಿ)

(113) **ಮೂಲ :- ........[105]ಮೂಢಬುದ್ಧಿವ್ಯಪೇಕ್ಷಯಾ ।**

**ಅಸ್ತಿ ಭೇದಸ್ಯ ವಸ್ತುಸ್ವರೂಪತ್ವಂ ತಥಾಪಿ ತದ್ವಿಶೇಷ[106] ಇತಿ ಪ್ರತಿಪಾದಿತಮನ್ಯತ್ರ[107] । [108]ತತೋ ವಸ್ತುಪ್ರತೀತಾವಪಿ ಭೇದಾಪ್ರತೀತಿಃ ಅಭೇದಪ್ರತೀತಿಶ್ಚ ಯುಜ್ಯತೇ । ತದಾ[109] ಭೇದಜ್ಞಾಪನೇ ಅಸ್ಯೈವೋಪಾಧೇ-ರುಪಯೋಗ ಇತಿ ।**

**ಅನುವಾದ :-** ಭೇದ ಎಂದರೆ ಅನ್ಯೋನ್ಯಾಭಾವ.

**''ಭಾವಾಭಾವಸ್ವರೂಪತ್ವಾತ್ ನಾನ್ಯೋನ್ಯಾಭಾವತಾ ಪೃಥಕ್ ।''**

**(ತತ್ವವಿವೇಕ)**

ಎಂಬುದಾಗಿ ಹೇಳಿದ ಪ್ರಕಾರ ಆ ಅನ್ಯೋನ್ಯಾಭಾವವು (ಭೇದವು) ವಸ್ತು(ಧರ್ಮಿ)ಸ್ವರೂಪವಾಗಿದೆ ಎಂದು ನಿಮ್ಮ ಮತ. ಅಂದಮೇಲೆ ವಸ್ತುವಿನ ದರ್ಶನದಿಂದಲೇನೇ ಆ ಭೇದವೂ ದೃಶ್ಯ(ಜ್ಞಾಪ್ಯ)ವಾಗಿ ಬಿಡುತ್ತದೆ. ಆದ್ದರಿಂದ ಭೇದದರ್ಶನಕ್ಕಾಗಿ ಉಪಾಧಿಯ ಉಪಯೋಗವಿಲ್ಲ. ಇನ್ನು ಚಕ್ಷುರಾದಿಗಳಿಂದಲೇ ವಸ್ತುಸ್ವರೂಪದರ್ಶನ ಆಗುವುದರಿಂದ ವಸ್ತುಸ್ವರೂಪದರ್ಶನವಿಷಯದಲ್ಲಿಯೂ ಉಪಾಧಿಯ ಉಪಯೋಗ ಇಲ್ಲ. ಆದ್ದರಿಂದ ''ಉಪಾಧಿಯು ಭೇದಕ್ಕೆ ಜ್ಞಾಪಕ '' ಎಂದು ಹೇಗೆ ಹೇಳುತ್ತೀರಿ ?

ಈ ಶಂಕೆಗೆ ಆಚಾರ್ಯರು ಸಮಾಧಾನ ಹೇಳುತ್ತಾರೆ -

**ಮೂಲ :- ..... ಮೂಢಬುದ್ಧಿವ್ಯಪೇಕ್ಷಯಾ ।**

**ಮೂಲಾರ್ಥ:- ಕೆಲವೊಮ್ಮೆ ಮೂಢರಿಗೆ ಧರ್ಮಿ ತೋರಿದರೂ ಭೇದ ತೋರದ ಕಾರಣ, ಅವರನ್ನು ಕುರಿತು (ಮೂಢರ ಬುದ್ಧಿಯನ್ನು ಅಪೇಕ್ಷಿಸಿ) ಉಪಾಧಿಯು**

---

106 ಧರ್ಮಿಣಾ ನ ನಿರ್ವಿಶೇಷಾತ್ಯಂತಾಭಿನ್ನಃ । ಕಿಂತು ಸವಿಶೇಷಾತ್ಯಂತಾಭಿನ್ನಃ ಇತ್ಯರ್ಥಃ । (ಶ್ರೀನಿ)

107 ವಿಷ್ಣುತತ್ತ್ವನಿರ್ಣಯಟೀಕಾದೌ ಇತ್ಯರ್ಥಃ ।

108 ಧರ್ಮಿಣಾ ಸವಿಶೇಷಾಭೇದಾಂಗೀಕಾರಾತ್ ವಿಶೇಷಸ್ಯ ಚ ಭೇದಕಾರ್ಯಕಾರಿತ್ವಾತ್ ಇತ್ಯರ್ಥಃ । (ಶ್ರೀನಿ)

109 ಮೂಢಾನಾಂ ವಸ್ತುಪ್ರತೀತಾವಪಿ ಯದಾ ಭೇದೋ ನ ಪ್ರತೀಯತೇ ತದಾ ಇತ್ಯರ್ಥಃ।। (ಶ್ರೀನಿ)

(ದೇಶಾಂತರಸ್ಯ ಎನ್ನುವಲ್ಲಿನ ಅಂತರಶಬ್ದಕ್ಕೆ) ವಿಶೇಷ ಎಂದು ಅರ್ಥ. (ದೇಶಾಂತರ ಎಂದರೆ ದೇಶವಿಶೇಷ ಎಂದು ಅರ್ಥ.) ಹಾಗಾಗಿ ಘಟ-ಮಠಾದಿ ಉಪಾಧಿಯು ಅವ್ಯಾಕೃತ ಆಕಾಶದಲ್ಲಿಯೂ ಸಹ ವಿದ್ಯಮಾನವಾದ (ಮೊದಲೇ ಇರುವ) ದೇಶಾಂತರಕ್ಕೆ =ದೇಶವಿಶೇಷಕ್ಕೆ ಜ್ಞಾಪಕವಾಗುತ್ತದೆಯೇ ಹೊರತು ಭೇದಕ್ಕೆ ಕಾರಕವಾಗುವುದಿಲ್ಲವಾದ್ದರಿಂದ ಈ ಅವ್ಯಾಕೃತ ಆಕಾಶವೂ ದೃಷ್ಟಾಂತವಾಗುವುದಿಲ್ಲ ಎಂದು ಮೂಲದ ಅರ್ಥ.

ಇನ್ನು 'ಭೂತಾಕಾಶದಲ್ಲಿ ಭೇದವಿದೆ' ಎಂಬ ಸಿದ್ಧಾಂತವನ್ನು ಅವಲಂಬಿಸುವುದಾದರೆ (ಘಟಾವಚ್ಛಿನ್ನ ಆಕಾಶಕ್ಕೆ ಮಠಾವಚ್ಛಿನ್ನ ಆಕಾಶದಿಂದ ಭೇದವನ್ನು ಒಪ್ಪುವುದಾದರೆ) ಆಗಲೂ ಸಹ ಭೂತಾಕಾಶದಲ್ಲಿಯೂ ಕೂಡ ಘಟ-ಮಠಾದಿ ಉಪಾಧಿಯು ವಿದ್ಯಮಾನವಾದ (ಮೊದಲೇ ಇದ್ದಂತಹ) ದೇಶಾಂತರಕ್ಕೆ = ದೇಶಭೇದಕ್ಕೆ ಜ್ಞಾಪಕವಾಗುತ್ತದೆಯೇ ಹೊರತು ದೇಶಭೇದಕಾರಕವಾಗುವುದಿಲ್ಲ ಎಂದು ಮೂಲವನ್ನು ಯೋಜಿಸಿಕೊಳ್ಳಬೇಕು.

**ಅವತಾರಿಕೆ :-** ''ಉಪಾಧಿಯು ಭೇದಕ್ಕೆ ಜ್ಞಾಪಕ'' ಎಂಬ ನಮ್ಮ ಅಭಿಪ್ರಾಯದ ಮೇಲೆ ಶಂಕೆ ಮಾಡುತ್ತಾರೆ -

**ಟೀಕಾ :- ನನು ಭೇದೋ ನಾಮ [101]ವಸ್ತುಸ್ವರೂಪಮೇವ । [102]ಸ [103]ತದ್ದರ್ಶನೇನೈವ ದೃಶ್ಯಃ । ನ ಚೋಪಾಧೇಃ [104]ಸ್ವರೂಪದರ್ಶನೇ ಉಪಯೋಗೋಽಸ್ತಿ । ತತ್ಕಥಮುಚ್ಯತೇ ಉಪಾಧಿರ್ಭೇದಸ್ಯ ಜ್ಞಾಪಕ ಇತಿ ? ತತ್ರಾಹ -**

101 ಭೇದೋ ನಾಮ ಅನ್ಯೋನ್ಯಾಭಾವಃ । ಸ ಚ ಭವನ್ಮತೇ ವಸ್ತುಸ್ವರೂಪಮೇವ । ಯಥೋಕ್ತಂ 'ಭಾವಾಭಾವಸ್ವರೂಪತ್ವಾತ್ ನಾನ್ಯೋನ್ಯಾಭಾವತಾ ಪೃಥಕ್ ।' ಇತಿ ।

102 ಸ ಭೇದಃ ।

103 ತದ್ದರ್ಶನೇನೈವ ವಸ್ತುದರ್ಶನೇನೈವ ।

104 ವಸ್ತುಸ್ವರೂಪದರ್ಶನೇ ಇತ್ಯರ್ಥಃ ।

105 ಅನೇನ ಮೂಢಬುದ್ಧಿವ್ಯಪೇಕ್ಷಯಾ ಖೇಽಪಿ ದೇಶಾಂತರಸ್ಯ ಭೇದಸ್ಯ ಸ ಉಪಾಧಿಃ ಜ್ಞಾಪಕ ಇತ್ಯನ್ವಯೋ ದ್ರಷ್ಟವ್ಯ ಇತಿ ಸೂಚಿತಂ ಭವತಿ । ಜ್ಞಾನಿನಾಂ ತು ವಸ್ತುಪ್ರತೀತೇರೇವ ಭೇದಪ್ರತೀತಿತ್ವೇನ ನ ತಾನ್ ಪ್ರತಿ ಉಪಾಧಿಃ ಭೇದಜ್ಞಾಪನೋಪಯುಕ್ತ ಇತ್ಯಾಶಯೇನ ಮೂಢಬುದ್ಧಿವ್ಯಪೇಕ್ಷಯಾ ಇತ್ಯುಕ್ತಮಿತಿ ಜ್ಞಾತವ್ಯಮ್ ॥ (ಶ್ರೀನಿ)

**ಮೂಲ :- ........[105]ಮೂಢಬುದ್ಧಿವ್ಯಪೇಕ್ಷಯಾ ।**

**ಅಸ್ತಿ ಭೇದಸ್ಯ ವಸ್ತುಸ್ವರೂಪತ್ವಂ ತಥಾಪಿ ತದ್ವಿಶೇಷ[106] ಇತಿ ಪ್ರತಿಪಾದಿತಮನ್ಯತ್ರ[107] । [108]ತತೋ ವಸ್ತುಪ್ರತೀತಾವಪಿ ಭೇದಾಪ್ರತೀತಿಃ ಅಭೇದಪ್ರತೀತಿಶ್ಚ ಯುಜ್ಯತೇ । ತದಾ[109] ಭೇದಜ್ಞಾಪನೇ ಅಸ್ಯೈವೋಪಾಧೇ-ರುಪಯೋಗ ಇತಿ ।**

**ಅನುವಾದ :-** ಭೇದ ಎಂದರೆ ಅನ್ಯೋನ್ಯಾಭಾವ.

**''ಭಾವಾಭಾವಸ್ವರೂಪತ್ವಾತ್ ನಾನ್ಯೋನ್ಯಾಭಾವತಾ ಪೃಥಕ್ ।''**

**(ತತ್ವವಿವೇಕ)**

ಎಂಬುದಾಗಿ ಹೇಳಿದ ಪ್ರಕಾರ ಆ ಅನ್ಯೋನ್ಯಾಭಾವವು (ಭೇದವು) ವಸ್ತು(ಧರ್ಮಿ)ಸ್ವರೂಪವಾಗಿದೆ ಎಂದು ನಿಮ್ಮ ಮತ. ಅಂದಮೇಲೆ ವಸ್ತುವಿನ ದರ್ಶನದಿಂದಲೇನೇ ಆ ಭೇದವೂ ದೃಶ್ಯ(ಜ್ಞಾಪ್ಯ)ವಾಗಿ ಬಿಡುತ್ತದೆ. ಆದ್ದರಿಂದ ಭೇದದರ್ಶನಕ್ಕಾಗಿ ಉಪಾಧಿಯ ಉಪಯೋಗವಿಲ್ಲ. ಇನ್ನು ಚಕ್ಷುರಾದಿಗಳಿಂದಲೇ ವಸ್ತುಸ್ವರೂಪದರ್ಶನ ಆಗುವುದರಿಂದ ವಸ್ತುಸ್ವರೂಪದರ್ಶನವಿಷಯದಲ್ಲಿಯೂ ಉಪಾಧಿಯ ಉಪಯೋಗ ಇಲ್ಲ. ಆದ್ದರಿಂದ ''ಉಪಾಧಿಯು ಭೇದಕ್ಕೆ ಜ್ಞಾಪಕ '' ಎಂದು ಹೇಗೆ ಹೇಳುತ್ತೀರಿ ?

ಈ ಶಂಕೆಗೆ ಆಚಾರ್ಯರು ಸಮಾಧಾನ ಹೇಳುತ್ತಾರೆ -

**ಮೂಲ :- ..... ಮೂಢಬುದ್ಧಿವ್ಯಪೇಕ್ಷಯಾ ।**

**ಮೂಲಾರ್ಥ:- ಕೆಲವೊಮ್ಮೆ ಮೂಢರಿಗೆ ಧರ್ಮಿ ತೋರಿದರೂ ಭೇದ ತೋರದ ಕಾರಣ, ಅವರನ್ನು ಕುರಿತು (ಮೂಢರ ಬುದ್ಧಿಯನ್ನು ಅಪೇಕ್ಷಿಸಿ) ಉಪಾಧಿಯು**

---

106 ಧರ್ಮಿಣಾ ನ ನಿರ್ವಿಶೇಷಾತ್ಯಂತಾಭಿನ್ನಃ । ಕಿಂತು ಸವಿಶೇಷಾತ್ಯಂತಾಭಿನ್ನಃ ಇತ್ಯರ್ಥಃ । (ಶ್ರೀನಿ)

107 ವಿಷ್ಣುತತ್ತ್ವನಿರ್ಣಯಟೀಕಾದೌ ಇತ್ಯರ್ಥಃ ।

108 ಧರ್ಮಿಣಾ ಸವಿಶೇಷಾಭೇದಾಂಗೀಕಾರಾತ್ ವಿಶೇಷಸ್ಯ ಚ ಭೇದಕಾರ್ಯಕಾರಿತ್ವಾತ್ ಇತ್ಯರ್ಥಃ । (ಶ್ರೀನಿ)

109 ಮೂಢಾನಾಂ ವಸ್ತುಪ್ರತೀತಾವಪಿ ಯದಾ ಭೇದೋ ನ ಪ್ರತೀಯತೇ ತದಾ ಇತ್ಯರ್ಥಃ॥ (ಶ್ರೀನಿ)

**ಆಕಾಶದಲ್ಲಿ ದೇಶಭೇದಕ್ಕೆ ಜ್ಞಾಪಕವಾಗುತ್ತದೆ. ಜ್ಞಾನಿಗಳಿಗೆ ವಸ್ತುಪ್ರತೀತಿಯೇ ಭೇದಪ್ರತೀತಿಯಾದ್ದರಿಂದ ಅವರನ್ನು ಕುರಿತು ಉಪಾಧಿಯು ಭೇದಜ್ಞಾಪನಕ್ಕಾಗಿ ಉಪಯುಕ್ತವಾಗುವುದಿಲ್ಲ ಎಂದು ಅಭಿಪ್ರಾಯ.**

ನಿಜವೇ. ಭೇದವು ವಸ್ತುಸ್ವರೂಪವಾಗಿದೆ ಎನ್ನುವುದು ಸರಿಯೇ. ಆದರೂ ಭೇದವು ಧರ್ಮಿಯಿಂದ ನಿರ್ವಿಶೇಷಾಭಿನ್ನವಾಗಿಲ್ಲ. ಕಿಂತು ಸವಿಶೇಷಾಭಿನ್ನವಾಗಿದೆ (ಧರ್ಮಿಯ ವಿಶೇಷವಾಗಿದೆ). ಹೀಗೆ ಭೇದಕ್ಕೆ ಧರ್ಮಿಯಿಂದ ಸವಿಶೇಷಾಭೇದವನ್ನು ಅಂಗೀಕರಿಸಿದ್ದರಿಂದ, ಮತ್ತು ಭೇದಪ್ರತಿನಿಧಿಯಾದ ವಿಶೇಷವು ಭೇದಕಾರ್ಯಕಾರಿಯಾದ್ದರಿಂದ, ವಸ್ತು ತೋರಿದಾಗಲೂ ಕೆಲವೊಮ್ಮೆ ಭೇದ ತೋರದೇ ಇರುವುದು ಹಾಗೂ ಕೆಲವೊಮ್ಮೆ ವಸ್ತು ತೋರಿದಾಗಲೇ ಭೇದ ತೋರುವುದೂ ಉಪಪನ್ನವಾಗುತ್ತದೆ.

ಯಾವಾಗ ಮೂಢರಿಗೆ ವಸ್ತು ತೋರಿದಾಗಲೂ ಭೇದವು ತೋರುವುದಿಲ್ಲವೋ ಆಗ ಭೇದವನ್ನು ತಿಳಿಸುವುದಕ್ಕಾಗಿ ಉಪಾಧಿಯ ಉಪಯೋಗ ಇದ್ದೇ ಇದೆ. ಆದ್ದರಿಂದ 'ಉಪಾಧಿಯು ಭೇದಕ್ಕೆ ಜ್ಞಾಪಕ' ಎಂದು ಹೇಳಿದ್ದು ಸಮಂಜಸವೇ ಆಗಿದೆ ಎಂದು ಅಭಿಪ್ರಾಯ.

**ವಿವರಣೆ :-** ಭೇದವು ಧರ್ಮಿಸ್ವರೂಪವಾಗಿದೆ (ಧರ್ಮಿಯಿಂದ ಅಭಿನ್ನವಾಗಿದೆ) ಎನ್ನುವುದು ನಿಮ್ಮ ಮತ. ಅಂದಮೇಲೆ ಧರ್ಮಿಯು ತೋರಿದಾಗಲೇ ಭೇದವು ತೋರಿಬಿಡುತ್ತದೆ. ಹಾಗಾಗಿ ಭೇದ ತೋರುವುದಕ್ಕೆ ಪ್ರತ್ಯೇಕವಾಗಿ ಉಪಾಧಿಯ ಉಪಯೋಗ ಏನಿದೆ ? ಎಂದು ಆಕ್ಷೇಪ.

ಅದಕ್ಕೆ ಸಮಾಧಾನ ಇಷ್ಟು : ಭೇದವು ಧರ್ಮಿಯಿಂದ ಅಭಿನ್ನವಾಗಿದೆ ಎನ್ನುವುದು ಸರಿಯೇ, ಆದರೆ ಭೇದವು ಧರ್ಮಿಯಿಂದ ನಿರ್ವಿಶೇಷಾಭಿನ್ನವಾಗಿಲ್ಲ. ಕಿಂತು ಸವಿಶೇಷಾಭಿನ್ನವಾಗಿದೆ. ಅಂದರೆ ಧರ್ಮಿ-ಭೇದ ಇವುಗಳಲ್ಲಿ ಅಭೇದದ ಜೊತೆಗೆ ಭೇದಕಾರ್ಯಕಾರಿಯಾದ (ಭೇದಪ್ರತಿನಿಧಿಯಾದ) ವಿಶೇಷವೂ ಇದೆ. ಆ ವಿಶೇಷವು ಭೇದಕಾರ್ಯಕಾರಿಯಾಗಿರುವುದರಿಂದ (ಭೇದವು ಮಾಡುವ ಕೆಲಸಗಳನ್ನು ಭೇದಪ್ರತಿನಿಧಿಯಾಗಿ ಈ ವಿಶೇಷವು ಮಾಡುವುದರಿಂದ) ಭೇದವಿದ್ದಿದ್ದರೆ ಏನೇನು ಕೆಲಸಗಳು ಆಗಬೇಕಿತ್ತೋ (ಧರ್ಮಿ ತೋರಿದರೂ ಭೇದ ತೋರದಿರುವುದು, ಮೊದಲಾದವುಗಳು) ಆ ಕೆಲಸಗಳನ್ನು ಭೇದಪ್ರತಿನಿಧಿಯಾಗಿ ಈ ವಿಶೇಷವೇ ನಿರ್ವಹಿಸುತ್ತದೆ. ಆದ್ದರಿಂದ ಕೆಲವೊಮ್ಮೆ ಧರ್ಮಿ ತೋರಿದರೂ ಭೇದ ತೋರುವುದಿಲ್ಲ.

ಆದರೆ ಜ್ಞಾನಿಗಳಿಗೆ ವಸ್ತುಪ್ರತೀತಿಯೇ ಭೇದಪ್ರತೀತಿಯಾದ್ದರಿಂದ ಅವರನ್ನು ಕುರಿತು ಭೇದಜ್ಞಾಪನಕ್ಕಾಗಿ ಉಪಾಧಿಯು ಉಪಯುಕ್ತವಾಗುವುದಿಲ್ಲವಾದರೂ, ಕೆಲವೊಮ್ಮೆ ಮೂಢರಿಗೆ ಧರ್ಮಿ ತೋರಿದರೂ ಭೇದ ತೋರದಿದ್ದಾಗ ಆ ಸಂದರ್ಭದಲ್ಲಿ ಭೇದಜ್ಞಾಪನಕ್ಕಾಗಿ ಉಪಾಧಿಯ ಉಪಯೋಗವಿದೆ ಎಂದು ಅಭಿಪ್ರಾಯ.

**ಟೀಕಾ :-ನನ್ವಾಕಾಶೇ ವಿದ್ಯಮಾನಸ್ಯೈವ ಭೇದಸ್ಯೋಪಾಧಿರ್ಜ್ಞಾಪಕ ಇತಿ ಕಸ್ಮಾತ್ ಅಂಗೀಕಾರ್ಯಂ ? ಅವಿದ್ಯಮಾನಸ್ಯೋತ್ಪಾದಕ ಏವ ಕಸ್ಮಾನ್ನಾಂಗೀಕ್ರಿಯತೇ? ಇತಿ । ತತ್ರಾಹ -**

**ಮೂಲ :- ನ ಚೇದುಪಾಧಿಸಂಬಂಧ ಏಕದೇಶೇಽಥ ಸರ್ವಗಃ ॥**

**ಯದ್ಯುಪಾಧಿರ್ವಿದ್ಯಮಾನಸ್ಯೈವ ಭೇದಸ್ಯ ಜ್ಞಾಪಕ ಇತಿ ನೇಷ್ಯತೇ । ಕಿಂತು ? ಅವಿದ್ಯಮಾನಸ್ಯೈವ ಕಾರಕ ಇತ್ಯಂಗೀಕ್ರಿಯತೇ । ತದ್ಯೈವಂ ವಕ್ತವ್ಯಂ, ಕಿಂ ಘಟಾದ್ಯುಪಾಧಿರಾಕಾಶಸಂಬಂಧೀ ತದ್ಭೇದಂ ಕರೋತಿ ಉತಾಸಂಬಂದ್ಧಃ । ದ್ವಿತೀಯೇಽತಿಪ್ರಸಂಗಃ । ಆದ್ಯೇಽಪಿ ವಾಚ್ಯಂ, ಸ ಉಪಾಧಿಸಂಬಂಧ ಆಕಾಶಸ್ಯೈಕದೇಶೇ ವರ್ತತೇ ಉತ ಸರ್ವಾಕಾಶ ಇತಿ ।**

**ಅನುವಾದ :-** ಉಪಾಧಿಯು ಆಕಾಶದಲ್ಲಿ ವಿದ್ಯಮಾನವಾದ (ಮೊದಲೇ ಇದ್ದಂತಹ) ಭೇದಕ್ಕೆ ಜ್ಞಾಪಕವಾಗುತ್ತದೆ ಎಂದು ಏಕೆ ಅಂಗೀಕರಿಸಬೇಕು ? ಆಕಾಶದಲ್ಲಿ ಅವಿದ್ಯಮಾನವಾದ (ಮೊದಲು ಇಲ್ಲದ, ಹೊಸದಾದ) ಭೇದಕ್ಕೆ ಉತ್ಪಾದಕವಾಗುತ್ತದೆ (ಜನಕವಾಗುತ್ತದೆ) ಎಂದೇ ಏಕೆ ಅಂಗೀಕರಿಸಬಾರದು ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಹೇಳುತ್ತಾರೆ -

**ಮೂಲ :- ನ ಚೇದುಪಾಧಿಸಂಬಂಧ ಏಕದೇಶೇಽಥ ಸರ್ವಗಃ ।**

ಮೂಲಾರ್ಥ :- ಉಪಾಧಿಯು ಭೇದಕ್ಕೆ ಜ್ಞಾಪಕವಲ್ಲ ಕಿಂತು ಕಾರಕ ಎನ್ನುವುದಾದರೆ, ಆ ಉಪಾಧಿಸಂಬಂಧವು ಆಕಾಶದ ಏಕದೇಶದಲ್ಲಿ ಇದೆಯೋ ? ಅಥವಾ ಸರ್ವಾಕಾಶದಲ್ಲಿ ಇದೆಯೋ ?

ಒಂದುವೇಳೆ ಉಪಾಧಿಯು ವಿದ್ಯಮಾನವಾದಂತಹ (ಮೊದಲೇ ಇದ್ದಂತಹ) ಭೇದಕ್ಕೆ ಜ್ಞಾಪಕವಾಗುತ್ತದೆ ಎಂದು ಅಂಗೀಕರಿಸದೇ ಹೋದರೆ, ಕಿಂತು

ಅವಿದ್ಯಮಾನವಾದಂತಹ (ಮೊದಲು ಇಲ್ಲದ, ಹೊಸದಾದ) ಭೇದಕ್ಕೇನೇ ಕಾರಕ(ಉತ್ಪಾದಕ)ವಾಗುತ್ತದೆ ಎಂದು ಅಂಗೀಕರಿಸುವುದಾದರೆ, ಆಗ ಈ ರೀತಿ ವಿಕಲ್ಪಿಸುತ್ತೇವೆ -

ಘಟ-ಮಠಾದಿ ಉಪಾಧಿಯು ಆಕಾಶಸಂಬದ್ಧವಾಗಿ ಭೇದಜನಕವಾಗುತ್ತದೆಯೋ ? ಅಥವಾ ಅಸಂಬದ್ಧವಾಗಿ ಭೇದಜನಕವಾಗುತ್ತದೆಯೋ ?

ಅಸಂಬದ್ಧವಾಗಿ ಭೇದಜನಕವಾಗುತ್ತದೆ ಎನ್ನುವುದಾದರೆ ಅತಿಪ್ರಸಂಗ ಬರುತ್ತದೆ. (ಏನು ಅತಿಪ್ರಸಂಗ ? ಎನ್ನುವುದನ್ನು ಮುಂದೆ ಹೇಳುವವರಿದ್ದಾರೆ.)

ಆದ್ದರಿಂದ ಆಕಾಶಸಂಬದ್ಧವಾಗಿಯೇ ಭೇದಜನಕವಾಗುತ್ತದೆ ಎಂಬ ಮೊದಲನೇ ಪಕ್ಷವನ್ನೇ ಒಪ್ಪಬೇಕು. ಈ ಮೊದಲನೇ ಪಕ್ಷದಲ್ಲಿಯೂ ಸಹ, ಆ ಉಪಾಧಿಸಂಬಂಧವು ಆಕಾಶದ ಏಕದೇಶಲ್ಲಿ ಇದೆ ಎನ್ನುತ್ತೀರೋ ? ಅಥವಾ ಸರ್ವಾಕಾಶದಲ್ಲಿ ಇದೆ ಎನ್ನುತ್ತೀರೋ?

**ಟೀಕಾ :- ಆದ್ಯೇ ದೋಷಮಾಹ -**

**ಮೂಲ :- ಏಕದೇಶೇऽನವಸ್ಥಾ ಸ್ಯಾತ್ ......**

**'ಚೇದುಪಾಧಿಸಂಬಂಧಃ' ಇತಿ ವರ್ತತೇ । ಯದಿ ಘಟಾದ್ಯುಪಾಧಿ ಸಂಬಂಧೋ ಗಗನೈಕದೇಶವರ್ತೀತ್ಯುಚ್ಯತೇ ತದಾ ತಸ್ಯಾಪ್ಯಾಕಾಶೈಕದೇಶಸ್ಯ ಔಪಾಧಿಕತ್ವಂ ವಕ್ತವ್ಯಮ್ । ಸೋऽಪ್ಯುಪಾಧಿರುಪಾಧ್ಯಂತರಕೃತೈಕದೇಶೇ ಸಂಬದ್ಧ್ಯ ಭೇದಕ ಇತ್ಯನವಸ್ಥಾ । ಉಪಾಧ್ಯಂತರಾನಂಗೀಕೃತಾವಾತ್ಮಾಶ್ರಯಃ ಸ್ಯಾತ್ ।**

**ಅನುವಾದ :-** ಉಪಾಧಿಸಂಬಂಧವು ಆಕಾಶದ ಏಕದೇಶದಲ್ಲಿ ಇದೆ ಎಂಬ ಮೊದಲನೇ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ -

**ಮೂಲ :- ಏಕದೇಶೇऽನವಸ್ಥಾ ಸ್ಯಾತ್ ..... ।**

ಮೂಲಾರ್ಥ - ಘಟಾದಿ ಉಪಾಧಿಸಂಬಂಧವು ಆಕಾಶದ ಏಕದೇಶದಲ್ಲಿ ಇದೆ ಎನ್ನುವುದಾದರೆ, ಆ ಆಕಾಶೈಕದೇಶವೂ ಔಪಾಧಿಕವೆಂದೇ ಹೇಳಬೇಕಾದ್ದರಿಂದ ಅನವಸ್ಥಾ ಬರುತ್ತದೆ.

ಹಿಂದಿನ ಮೂಲದಲ್ಲಿರುವ 'ಚೇತ್ ಉಪಾಧಿಸಂಬಂಧಃ' ಎನ್ನುವುದು ಇಲ್ಲಿ ಅನುವೃತ್ತವಾಗುತ್ತದೆ. ಒಂದುವೇಳೆ ಘಟಾದಿ ಉಪಾಧಿಸಂಬಂಧವು ಆಕಾಶದ ಏಕದೇಶದಲ್ಲಿ ಇದೆ ಎನ್ನುವುದಾದರೆ ಆಗ ಆ ಆಕಾಶೈಕದೇಶವೂ ಔಪಾಧಿಕ (ಉಪಾಧಿ ಕೃತ) ಎಂದೇ ಹೇಳಬೇಕು. ಅಂತಹ ಆಕಾಶೈಕದೇಶದಲ್ಲಿ ಭೇದಕವಾದ ಉಪಾಧಿಯೂ ಸಹ ಮತ್ತೊಂದು ಉಪಾಧಿಯಿಂದ ಕೃತವಾದ ಮತ್ತೊಂದು ಆಕಾಶೈಕದೇಶದಲ್ಲಿ ಸಂಬಂಧಿಸಿ ಭೇದಕ(ಭೇದಜನಕ)ವಾಗುವುದರಿಂದ (ಉಪಾಧಿ-ಆಕಾಶೈಕದೇಶಗಳ ಪರಂಪರೆ ಬೆಳೆಯುವುದರಿಂದ) ಅನವಸ್ಥಾ ಬರುತ್ತದೆ.

ಉಪಾಧಿ-ಆಕಾಶೈಕದೇಶಗಳ ಪರಂಪರೆ ಬೆಳೆದು ಬರುವ ಅನವಸ್ಥಾ ಚಿತ್ರಣ.

(ಔಪಾಧಿಕ) ಆಕಾಶ ಏಕದೇಶ (3)
|
ಉಪಾಧಿ (3)
|
(ಔಪಾಧಿಕ) ಆಕಾಶ ಏಕದೇಶ (2)
|
ಉಪಾಧಿ (2)
|
(ಔಪಾಧಿಕ) ಆಕಾಶ ಏಕದೇಶ (1)
|
ಘಟಾದಿ ಉಪಾಧಿ (1)

''ಘಟಾದಿ ಉಪಾಧಿಯು ಆಕಾಶೈಕದೇಶದಲ್ಲಿ ಸಂಬಂಧಿಸಿ ಭೇದಕವಾಗುತ್ತದೆ ಎಂದೇ ಹೇಳುತ್ತೇವೆ. ಆ ಆಕಾಶೈಕದೇಶವೂ ಔಪಾಧಿಕ (ಉಪಾಧಿಕೃತ) ಎಂದೇ ಹೇಳುತ್ತೇವೆ. ಆದರೆ ಆ ಆಕಾಶೈಕದೇಶವು ಮತ್ತೊಂದು (2ನೇ) ಬೇರೆ ಉಪಾಧಿಯಿಂದ ಕೃತ ಎಂದು ಹೇಳುವುದಿಲ್ಲ. ಕಿಂತು ಮೊದಲನೇ ಘಟಾದಿ ಉಪಾಧಿಯಿಂದಲೇ ಕೃತ ಎಂದು ಹೇಳುತ್ತೇವೆ. ಅಂದರೆ ಘಟಾದಿ ಉಪಾಧಿಯು ಸ್ವಕೃತವಾದ ಆಕಾಶೈಕದೇಶವನ್ನು ಸಂಬಂಧಿಸಿಯೇ ಭೇದಕವಾಗುತ್ತದೆ ಎನ್ನುತ್ತೇವೆ. ಆದ್ದರಿಂದ ಅನೇಕ ಉಪಾಧಿ - ಆಕಾಶೈಕದೇಶಗಳ ಪರಂಪರೆ ಬೆಳೆಯುವುದಿಲ್ಲವಾದ್ದರಿಂದ ಅನವಸ್ಥಾ ಬರುವುದಿಲ್ಲ'' ಎಂಬುದಾಗಿ ಶಂಕಿಸುವುದು ಸರಿಯಲ್ಲ.

ಏಕೆಂದರೆ - ಈ ರೀತಿಯಾಗಿ ಅನವಸ್ಥಾಪರಿಹಾರ ಮಾಡಿಕೊಳ್ಳುವುದಕ್ಕಾಗಿ ಅನೇಕ ಉಪಾಧಿ-ಆಕಾಶೈಕದೇಶಗಳನ್ನು ಒಪ್ಪದೇ, ಒಂದೇ ಉಪಾಧಿ ಒಂದೇ ಆಕಾಶೈಕದೇಶವನ್ನು ಅಂಗೀಕರಿಸುವುದಾದರೆ, (ಉಪಾಧಿಯು ಸ್ವಕೃತವಾದ

ಆಕಾಶೈಕದೇಶವನ್ನು ಸಂಬಂಧಿಸಿ ಭೇದಕವಾಗುತ್ತದೆ ಎಂದು ಹೇಳುವುದಾದರೆ,) ಉಪಾಧಿಯು ಸ್ವಕೃತವಾದ ಆಕಾಶೈಕದೇಶವನ್ನು ಸಂಬಂಧಿಸಬೇಕಾದರೆ ತನಗಿಂತ ತಾನು ಮೊದಲು ಇರಬೇಕಾದ ಪ್ರಸಂಗ ಬರುವುದರಿಂದ ಆತ್ಮಾಶ್ರಯದೋಷ ಬರಬೇಕಾಗುತ್ತದೆ.

ಆತ್ಮಾಶ್ರಯದೋಷದ ಚಿತ್ರಣ




**ಟೀಕಾ :- ದ್ವಿತೀಯಂ ದೂಷಯತಿ -**

**ಮೂಲ :- .....ಸರ್ವಗಶ್ಚೇನ್ನ ಭೇದಕಃ ।**

**ಯದ್ಯುಪಾಧಿಸಂಬಂಧಃ ಸರ್ವಾಕಾಶಗತಃ ಸ್ಯಾತ್ ತದಾಽಸೌ ನಾಕಾಶಭೇದಸ್ಯ ಕಾರಕಃ ಸ್ಯಾತ್ । ಕೃತ್ಸ್ನಸ್ಯೈಕೋಪಾಧಿನೈವ ಗ್ರಸ್ತತ್ವಾತ್ ।**

**ಅನುವಾದ :-** ಘಟಾದಿ ಉಪಾಧಿಸಂಬಂಧವು ಸರ್ವಾಕಾಶದಲ್ಲಿ ಇದೆ ಎಂಬ ಎರಡನೇ ಪಕ್ಷವನ್ನು ನಿರಾಕರಿಸುತ್ತಾರೆ -

**ಮೂಲ :- ..... ಸರ್ವಗಶ್ಚೇನ್ನ ಭೇದಕಃ ।**

ಮೂಲಾರ್ಥ :- ಉಪಾಧಿಸಂಬಂಧವು ಸರ್ವಾಕಾಶದಲ್ಲಿರುವುದಾದರೆ ಆಗ (ಉಪಾಧಿಯಿಂದ ಸರ್ವಾಕಾಶವೂ ಗ್ರಸ್ತವಾದ್ದರಿಂದ) ಉಪಾಧಿಯು ಭೇದಕವಾಗುವುದಿಲ್ಲ.

ಒಂದುವೇಳೆ ಘಟಾದಿಉಪಾಧಿಸಂಬಂಧವು ಸರ್ವಾಕಾಶದಲ್ಲಿ ಇರುವುದಾದರೆ ಆಗ ಸಮಗ್ರವಾದ ಆಕಾಶವೂ ಉಪಾಧಿಯಿಂದ ಗ್ರಸ್ತ(ಸಂಬದ್ಧ)ವೇ ಆಗಿದ್ದರಿಂದ ಉಪಾಧಿಯು ಆಕಾಶಭೇದಕ್ಕೆ ಕಾರಕವಾಗುವುದಿಲ್ಲ.

**ಟೀಕಾ :- ಇದಮುಕ್ತಂ ಭವತಿ । ಅಸಂಬದ್ಧಸ್ಯೋಪಾಧೇರವಚ್ಛೇದಕತ್ವೇ ಕಾಶ್ಮೀರಸ್ಥೇನ ಮಹಾರಜನೇನ ಕೇರಲವರ್ತಿನೋ ವಾಸಸೋಽವಚ್ಛೇದ-ಪ್ರಸಂಗಾತ್ ಸಂಬದ್ಧ ಏವೋಪಾಧಿರ್ಭೇದಕ ಇತಿ ವಕ್ತವ್ಯಮ್ । ಘಟಾಕಾಶ-ಸಂಯೋಗಶ್ಚ ಆಕಾಶೇ ವ್ಯಾಪ್ಯವೃತ್ತಿಶ್ಚೇತ್ ಸರ್ವಾಕಾಶಸ್ಯ ಘಟಾಕಾಶತ್ವಾತ್ ಆಕಾಶಭೇದಹೇತುರ್ನ ಸ್ಯಾದಿತಿ ಪ್ರದೇಶವೃತ್ತಿರಿತ್ಯಂಗೀಕಾರ್ಯಮ್ । ತಸ್ಯ ಚ ಪ್ರದೇಶಸ್ಯೋಪಾಧಿಕೃತತ್ವೇ ಅನವಸ್ಥಾದಿಪ್ರಸಂಗಾತ್ ಸ್ವಾಭಾವಿಕತ್ವಮೇವೈಷ್ಟವ್ಯಮ್ । ತಥಾ ಚ ಪ್ರಾಕ್‌ಸಿದ್ಧಸ್ಯ ಆಕಾಶಭೇದಸ್ಯ ಉಪಾಧಿನಾ ಕರ್ತುಮಶಕ್ಯತ್ವಾತ್ ಉಪಾಧಿರ್ವಿದ್ಯಮಾನಸ್ಯೈವ ಭೇದಸ್ಯ ಜ್ಞಾಪಕೋ ವಿಜ್ಞಾಯತ ಇತಿ ।**

**ಅನುವಾದ :-** ಒಟ್ಟಿನಲ್ಲಿ ಇಷ್ಟು ಹೇಳಿದಂತಾಗುತ್ತದೆ :- ಉಪಾಧಿಯು ಭೇದಕ (ವಿದ್ಯಮಾನಭೇದಕ್ಕೆ ಜ್ಞಾಪಕವಲ್ಲ. ಕಿಂತು ಅವಿದ್ಯಮಾನಭೇದಕ್ಕೆ ಜನಕ) ಎನ್ನುವುದಾದರೆ, ಉಪಾಧಿಯು ಅಸಂಬದ್ಧವಾಗಿಯಾದರೂ ಭೇದಕವಾಗಬೇಕು. ಅಥವಾ ಸಂಬದ್ಧವಾಗಿಯಾದರೂ ಭೇದಕವಾಗಬೇಕು.

ಉಪಾಧಿಯು ಅಸಂಬದ್ಧವಾಗಿ ಭೇದಕವಾಗುವುದಾದರೆ - ಕಾಶ್ಮೀರದಲ್ಲಿರುವ ಮಹಾರಜನರೂಪವಾದ ಉಪಾಧಿಯು ಕೇರಲದಲ್ಲಿರುವ ಬಟ್ಟೆಯಲ್ಲಿ ಭೇದಜನಕವಾಗಬೇಕಾದ ಅತಿಪ್ರಸಂಗ ಬರುತ್ತದೆ.

ಆದ್ದರಿಂದ ಉಪಾಧಿಯು ಸಂಬದ್ಧವಾಗಿಯೇ ಭೇದಕವಾಗುತ್ತದೆ ಎನ್ನಬೇಕು. ಸಂಬದ್ಧವಾಗುವುದಾದರೂ ಘಟ-ಆಕಾಶಗಳ ಸಂಯೋಗವು ಆಕಾಶದಲ್ಲಿ ವ್ಯಾಪ್ಯವೃತ್ತಿಯಾಗುವುದಾದರೆ, (ಘಟರೂಪಉಪಾಧಿಸಂಬಂಧವು ಸರ್ವಾಕಾಶದಲ್ಲಿ ಇರುವುದಾದರೆ) ಆಗ ಸರ್ವಾಕಾಶವೂ ಘಟಾಕಾಶವೇ ಆಗುವುದರಿಂದ ಘಟರೂಪ ಉಪಾಧಿಯು ಆಕಾಶದಲ್ಲಿ ಭೇದಜನಕವಾಗುವುದಿಲ್ಲ.

ಹಾಗಾಗಿ ಘಟ-ಆಕಾಶಗಳ ಸಂಯೋಗವು ಆಕಾಶದಲ್ಲಿ ಪ್ರದೇಶವೃತ್ತಿ (ಘಟರೂಪ ಉಪಾಧಿಸಂಬಂಧವು ಆಕಾಶದ ಏಕದೇಶದಲ್ಲಿ ಇದೆ) ಎಂದೇ ಅಂಗೀಕರಿಸಬೇಕು. ಆ ಪ್ರದೇಶವು (ಆಕಾಶೈಕದೇಶವು) ಉಪಾಧಿಕೃತ ಎಂದರೆ ಅನವಸ್ಥಾದಿದೋಷಗಳು ಬರುವುದರಿಂದ ಆ ಪ್ರದೇಶವು (ಆಕಾಶೈಕದೇಶವು) ಸ್ವಾಭಾವಿಕ ಎಂದೇ ಒಪ್ಪಬೇಕು. ಪ್ರದೇಶವು ಸ್ವಾಭಾವಿಕ ಎಂದರೆ ಆಕಾಶಭೇದ ಮೊದಲೇ ಇದೆ ಎಂದಾಯಿತು. ಅಂತಹ ಮೊದಲೇ ಇದ್ದಂತಹ ಆಕಾಶಭೇದವನ್ನು

ಉಪಾಧಿಯು ಹುಟ್ಟಿಸಲು ಸಾಧ್ಯವಿಲ್ಲವಾದ್ದರಿಂದ, ಉಪಾಧಿಯು ವಿದ್ಯಮಾನವಾದ (ಮೊದಲೇ ಇದ್ದಂತಹ) ಭೇದಕ್ಕೆ ಜ್ಞಾಪಕವೇ ಆಗಿದೆ ಎಂದು ತಿಳಿಯುತ್ತದೆ.

**ಟೀಕಾ :- ಪ್ರದೇಶವೃತ್ತಿತ್ವಂ ನಾಮ ಸ್ವಾತ್ಯಂತಾಭಾವಸಮಾನಾಧಿಕರಣತ್ವಮಿತಿ ಚೇನ್ನ । ತಸ್ಯ ವಿರುದ್ಧತ್ವಾತ್ ।**

**ಅನುವಾದ :-** ಘಟ-ಆಕಾಶಗಳ ಸಂಯೋಗವು ಆಕಾಶದಲ್ಲಿ ಪ್ರದೇಶವೃತ್ತಿಯಾಗಿದೆ ಎಂದು ಹೇಳುವುದು ಸರಿ. ಆದರೆ ಅಲ್ಲಿ ಘಟೋಪಾಧಿ ಸಂಬಂಧವು ಪ್ರದೇಶವೃತ್ತಿಯಾಗಿದೆ ಎಂದರೆ ಅಂಶವೃತ್ತಿಯಾಗಿದೆ ಎಂದು ಅರ್ಥವಲ್ಲ. ಹಾಗೆ ಅಂಶವೃತ್ತಿ ಎಂದು ಅರ್ಥ ಹೇಳಿದ್ದರೆ, ಆಗ ಆ ಅಂಶವು ಉಪಾಧಿ ಕೃತ ಎಂದರೆ ಅನವಸ್ಥಾದೋಷ ಬರುವ ಕಾರಣ ಆ ಪ್ರದೇಶ(ಅಂಶ)ವನ್ನು ಸ್ವಾಭಾವಿಕ ಎಂಬುದಾಗಿ ಒಪ್ಪಬೇಕಾಗುತ್ತಿತ್ತು. ಆದರೆ ಪ್ರಕೃತದಲ್ಲಿ ಪ್ರದೇಶವೃತ್ತಿ ಎನ್ನುವುದಕ್ಕೆ ಅಂಶವೃತ್ತಿ ಎಂದು ಅರ್ಥ ಹೇಳುವುದಿಲ್ಲ. ಕಿಂತು - ಸ್ವಾತ್ಯಂತಾಭಾವಸಮಾನಾಧಿ ಕರಣ (ತಾನು, ತನ್ನ ಅಭಾವ ಎರಡೂ ಒಂದೇ ಅಧಿಕರಣದಲ್ಲಿ ಇರುವುದು) ಎಂದು ಅರ್ಥ ಹೇಳುತ್ತೇವೆ. ಆದ್ದರಿಂದ ಅನವಸ್ಥಾದೋಷವು ಬರುವುದಿಲ್ಲ, ಮತ್ತು ಆ ಪ್ರದೇಶವು ಸ್ವಾಭಾವಿಕವೂ ಆಗಬೇಕಾದದ್ದಿಲ್ಲ ಎಂಬುದಾಗಿ ನೈಯಾಯಿಕರು ಶಂಕಿಸಿದರೆ, ಅದು ಸರಿಯಲ್ಲ.

ಏಕೆಂದರೆ ಘಟವಿದ್ದಲ್ಲಿ ಘಟಾಭಾವ ಇರುವುದಿಲ್ಲ. ಘಟಾಭಾವವಿದ್ದಲ್ಲಿ ಘಟವಿರುವುದಿಲ್ಲ. ಹೀಗೆ ಭಾವ-ಅಭಾವಗಳಿಗೆ ಸಾಮಾನಾಧಿಕರಣ್ಯವು ವಿರುದ್ಧವಾಗಿದೆ. ಆದ್ದರಿಂದ ಸ್ವಾತ್ಯಂತಾಭಾವಸಮಾನಾಧಿಕರಣ (ತಾನು, ತನ್ನ ಅಭಾವ ಎರಡೂ ಒಂದೇ ಅಧಿಕರಣದಲ್ಲಿ ಇರುವುದು) ಎನ್ನುವುದು ವಿರುದ್ಧವಾದ್ದರಿಂದ ಸಮಂಜಸವಲ್ಲ.

**ಟೀಕಾ :- ಪ್ರತೀತತ್ವಾದವಿರೋಧ ಇತಿ ಚೇನ್ನ । ಆಕಾಶಭೇದವಾದಿನಂ ಪ್ರತಿ ಪ್ರತೀತ್ಯಸಿದ್ಧೇರಿತಿ ।**

**ಅನುವಾದ :-** ಒಂದೇ ಆಕಾಶದಲ್ಲಿಯೇ 'ಇಹ ಪಕ್ಷೀ' (ಈ ಪ್ರದೇಶದಲ್ಲಿ ಪಕ್ಷಿ ಇದೆ) 'ನೇಹ ಪಕ್ಷೀ' (ಈ ಪ್ರದೇಶದಲ್ಲಿ ಪಕ್ಷಿ ಇಲ್ಲ) ಎಂಬುದಾಗಿ ಪಕ್ಷಿಯ ಸಂಯೋಗ-ತದಭಾವಗಳು ಪ್ರತೀತವಾಗುವುದರಿಂದ ಸ್ವಾತ್ಯಂತಾಭಾವಸಾಮಾನಾಧಿ ಕರಣ್ಯವು ವಿರುದ್ಧವಲ್ಲ (ಭಾವ-ಅಭಾವಗಳಲ್ಲಿ ಯಾವುದೇ ವಿರೋಧವಿಲ್ಲ) ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ : ಭೂತಾಕಾಶದ ಅಂಶಗಳಲ್ಲಿ ಪರಸ್ಪರಭೇದವಿದೆ (ಪಕ್ಷಿಗೆ ಅಧಿಕರಣವಾದ ಅಂಶವೇ ಬೇರೆ, ಪಕ್ಷಿಯ ಅಭಾವಕ್ಕೆ ಅಧಿಕರಣವಾದ ಅಂಶವೇ ಬೇರೆ) ಎಂದು ಹೇಳುವ ನಮಗೆ ಸಾಮಾನಾಧಿಕರಣ್ಯಪ್ರತೀತಿಯೇ ಅಸಿದ್ಧವಾಗಿದೆ. ಅಂಶಭೇದದಿಂದ ವಿರುದ್ಧ ಅಧಿಕರಣಗಳಲ್ಲಿಯೇ ಸಂಯೋಗ-ತದಭಾವಪ್ರತೀತಿಗಳು ನಿರ್ವಾಹವಾಗುವುದರಿಂದ 'ಇಹ ಪಕ್ಷೀ' 'ನೇಹ ಪಕ್ಷೀ' ಎಂಬ ಪ್ರತೀತಿಗಳು ಸಾಮಾನಾಧಿಕರಣ್ಯಜ್ಞಾಪಕವಾಗಿಲ್ಲ ಎಂದು ಅಭಿಪ್ರಾಯ.

ಆದ್ದರಿಂದ ಪ್ರದೇಶವೃತ್ತಿ ಎಂದರೆ ಸ್ವಾತ್ಯಂತಾಭಾವಸಮಾನಾಧಿಕರಣ ಎಂದು ಹೇಳುವುದು ವಿರುದ್ಧವಾಗುವುದರಿಂದ ನೈಯಾಯಿಕರ ಈ ಅಭಿಪ್ರಾಯವೂ ಸರಿಯಲ್ಲ.

ಅಂದಮೇಲೆ ಪ್ರದೇಶವೃತ್ತಿ ಎಂದರೆ ಅಂಶವೃತ್ತಿ ಎಂದೇ ಹೇಳಬೇಕು. ಅಂಶವೃತ್ತಿ ಎಂದಾಗ ಆ ಅಂಶವು ಉಪಾಧಿಕೃತ ಎಂದರೆ ಅನವಸ್ಥಾದೋಷ ಬರುವ ಕಾರಣ ಸ್ವಾಭಾವಿಕ ಎಂದೇ ಹೇಳಬೇಕು. ಹಾಗಾದರೆ ಉಪಾಧಿಯು ವಿದ್ಯಮಾನವಾದ ಭೇದಕ್ಕೇ ಜ್ಞಾಪಕವಾಗುತ್ತದೆ. ಹೊರತು ಅವಿದ್ಯಮಾನಭೇದಕ್ಕೆ ಕಾರಕವಾಗುವುದಿಲ್ಲ.

**ಟೀಕಾ :- ಸತ್ಯೋಪಾಧಿಕೃತಸತ್ಯಭೇದವಾದೇ ದೋಷಾಂತರಂ ಚಾಹ -**

**ಮೂಲ :- ಸುಖದುಃಖಾದಿಭೋಗಶ್ಚ ಸ್ವರೂಪೈಕ್ಯೇ ನ ಭೇದತಃ ।**
**ದೃಶ್ಯೋ ಹಿ .... ।**

**ಹಿಶಬ್ದೋ ವ್ಯಾಪ್ತಿಸೂಚನಾರ್ಥಃ । ಭವತು ವಾ ಆಕಾಶಾದಿಭೇದಃ ಕಥಂಚಿತ್ ಔಪಾಧಿಕಃ । ಜೀವಬ್ರಹ್ಮಣೋಃ ಜೀವಾನಾಂ ಚ ಭೇದಸ್ತು ಸ್ವಾಭಾವಿಕ ಏವಾಂಗೀಕಾರ್ಯಃ । ಸ್ವರೂಪೈಕ್ಯೇ ಸ್ವಾಭಾವಿಕೈಕ್ಯೇ ಸುಖದುಃಖಾದಿಭೋಗಸ್ಯ ಭೇದೇನ ದರ್ಶನಂ ನ ಸ್ಯಾತ್ ಸಂಪ್ರತಿಪನ್ನೈಕಾತ್ಮವತ್ ॥**

**ಅನುವಾದ :-** ಭೇದವು (ಆಕಾಶಾದಿಭೇದವು) ಔಪಾಧಿಕ ಹಾಗೂ ಸತ್ಯ (ಉಪಾಧಿಯೂ ಸತ್ಯ, ಉಪಾಧಿಕೃತವಾದ ಭೇದವೂ ಸತ್ಯ) ಎಂಬುದಾಗಿ ಕೆಲವರು ಅಂಗೀಕರಿಸಿದರು. ಅವರಿಗೆ ಅನವಸ್ಥಾ ಮೊದಲಾದ ದೋಷಗಳನ್ನು ಹೇಳಿ, ಪ್ರಕೃತ ಅಂತಹ ಸತ್ಯೋಪಾಧಿಕೃತಸತ್ಯಭೇದವಾದಿಗಳಿಗೇನೇ ಮತ್ತೊಂದು ದೋಷವನ್ನು ಹೇಳುತ್ತಾರೆ -

**ಮೂಲ :- ಸುಖದುಃಖಾದಿಭೋಗಶ್ಚ ಸ್ವರೂಪೈಕ್ಯೇ ನ ಭೇದತಃ ।**
**ದೃಶ್ಯೋ ಹಿ.....**

ಮೂಲಾರ್ಥ :- ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವಾಭಾವಿಕೈಕ್ಯವೇ ಇರುವುದಾದರೆ ಭಿನ್ನ-ಭಿನ್ನವಾಗಿ ಆಗುವ ಸುಖ-ದುಃಖಾದಿಗಳ ಅನುಭವಗಳು ಕೂಡದೇಹೋಗಬೇಕಾಗುತ್ತದೆ.

ಮೂಲದಲ್ಲಿ 'ಹಿ'ಶಬ್ದವನ್ನು ತರ್ಕ-ಅನುಮಾನಗಳಲ್ಲಿ ವ್ಯಾಪ್ತಿಸೂಚನೆ ಮಾಡುವುದಕ್ಕಾಗಿ ಇಟ್ಟಿದ್ದಾರೆ. ಇದರ ವಿವರಣೆಯನ್ನು ಮುಂದೆ ಮಾಡುವವರಿದ್ದಾರೆ.

ಒಂದುಪಕ್ಷ ಆಕಾಶಾದಿಭೇದವು ಕಥಂಚಿತ್ ಔಪಾಧಿಕವಾದರೂ ಆಗಬಹುದೇನೋ ('ನ ಚೇತ್ ಉಪಾಧಿಸಂಬಂಧಃ....' ಇತ್ಯಾದಿಯಾಗಿ ಈ ಹಿಂದೆ ಭೇದಕ್ಕೆ ಔಪಾಧಿಕತ್ವವನ್ನು ನಿರಾಕರಿಸಿದ್ದರಿಂದ ಕಥಂಚಿತ್ ಎಂದಿದ್ದಾರೆ.) ಆದರೆ ಜೀವ-ಬ್ರಹ್ಮರ ಭೇದವು ಹಾಗೂ ಜೀವರಲ್ಲಿನ ಪರಸ್ಪರಭೇದವು ಮಾತ್ರ (ಔಪಾಧಿಕವಾಗಲು ಸಾಧ್ಯವೇ ಇಲ್ಲ. ಅದು) ಸ್ವಾಭಾವಿಕ ಎಂದೇ ಅಂಗೀಕರಿಸಬೇಕು.

ಏಕೆಂದರೆ - ಜೀವ-ಬ್ರಹ್ಮರ ಭೇದ ಹಾಗೂ ಜೀವರ ಪರಸ್ಪರಭೇದವು ಔಪಾಧಿಕವಾಗಿದೆ, ಪ್ರತ್ಯುತ ಅವರಲ್ಲಿ ಸ್ವಾಭಾವಿಕ ಐಕ್ಯವೇ ಇದೆ ಎನ್ನುವುದಾದರೆ, ಭಿನ್ನ-ಭಿನ್ನ ಆಶ್ರಯಗಳಲ್ಲಿ ಆಗುವ ಸುಖಃದುಃಖಾದಿಗಳ ಅನುಭವವು (ಅನುಸಂಧಾನವು) ಕೂಡದೇ ಹೋಗಬೇಕಾಗುತ್ತದೆ.

ದೇವದತ್ತನಿಗೆ ತನ್ನಿಂದ ತನಗೆ ಸ್ವಾಭಾವಿಕೈಕ್ಯ ಇರುವುದರಿಂದ ಏಕಕಾಲದಲ್ಲಿ ಸುಖಾನುಭವ-ದುಃಖಾನುಭವಗಳು ಆಗುವುದಿಲ್ಲ. ಅದರಂತೆಯೇ ಎಲ್ಲ ಜೀವರಲ್ಲಿಯೂ ಸ್ವಾಭಾವಿಕೈಕ್ಯವೇ ಇರುವುದಾದರೆ ಏಕಕಾಲದಲ್ಲಿ ದೇವದತ್ತನಿಗೆ ಸುಖಾನುಭವ, ಯಜ್ಞದತ್ತನಿಗೆ ದುಃಖಾನುಭವ ಹೀಗೆ ಭಿನ್ನ-ಭಿನ್ನಾಶ್ರಯಗಳಲ್ಲಿ ಏಕಕಾಲದಲ್ಲಿ ಆಗುವ ಸುಖ-ದುಃಖಾದಿಗಳ ಅನುಭವಗಳು ಕೂಡದೇ ಹೋಗಬೇಕಾಗುತ್ತದೆ ಎಂದು ಅಭಿಪ್ರಾಯ.

**ಟೀಕಾ :- [110]ಯೇ ತು 'ಮಿಥ್ಯೋಪಾಧಿನಿಮಿತ್ತೋ ಭೇದಭ್ರಮಃ' ಇತಿ [111]ವದಂತಿ ತೇಷಾಂ ಸುಖದುಃಖಾದೀನಾಮಪಿ ಮಿಥ್ಯಾತ್ವಾತ್ ಕಾಲ್ಪನಿಕೀ [112]ವ್ಯವಸ್ಥಾ ಘಟೀತಾಪಿ[113] ।**

**ಅನುವಾದ :-** ಯಾರು ಉಪಾಧಿಯನ್ನೂ ಮಿಥ್ಯೆ ಎಂದು ಅಂಗೀಕರಿಸಿ, ಮಿಥ್ಯೋಪಾಧಿನಿಮಿತ್ತವಾಗಿ ಭೇದಭ್ರಮ ಬರುತ್ತದೆ (ಜೀವ-ಬ್ರಹ್ಮರ ಭೇದ ಹಾಗೂ ಜೀವರ ಪರಸ್ಪರಭೇದವು ಭ್ರಾಂತಿಕಲ್ಪಿತವಾಗಿದೆ) ಎಂದು ಹೇಳುತ್ತಾರೆಯೋ ಅವರ ಮತದಲ್ಲಿ ಸುಖ-ದುಃಖಾದಿಗಳೂ ಮಿಥ್ಯಾ ಆಗಿದ್ದರಿಂದ ಅವರ ಪಕ್ಷದಲ್ಲಿ ಕಾಲ್ಪನಿಕವಾದ ವ್ಯವಸ್ಥೆಯು (ಭಿನ್ನ-ಭಿನ್ನವಾಗಿ ಆಗುವ ಸುಖ-ದುಃಖಾದಿಗಳ ಅನುಭವವು) ಕೂಡುತ್ತಿತ್ತೋ ಏನೋ !

ಆದರೆ ನಿಮ್ಮ ಮತದಲ್ಲಿ ಮಾತ್ರ ಉಪಾಧಿಯೂ ಸತ್ಯವಾದ್ದರಿಂದ, ಜೀವ-ಬ್ರಹ್ಮರ ಭೇದವೂ ಸತ್ಯವಾದ್ದರಿಂದ, ಜೀವರ ಪರಸ್ಪರಭೇದವೂ ಸತ್ಯವಾದ್ದರಿಂದ, ಸುಖದುಃಖಾದಿಗಳೂ ಸತ್ಯವಾದ್ದರಿಂದ ವ್ಯವಸ್ಥೆಯು (ಭಿನ್ನ-ಭಿನ್ನವಾಗಿ ಆಗುವ ಸುಖದುಃಖಾದಿಗಳ ಅನುಭವವು) ಸರ್ವಥಾ ಕೂಡುವುದಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ಕೆಲವು ಭೇದವಾದಿಗಳು ಸುಖದುಃಖಾದಿಭೇದದಿಂದ ಜೀವಭೇದವನ್ನು ಸಾಧಿಸಿದ್ದಾರೆ. ಅವರಿಗೆ ಮಾಯಾವಾದಿಗಳು ದೋಷಗಳನ್ನು ಹೇಳಿ ನಿರಾಕರಿಸಿದ್ದಾರೆ. ಮಾಯಾವಾದಿಗಳು ಹೇಳಿದ ಆ ದೋಷಗಳು ಆಚಾರ್ಯರ (ನಮ್ಮ) ಪಕ್ಷಕ್ಕೆ ಬರುವುದಿಲ್ಲ ಎನ್ನುವುದನ್ನು ತೋರಿಸಿಕೊಡುವ ಮೂಲಕ 'ಸುಖದುಃಖಾದಿ**ಭೋಗಶ್ಚ** ' ಎಂಬುದಾಗಿ ಆಚಾರ್ಯರು ಪ್ರಯೋಗಿಸಿದ '**ಭೋಗ** ' ಶಬ್ದಕ್ಕೆ ಸಾರ್ಥಕ್ಯ ಹೇಳುತ್ತಾರೆ -

**ಟೀಕಾ :- ನನು ಸುಖದುಃಖಾದಯೋಽಂತಃಕರಣಧರ್ಮಾಃ । [114]ತದ್ಭೇದಾತ್ [115]ಕಥಂಚಿತ್ ಅಂತಃಕರಣಭೇದಃ ಸಾಧ್ಯತಾಮ್ । ಆತ್ಮಭೇದೇ ತು**

---

110 ಮಾಯಾವಾದಿನಃ ।

111 ಜೀವ-ಬ್ರಹ್ಮಣೋಃ ಜೀವಾನಾಂ ಚ ಭೇದೋ ಭ್ರಾಂತಿಕಲ್ಪಿತ ಇತಿ ವದಂತೀತ್ಯರ್ಥಃ । (ಶ್ರೀನಿ)

112 ಸುಖದುಃಖಾದೀನಾಂ ಭೇದೇನ ದರ್ಶನಂ ಇತ್ಯರ್ಥಃ । (ಶ್ರೀನಿ)

113 ತ್ವನ್ಮತೇ ತೂಪಾಧೇಃ ಜೀವಬ್ರಹ್ಮಣೋಃ ಜೀವಾನಾಂ ಚ ಭೇದಸ್ಯ ದುಃಖಾದೀನಾಂ ಚ ಸತ್ಯತ್ವಾತ್ ವ್ಯವಸ್ಥಾ ನೈವ ಯುಜ್ಯತ ಇತಿ ಭಾವಃ । (ಶ್ರೀನಿ)

114 ತದ್ಭೇದಾತ್ ತೇಷಾಂ ಅಂತಃಕರಣಧರ್ಮಾಣಾಂ ಭೇದಾತ್ ।

**ಕಿಮಾಯಾತಮ್ ? ಇತ್ಯಾಶಂಕಾಪರಿಹಾರಾಯ ಭೋಗ ಇತ್ಯುಕ್ತಮ್ । ನ ವಯಂ ಸುಖಾದಿಭೇದಾತ್ ಅಂತಃಕರಣಭೇದಂ ಸಾಧಯಾಮಃ । ಕಿಂ ನಾಮ ? 'ಸ್ವರೂಪಾಭೇದೇ ಸುಖಾದ್ಯನುಸಂಧಾನಂ ಸ್ಯಾತ್[116]' ಇತಿ ಬ್ರೂಮಃ ।**

**ಅನುವಾದ :-** ಸುಖ-ದುಃಖಾದಿಗಳು ಅಂತಃಕರಣದ (ಮನಸ್ಸಿನ) ಧರ್ಮಗಳಾಗಿವೆ. ಹಾಗಾಗಿ ಸುಖದುಃಖಾದಿಧರ್ಮಭೇದದಿಂದ ಕಥಂಚಿತ್ ಅಂತಃಕರಣಗಳಲ್ಲಿ ಭೇದವನ್ನು ಸಾಧಿಸಿರಿ. ಆದರೆ ಸುಖದುಃಖಾದಿಗಳು ಆತ್ಮನ ಧರ್ಮವಾಗಿಲ್ಲವಾದ್ದರಿಂದ ಸುಖದುಃಖಾದಿಭೇದದಿಂದ ಆತ್ಮಭೇದವನ್ನು ಹೇಗೆ ಸಾಧಿಸುತ್ತೀರಿ ? ಸುಖದುಃಖಾದಿಭೇದದಿಂದ ಆತ್ಮಭೇದವನ್ನು ಸಾಧಿಸಲು ನೀವು ಹೊರಟಿರುವುದು ಸರಿಯಲ್ಲ ? ಎಂಬುದಾಗಿ ಶಂಕೆ ಬಂದರೆ, ಆ ಶಂಕೆಯನ್ನು ಪರಿಹರಿಸುವುದಕ್ಕಾಗಿ ಆಚಾರ್ಯರು 'ಸುಖದುಃಖಾದಿ**ಭೋಗಶ್ಚ**' ಎಂಬುದಾಗಿ '**ಭೋಗ**' ಶಬ್ದವನ್ನು ಪ್ರಯೋಗಿಸಿದ್ದಾರೆ.

ನಾವು ಸುಖದುಃಖಾದಿಭೇದದಿಂದ ಅಂತಃಕರಣಭೇದವನ್ನು ಸಾಧಿಸುವುದಿಲ್ಲ. ಕಿಂತು ''ಜೀವರಲ್ಲಿ ಸ್ವಾಭಾವಿಕೈಕ್ಯ ಇರುವುದಾದರೆ ಸುಖದುಃಖಾದ್ಯನುಸಂಧಾನವು ಪರಸ್ಪರವಾಗಿ ಆಗಲಿ'' ಎಂಬುದಾಗಿ ಆಪಾದಿಸುತ್ತೇವೆ.

ಅಂದರೆ ಸುಖದುಃಖಾದಿಗಳು ಅಂತಃಕರಣದ ಧರ್ಮವಾಗಿದ್ದರೂ ಸಹ ತದಧೀನ ಅನುಸಂಧಾತೃತ್ವವು (ಸುಖದುಃಖಾದಿಗಳ ಅನುಸಂಧಾನವು) ಆತ್ಮನ ಧರ್ಮವಾಗಿದ್ದರಿಂದ ಅಂತಹ ಸುಖದುಃಖಾದ್ಯನುಸಂಧಾತೃತ್ವಸುಖದುಃಖಾದ್ಯನನು-ಸಂಧಾತೃತ್ವ ರೂಪವಾದ ವಿರುದ್ಧಧರ್ಮಗಳಿಂದ ಆತ್ಮಭೇದವನ್ನು ಸಾಧಿಸುತ್ತೇವೆ. ಆದ್ದರಿಂದ ಸುಖದುಃಖಾದಿಭೇದದಿಂದ ಆತ್ಮಭೇದವನ್ನು ಸಾಧಿಸುವವರಿಗೆ ನೀವು (ಮಾಯಾವಾದಿಗಳು) ಹೇಳುವ ದೋಷವು ನಮಗೆ (ಸುಖದುಃಖಾದ್ಯನುಸಂಧಾನ-ಅನನುಸಂಧಾನಭೇದದಿಂದ ಆತ್ಮಭೇದವನ್ನು ಸಾಧಿಸುವ ಆಚಾರ್ಯರ ಪಕ್ಷಕ್ಕೆ ) ಬರುವುದಿಲ್ಲ ಎಂದು ಅಭಿಪ್ರಾಯ.

---

115 ರೂಪಾದಿಧರ್ಮಾಣಾಂ ಭೇದೇ ತದಾಧಾರಸ್ಯ ಘಟಾದೇಃ ಭೇದಾಭಾವಾತ್ ಕಥಂಚಿತ್ ಇತ್ಯುಕ್ತಮ್ । (ಶ್ರೀನಿ)

116 ತಥಾ ಚ ಸುಖಾದೇಃ ಅಂತಃಕರಣಧರ್ಮತ್ವೇಽಪಿ ತದಧೀನಾನುಸಂಧಾತೃತ್ವಸ್ಯ ಆತ್ಮನಿ ಸದ್ಭಾವಾತ್ ಸುಖಾದ್ಯನುಸಂಧಾತೃತ್ವಅನನುಸಂಧಾತೃತ್ವಲಕ್ಷಣಾತ್ ವಿರುದ್ಧಧರ್ಮಾತ್ ಆತ್ಮಭೇದೋ ಭವಿಷ್ಯತ್ಯೇವ ಇತಿ ಭಾವಃ । (ಶ್ರೀನಿ)

**ಟೀಕಾ :- [117]ಏತೇನೈತದಪಿ ನಿರಸ್ತಂ, ಯತ್ ಕೇನಚಿತ್ [118]ವ್ಯವಸ್ಥಾನ್ಯಥಾನುಪಪತ್ತ್ಯಾ ಭೇದಮಾಶಂಕ್ಯ ಉಕ್ತಂ - "ನ ತಾವತ್ [119]ಧರ್ಮಭೇದೋ ವ್ಯವಸ್ಥಾ। [120]ಧರ್ಮಭೇದೇಽಪಿ ಧರ್ಮಿಣೋ ಭೇದಾಪ್ರತೀತೇಃ । ನಾಪಿ [121]ಭಿನ್ನಾಶ್ರಯಧರ್ಮಭೇದಃ । [122]ಇತರೇತರಾಶ್ರಯಪ್ರಸಂಗಾತ್ । ನ ಚ ವಿರುದ್ಧಧರ್ಮಭೇದಃ । ಐಕಾತ್ಮ್ಯವಾದಿನಂ ಪ್ರತಿ ಸುಖಾದೀನಾಂ [123]ವಿರೋಧಾಸಿದ್ಧೇಃ" ಇತಿ ।**

**[124]ಸುಖದುಃಖಾದ್ಯನುಸಂಧಾನಭಾವಾಭಾವರೂಪವ್ಯವಸ್ಥಾಯಾ ಅಂಗೀಕೃತತ್ವಾತ್ ।**

**ಅನುವಾದ :-** "ನಾವು ಸುಖದುಃಖಾದಿಭೇದದಿಂದ ಆತ್ಮಭೇದವನ್ನು ಸಾಧಿಸುವುದಿಲ್ಲ. ಕಿಂತು ಸುಖದುಃಖಾದ್ಯನುಸಂಧಾನಭಾವಾಭಾವಗಳಿಂದ ಆತ್ಮಭೇದವನ್ನು

---

117 'ಸುಖದುಃಖಾದಿಭೋಗಶ್ಚ' ಇತಿ ಭೋಗಶಬ್ದಪ್ರಯೋಗೇನ ಇತ್ಯರ್ಥಃ ।

118 ದೇವದತ್ತಸ್ಯ ಸುಖಂ, ಯಜ್ಞದತ್ತಸ್ಯ ದುಃಖಂ । ದೇವದತ್ತಃ ಸಜ್ಜನಃ, ಯಜ್ಞದತ್ತೋ ದುರ್ಜನ ಇತ್ಯೇವಂ ವ್ಯವಸ್ಥಾ ಜಗತೀತಲೇ । ಏಷಾ ಹಿ ವ್ಯವಸ್ಥಾ ದೇವದತ್ತ-ಯಜ್ಞದತ್ತಾದಿಜೀವಭೇದಂ ವಿನಾ ಅನುಪಪದ್ಯಮಾನಾ । ಅತೋ ವ್ಯವಸ್ಥಾನ್ಯಥಾನುಪಪತ್ತ್ಯಾ ಜೀವಭೇದಃ ಸಿದ್ಧ್ಯತೀತಿ ಮತಮಾಶಂಕ್ಯ ಇತ್ಯರ್ಥಃ ।

119 ಸುಖ-ದುಃಖಾದಿಧರ್ಮಭೇದಃ ಇತ್ಯರ್ಥಃ ।

120 ರೂಪಾದಿಧರ್ಮಭೇದೇಽಪಿ ಧರ್ಮಿಣೋ ಘಟಸ್ಯೈಕತ್ವೇನ ವ್ಯಭಿಚಾರಾತ್, ಧರ್ಮಭೇದೇ ಧರ್ಮಿಭೇದ ಇತಿ ನಿಯಮೋಽಯುಕ್ತ ಇತ್ಯರ್ಥಃ । (ಶ್ರೀನಿ)

121 ಭಿನ್ನಾಶ್ರಯಾ ದೇವದತ್ತಯಜ್ಞದತ್ತಾದಿರೂಪಭಿನ್ನಾಶ್ರಯಾ ಯೇ ಧರ್ಮಾಃ ಸುಖಾದುಃಖಾದಯಃ ತದ್ಭೇದೋ ವ್ಯವಸ್ಥಾ ಇತ್ಯರ್ಥಃ । (ಶ್ರೀನಿ)

122 ಧರ್ಮಿಣಾಂ ಭೇದಸಿದ್ಧೌ ಧರ್ಮಾಣಾಂ ಭಿನ್ನಾಶ್ರಯತ್ವಸಿದ್ಧಿಃ । ತತ್ಸಿದ್ಧೌ ಚ ಭಿನ್ನಾಶ್ರಯಧರ್ಮಭೇದಾತ್ ಧರ್ಮಿಭೇದಸಿದ್ಧಿಃ ಇತಿ ಇತರೇತರಾಶ್ರಯಪ್ರಸಂಗಾತ್ ಇತ್ಯರ್ಥಃ । (ಶ್ರೀನಿ)

123 ವಿರೋಧೋ ನಾಮ ಸಹಾನವಸ್ಥಾನಮ್ । ಜೀವ-ಬ್ರಹ್ಮೈಕ್ಯವಾದಿಮತೇ ಸುಖದುಃಖಯೋಃ ಏಕಾತ್ಮನಿಷ್ಠತ್ವಸ್ಯೈವ ಸದ್ಭಾವೇನ ಉಕ್ತರೂಪವಿರೋಧಸ್ಯೈಭಾವಾತ್ ಇತ್ಯರ್ಥಃ ।

124 ತಥಾ ಚ ಸುಖದುಃಖಾದ್ಯನುಸಂಧಾನಭಾವಾಭಾವರೂಪವ್ಯವಸ್ಥಾನ್ಯಥಾನುಪಪತ್ತ್ಯಾ ಜೀವಬ್ರಹ್ಮಣೋಃ ಜೀವಾನಾಂ ಚ ಭೇದಸಾಧನಂ ಯುಕ್ತಮೇವೇತ್ಯಾಶಯಃ । (ಶ್ರೀನಿ)

ಸಾಧಿಸುತ್ತೇವೆ'' ಎಂಬುದಾಗಿ ಈ ಹಿಂದೆ ಪ್ರತಿಪಾದಿಸುವುದರಿಂದ ಕೆಲವರು ಮಾಡುವ ಮತ್ತೊಂದು ಆಕ್ಷೇಪವನ್ನೂ ನಿರಾಕರಿಸಿದಂತಾಗುತ್ತದೆ.

ಏನದು ಕೆಲವರ ಆಕ್ಷೇಪ ? ಎಂದರೆ, ಅದನ್ನು ಮೊದಲು ಅನುವಾದಿಸುತ್ತಾರೆ-

**ಕೆಲವರ ಆಕ್ಷೇಪ :-** [125] ವ್ಯವಸ್ಥಾನ್ಯಥಾನುಪಪತ್ತಿಯಿಂದ ಭೇದವನ್ನು ಹೇಳುವುದು ಸರಿಯಲ್ಲ. ಏಕೆಂದರೆ - ವ್ಯವಸ್ಥಾನ್ಯಾಥಾನುಪಪತ್ತಿಯಿಂದ ಭೇದ ಹೇಳಬೇಕಾದರೆ ಮೊದಲು 'ವ್ಯವಸ್ಥಾ' ಶಬ್ದದ ಅರ್ಥ ಏನೆಂದು ಹೇಳಿರಿ.

ಧರ್ಮಭೇದವು (ಭಿನ್ನಧರ್ಮಗಳು) ವ್ಯವಸ್ಥಾ ಎನ್ನುತ್ತೀರೋ ? ಅಥವಾ ಭಿನ್ನಾಶ್ರಯಧರ್ಮಭೇದವು (ಭಿನ್ನ-ಭಿನ್ನಆಶ್ರಯಗಳಲ್ಲಿ ಇರುವ ಭಿನ್ನಧರ್ಮಗಳು) ವ್ಯವಸ್ಥಾ ಎನ್ನುತ್ತೀರೋ ? ಅಥವಾ ವಿರುದ್ಧಧರ್ಮಭೇದವು (ವಿರುದ್ಧಧರ್ಮಗಳು) ವ್ಯವಸ್ಥಾ ಎಂದು ಹೇಳುತ್ತೀರೋ ?

ಮೊದಲನೆಯದಾಗಿ ಧರ್ಮಭೇದವು ವ್ಯವಸ್ಥಾ ಎಂದು ಹೇಳುವುದು (ಸುಖದುಃಖಾದಿರೂಪ ಧರ್ಮಭೇದಾನ್ಯಥಾನುಪಪತ್ತಿಯಿಂದ ಧರ್ಮಿಗಳಾದ ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಭೇದ ಹೇಳುವುದು) ಸರಿಯಲ್ಲ. ಏಕೆಂದರೆ ಧರ್ಮಭೇದವಿದ್ದರೆ ಧರ್ಮಿಭೇದ ಇರುತ್ತದೆ ಎಂಬ ನಿಯಮವಿಲ್ಲ. ರೂಪಾದಿಧರ್ಮಭೇದ ಇದ್ದರೂ ಸಹ ಧರ್ಮಿಯಾದ ಘಟವು ಒಂದೇ ಆಗಿರುವುದರಿಂದ (ಧರ್ಮಿಭೇದ ಇಲ್ಲವಾದ್ದರಿಂದ) ವ್ಯಭಿಚಾರ ಕಂಡಿದೆ. ಆದ್ದರಿಂದ ಕೇವಲ ಧರ್ಮಭೇದವು ವ್ಯವಸ್ಥಾ ಎನ್ನುವುದು ಸರಿಯಲ್ಲ.

---

125 ವ್ಯವಸ್ಥಾನ್ಯಥಾನುಪಪತ್ತಿಯಿಂದ ಭೇದವನ್ನು ಹೇಳುವುದು ಎಂದರೆ :- ಜಗತ್ತಿನಲ್ಲಿ ಒಂದು ರೀತಿಯ ವ್ಯವಸ್ಥೆ ಇದೆ. ಅಂದರೆ ದೇವದತ್ತನಿಗೆ ಸುಖ, ಯಜ್ಞದತ್ತನಿಗೆ ದುಃಖ, ದೇವದತ್ತನು ಸಜ್ಜನ, ಯಜ್ಞದತ್ತನು ದುರ್ಜನ. ಹೀಗೊಂದು ವ್ಯವಸ್ಥೆ ಇದೆ.

ವ್ಯವಸ್ಥಾ ಭೇದಂ ವಿನಾ ಅನುಪಪದ್ಯಮಾನಾ,
ವ್ಯವಸ್ಥಾನ್ಯಥಾನುಪಪತ್ತ್ಯಾ ಭೇದಃ ಸಿದ್ಧ್ಯತಿ ॥

ಈ ವ್ಯವಸ್ಥೆಯು ದೇವದತ್ತ-ಯಜ್ಞದತ್ತಾದಿಗಳಲ್ಲಿ ಭೇದವನ್ನು ಹೇಳಿದಾಗ ಮಾತ್ರ ಉಪಪನ್ನವಾಗುತ್ತದೆ. ದೇವದತ್ತ-ಯಜ್ಞದತ್ತಾದಿಗಳಲ್ಲಿ ಭೇದ ಹೇಳದಿದ್ದರೆ ವ್ಯವಸ್ಥೆ ಕೂಡುವುದಿಲ್ಲ. ಆದ್ದರಿಂದ ವ್ಯವಸ್ಥಾನ್ಯಥಾನುಪಪತ್ತಿಯಿಂದ ಭೇದವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಎರಡನೆಯದಾಗಿ, ಭಿನ್ನಾಶ್ರಯಧರ್ಮಭೇದವು ವ್ಯವಸ್ಥಾ ಎನ್ನುವುದೂ ಸರಿಯಲ್ಲ. ಯದ್ಯಪಿ ಭಿನ್ನಾಶ್ರಯಧರ್ಮಭೇದವು (ದೇವದತ್ತ-ಯಜ್ಞದತ್ತಾದಿರೂಪ ಭಿನ್ನ-ಭಿನ್ನ ಆಶ್ರಯಗಳಲ್ಲಿ ಇರುವ ಸುಖದುಃಖಾದಿರೂಪಧರ್ಮಗಳ ಭೇದವು) ವ್ಯವಸ್ಥಾ ಎಂದು ಅಂಗೀಕರಿಸಿದರೆ, ರೂಪಾದಿಗಳು ಘಟರೂಪವಾದ ಒಂದೇ ಆಶ್ರಯದಲ್ಲಿ ಇರುವ ಕಾರಣ ಭಿನ್ನಾಶ್ರಯಧರ್ಮಗಳಾಗಿಲ್ಲವಾದ್ದರಿಂದ ಹಿಂದಿನ ಪಕ್ಷಕ್ಕೆ ಬಂದ ದೋಷ ಈಗ ಬರುವುದಿಲ್ಲ. ಆದರೂ ಭಿನ್ನಾಶ್ರಯಧರ್ಮಭೇದವು ವ್ಯವಸ್ಥಾ ಎನ್ನಲು ಬರುವುದಿಲ್ಲ. ಏಕೆಂದರೆ - ಧರ್ಮಿಗಳಲ್ಲಿ ಭೇದವು ಸಿದ್ಧವಾದರೆ ಧರ್ಮಗಳಿಗೆ ಭಿನ್ನಾಶ್ರಯತ್ವವು ಸಿದ್ಧವಾಗುತ್ತದೆ. ಧರ್ಮಗಳಿಗೆ ಭಿನ್ನಾಶ್ರಯತ್ವವು ಸಿದ್ಧವಾದರೆ ಭಿನ್ನಾಶ್ರಯಧರ್ಮಭೇದದಿಂದಾಗಿ ಧರ್ಮಿಭೇದವು ಸಿದ್ಧವಾಗುತ್ತದೆ. ಹೀಗೆ ಈ ಪಕ್ಷದಲ್ಲಿ ಅನ್ಯೋನ್ಯಾಶ್ರಯದೋಷ ಬರುವುದರಿಂದ, ಭಿನ್ನಾಶ್ರಯಧರ್ಮಭೇದವು ವ್ಯವಸ್ಥಾ ಎಂಬ ಎರಡನೇ ಪಕ್ಷವೂ ಸರಿಯಲ್ಲ.

ಮೂರನೆಯದಾಗಿ ವಿರುದ್ಧಧರ್ಮಭೇದವು ವ್ಯವಸ್ಥಾ ಎಂಬ ಮೂರನೇ ಪಕ್ಷವೂ ಸರಿಯಲ್ಲ. ಏಕೆಂದರೆ - ವಿರೋಧ ಎಂದರೆ ಸಹಾನವಸ್ಥಾನ ಎಂದರ್ಥ. ಜೀವ-ಬ್ರಹ್ಮರಿಗೆ ಐಕ್ಯ ಹೇಳುವ ಅದ್ವೈತಮತದಲ್ಲಿ ಸುಖದುಃಖಗಳಿಗೆ ಏಕಾತ್ಮನಿಷ್ಠತ್ವವನ್ನೇ ಹೇಳುವುದರಿಂದ ಸುಖ-ದುಃಖಗಳಲ್ಲಿ ಸಹಾನವಸ್ಥಾನರೂಪವಾದ ವಿರೋಧವೇ ಇಲ್ಲ. (ಸುಖ-ದುಃಖಗಳು ವಿರುದ್ಧವೇ ಅಲ್ಲ.) ಆದ್ದರಿಂದ ವಿರುದ್ಧಧರ್ಮಭೇದವು ವ್ಯವಸ್ಥಾ ಎಂಬ ಮೂರನೇ ಪಕ್ಷವೂ ಸರಿಯಲ್ಲ.

ಅಂದಮೇಲೆ ವ್ಯವಸ್ಥೆ ಎಂದರೆ ಯಾವ ರೀತಿಯಾಗಿಯೂ ನಿರ್ವಚನ ಮಾಡಲು ಬರುವುದಿಲ್ಲವಾದ್ದರಿಂದ ('ವ್ಯವಸ್ಥಾ'ಶಬ್ದದ ಅರ್ಥವನ್ನೇ ಹೇಳಲು ಬರುವುದಿಲ್ಲವಾದ್ದರಿಂದ) ವ್ಯವಸ್ಥಾನ್ಯಥಾನುಪಪತ್ತಿಯಿಂದ ಭೇದ ಹೇಳುವುದು ಸರಿಯಲ್ಲ ಎನ್ನುವುದು ಕೆಲವರ ಆಕ್ಷೇಪ.

ಆದರೆ -

**'ಸುಖದುಃಖಾದಿಭೋಗಶ್ಚ ಸ್ವರೂಪಪ್ಯೈಕ್ಯೇ ನ ಭೇದತಃ ।'**

ಎಂಬುದಾಗಿ ಆಚಾರ್ಯರು 'ಭೋಗ 'ಶಬ್ದವನ್ನು ಪ್ರಯೋಗಿಸಿರುವುದರಿಂದಲೇ ಕೆಲವರ ಈ ಆಕ್ಷೇಪವನ್ನೂ ನಿರಾಕರಿಸಿದಂತಾಗುತ್ತದೆ.

ಅದರ ಅಭಿಪ್ರಾಯ :- ವ್ಯವಸ್ಥಾ ಎಂದರೆ 'ಧರ್ಮಭೇದ' 'ಭಿನ್ನಾಶ್ರಯ ಧರ್ಮಭೇದ' 'ವಿರುದ್ಧಧರ್ಮಭೇದ' ಎಂದು ನಾವು ಹೇಳುವುದಿಲ್ಲ. ಕಿಂತು ಸುಖದುಃಖಾದ್ಯನುಸಂಧಾನಭಾವ-ಅಭಾವಗಳೇ ವ್ಯವಸ್ಥಾ ಎಂದು ಹೇಳುತ್ತೇವೆ. ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಭೇದವನ್ನು ಒಪ್ಪದಿದ್ದರೆ ಈ ಸುಖದುಃಖಾದ್ಯನು-ಸಂಧಾನಭಾವ-ಅಭಾವಗಳು ಉಪಪನ್ನವಾಗುವುದಿಲ್ಲ. ಆದ್ದರಿಂದ ಸುಖದುಃಖಾದ್ಯನು-ಸಂಧಾನಭಾವಾಭಾವಾನ್ಯಥಾನುಪಪತ್ತಿಯಿಂದ ಜೀವ-ಬ್ರಹ್ಮರಿಗೆ (ಹಾಗೂ ಜೀವರಿಗೆ) ಭೇದವನ್ನು ಹೇಳುತ್ತೇವೆ. ಹಾಗಾಗಿ ಈ ನಮ್ಮ ಪಕ್ಷಕ್ಕೆ ಯಾವ ಅನುಪಪತ್ತಿಯೂ ಬರುವದಿಲ್ಲ ಎಂದು ಅಭಿಪ್ರಾಯ.

**ಟೀಕಾ :- ನನು ಏತದನುಸಂಧಾನಂ ಕಿಮಂಶಾನಾಮಾಪಾದ್ಯತೇ ? ಉತಾಂಶಿನಃ ? ನಾದ್ಯಃ ವ್ಯಾಪ್ತ್ಯಭಾವಾತ್ । ಹಸ್ತಗತಸುಖಸ್ಯ ಪಾದಗತೇನ ಅನನುಸಂಧಾನಾತ್ । ನ ದ್ವಿತೀಯಃ । ತಸ್ಯ ಅಭೋಕ್ತೃತ್ವಾತ್ ಇತಿ । ಮೈವಮ್ । ಉಭಯಥಾಽಪ್ಯದೋಷಾತ್ । ನ ಹಿ ತತ್ತದ್ಭೋಗಾಯತನಾನಾಂ ಸಂಕ್ರಾಂತಿ-ರಾಪಾದ್ಯತೇ । ಕಿಂ ತು ? ಸುಖಾದ್ಯನುಸಂಧಾನಮಾತ್ರಮ್ । ತತ್ ಅಂಶಾನಾಮಸ್ತ್ಯೇವ । 'ಭೋಕ್ತೃಭೂತಾಂಶವತೋಽಂಶಿನೋಽಭೋಕ್ತೃತ್ವಾಸಿದ್ಧೇಶ್ಚ ।**

**ಅನುವಾದ :-** ''ಜೀವ-ಬ್ರಹ್ಮರಲ್ಲಿ ಸ್ವಾಭಾವಿಕೈಕ್ಯ ಇರುವುದಾದರೆ ಪರಸ್ಪರವಾಗಿ ಸುಖದುಃಖಾದ್ಯನುಸಂಧಾನವು ಆಗಬೇಕಾಗುತ್ತದೆ'' ಎಂಬುದಾಗಿ ಆಪಾದಿಸಲ್ಪಡುತ್ತಿರುವ ಸುಖದುಃಖಾದ್ಯನುಸಂಧಾನ ಯಾರಿಗೆ ಆಗಲೆಂದು ಆಪಾದಿಸುತ್ತೀರಿ ? ಅಂಶರಾದ ಜೀವರಿಗೆ ಸುಖದುಃಖಾದ್ಯನುಸಂಧಾನವಾಗಲಿ ಎಂದು ಆಪಾದಿಸುತ್ತೀರೋ ? ಅಥವಾ ಅಂಶಿಯಾದ ಬ್ರಹ್ಮನಿಗೆ ಸುಖದುಃಖಾದ್ಯನು ಸಂಧಾನವಾಗಲಿ ಎಂದು ಆಪಾದಿಸುತ್ತೀರೋ?

ಅಂಶರಾದ ಜೀವರಿಗೆ ಸುಖದುಃಖಾದ್ಯನುಸಂಧಾನವಾಗಲಿ ಎಂದು ಆಪಾದಿಸುವುದು ಸರಿಯಲ್ಲ. ಏಕೆಂದರೆ -

''ಯತ್ರ ಸ್ವಾಭಾವಿಕೈಕ್ಯಂ ತತ್ರ ಅಂಶಾನಾಂ ಪರಸ್ಪರಂ ಸುಖದುಃಖಾದ್ಯನು ಸಂಧಾನಂ'' (ಎಲ್ಲಿ ಸ್ವಾಭಾವಿಕೈಕ್ಯ ಇರುತ್ತದೆಯೋ ಅಲ್ಲಿ ಅಂಶಗಳಲ್ಲಿ ಪರಸ್ಪರವಾಗಿ ಸುಖದುಃಖಾದ್ಯನುಸಂಧಾನವಾಗುತ್ತದೆ) ಎಂಬುದಾಗಿ ವ್ಯಾಪ್ತಿ ಇಲ್ಲ.

ಹಸ್ತಾವಚ್ಛೇದೇನ ಜ್ಞಾಯಮಾನವಾದ ಸುಖದ ಅನುಸಂಧಾನವು ಪಾದಗತವಾದ ಅಂಶಕ್ಕೆ ಬರುವುದಿಲ್ಲ. ಹಾಗಾಗಿ ದೇವದತ್ತ ಎಂಬ ಅಂಶಿ ಹಾಗೂ ಹಸ್ತಗತಾಂಶ-ಪಾದಗತಾಂಶ ಇವುಗಳಲ್ಲಿ ಸ್ವರೂಪೈಕ್ಯ ಇದ್ದರೂ ಸಹ ಅಂಶಗಳಲ್ಲಿ (ಹಸ್ತಾವಚ್ಛಿನ್ನ-ಪಾದಾವಚ್ಛಿನ್ನ ಚೇತನರಲ್ಲಿ) ಪರಸ್ಪರವಾಗಿ ಸುಖದುಃಖಾದ್ಯನು-ಸಂಧಾನ ಇಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆ ಎಂದು ಅಭಿಪ್ರಾಯ.

ಹೌದು, ಹಸ್ತಗತವಾದ ಅಂಶ ಮತ್ತು ಪಾದಗತವಾದ ಅಂಶ ಇವುಗಳಲ್ಲಿ ಪರಸ್ಪರ ಸುಖದುಃಖಾದ್ಯನುಸಂಧಾನವೇ ಇದೆಯಾದ್ದರಿಂದ ವ್ಯಭಿಚಾರ ಬರುವುದಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಹಸ್ತಗತಾಂಶ-ಪಾದಗತಾಂಶ ಇವುಗಳಲ್ಲಿ ಪರಸ್ಪರ ಸುಖದುಃಖಾದ್ಯನುಸಂಧಾನವನ್ನು ಅಂಗೀಕರಿಸುವುದಾದರೆ, ಕೈಯಲ್ಲಿ ಒದ್ದೆಬಟ್ಟೆಯನ್ನು ಹಿಡಿದು ಸುಡುಬಿಸಿಲಿನಲ್ಲಿ ಬರಿಗಾಲಲ್ಲಿ ನಡೆಯುವಾಗ ಹಸ್ತಗತ ಅಂಶಕ್ಕೆ ಸುಖವಾಗುತ್ತಿದ್ದರೆ ಪಾದಗತ ಅಂಶಕ್ಕೆ ದುಃಖವಾಗುತ್ತಿರುತ್ತದೆಯಾದ್ದರಿಂದ

**'ಹಸ್ತೇ ಮೇ ಸುಖಂ ಪಾದೇ ಮೇ ದುಃಖಂ'**

ಎಂಬುದಾಗಿ ನಿಯತಾವಚ್ಛೇದಕವಾದ ಪ್ರತೀತಿ ಏನು ಬರುತ್ತದೆ ಅದು ಅನುಪಪನ್ನವಾಗಬೇಕಾಗುತ್ತದೆ. ಕಿಂ ನಾಮ ? ಅಂಶಗಳಲ್ಲಿ ಪರಸ್ಪರ ಅನುಸಂಧಾನ ಒಪ್ಪುವುದಾದರೆ ಹಸ್ತ-ಪಾದ ಎರಡೂ ಕಡೆ ಸುಖ-ದುಃಖ ಎರಡೂ ಆಗಬೇಕಾಗುತ್ತದೆ. (ಹಸ್ತಗತ ಅಂಶಕ್ಕೆ ಸುಖವಾಗುವಂತೆ ಪಾದಗತ ಅಂಶಕ್ಕೂ ಸುಖವಾಗಲಿ, ಪಾದಗತ ಅಂಶಕ್ಕೆ ದುಃಖವಾಗುವಂತೆ ಹಸ್ತಗತ ಅಂಶಕ್ಕೂ ದುಃಖವಾಗಲಿ ಎಂದು ಆಪತ್ತಿ ಬರುತ್ತದೆ.) ಆದ್ದರಿಂದ ಅಂಶಗಳಲ್ಲಿ ಪರಸ್ಪರ ಅನುಸಂಧಾನ ಇಲ್ಲವಾದ್ದರಿಂದ, ವ್ಯಭಿಚಾರ ಬಂದೇ ಬರುವುದರಿಂದ ''ಅಂಶರಾದ ಜೀವರಿಗೆ ಪರಸ್ಪರ ಅನುಸಂಧಾನ ಬರಲಿ'' ಎಂದು ಆಪಾದಿಸುವುದು (ಮೊದಲನೇ ಪಕ್ಷವು) ಸರಿಯಲ್ಲ.

ಇನ್ನು ಅಂಶಿಯಾದ ಬ್ರಹ್ಮನಿಗೆ ಸುಖದುಃಖಾದ್ಯನುಸಂಧಾನವಾಗಲಿ ಎಂದು ಆಪಾದಿಸುವುದೂ (ಎರಡನೇ ಪಕ್ಷವೂ) ಸರಿಯಲ್ಲ. ಏಕೆಂದರೆ - ಅನುಸಂಧಾನ ಎಂದರೆ ಭೋಗ. ಅಂಶಿಯಾದ ಬ್ರಹ್ಮನಿಗೆ ಭೋಗಾಪಾದನ ಮಾಡುವುದು ಸರಿಯಲ್ಲ. ಕಾರಣ - ಆನಂದರೂಪನಾದ ಬ್ರಹ್ಮನಿಗೆ ಬಾಹ್ಯಸುಖಾದಿಭೋಗ-ಸಾಧನವಾದ ಅಂತಃಕರಣಾದಿಗಳು ಇಲ್ಲವಾದ್ದರಿಂದ ಅವನು ಅಭೋಕ್ತೃವಾಗಿದ್ದಾನೆ. ಹಾಗಾಗಿ ಅಂಶಿಯಾದ ಬ್ರಹ್ಮನಿಗೆ ಅನುಸಂಧಾನವನ್ನು ಆಪಾದಿಸಲೂ ಬರುವುದಿಲ್ಲ.

ಅಂದಮೇಲೆ ''ಸ್ವರೂಪೈಕ್ಯ ಇರುವುದಾದರೆ ಸುಖದುಃಖಾದ್ಯನುಸಂಧಾನ ಪರಸ್ಪರವಾಗಿ ಆಗಲಿ'' ಎಂಬುದಾಗಿ ಯಾರಿಗೆ ಆಪಾದಿಸುತ್ತೀರಿ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ - ಅಂಶರಾದ ಜೀವರಿಗೆ ಆಪಾದಿಸುತ್ತೇವೆ ಹಾಗೂ ಅಂಶಿಯಾದ ಬ್ರಹ್ಮನಿಗೆ ಆಪಾದಿಸುತ್ತೇವೆ ಎಂಬ ಎರಡೂ ಪಕ್ಷಗಳಲ್ಲಿಯೂ ಯಾವ ದೋಷ ಬರುವುದಿಲ್ಲ.

ಅಂಶರಾದ ಜೀವರಿಗೆ ಸುಖದುಃಖಾದ್ಯನುಸಂಧಾನವಾಗಲಿ ಎಂಬ ಮೊದಲನೇ ಪಕ್ಷಕ್ಕೆ ''ಹಸ್ತಗತಾಂಶ-ಪಾದಗತಾಂಶ ಇವುಗಳಲ್ಲಿ ಪರಸ್ಪರ ಸುಖದುಃಖಾದ್ಯನು-ಸಂಧಾನ ಇಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆ '' ಎಂಬುದಾಗಿ ದೋಷ ಹೇಳಿದ್ದೇವೆಯಲ್ಲ ? ಎಂದರೆ, ಈ ಪಕ್ಷಕ್ಕೆ ವ್ಯಭಿಚಾರದೋಷ ಬರುವುದಿಲ್ಲ. ಏಕೆಂದರೆ- ''ಅಂಶ-ಅಂಶಿಗಳಲ್ಲಿ ಸ್ವರೂಪೈಕ್ಯ ಇದ್ದರೆ ಅಂಶಗಳಲ್ಲಿ ಪರಸ್ಪರ ಸುಖದುಃಖಾದ್ಯನುಸಂಧಾನ ಬರಲಿ '' ಎಂಬ ಆಪಾದನೆಗೆ ''ಯಜ್ಞದತ್ತನ ದೇಹವು ದೇವದತ್ತನ ಸುಖಕ್ಕೆ ಅವಚ್ಛೇದಕವಾಗಲಿ. ದೇವದತ್ತನ ದೇಹವು ಯಜ್ಞದತ್ತನ ಸುಖಕ್ಕೆ ಅವಚ್ಛೇದಕವಾಗಲಿ '' ಎಂಬುದಾಗಿ ಅರ್ಥ ಮಾಡಿದ್ದರೆ, ಆಗ ಯಜ್ಞದತ್ತನ ದೇಹವು ದೇವದತ್ತನ ಸುಖಕ್ಕೆ ಅವಚ್ಛೇದಕವಾಗಿಲ್ಲವಾದ್ದರಿಂದ, ಅದರಂತೆ ದೇವದತ್ತನ ದೇಹವು ಯಜ್ಞದತ್ತನ ಸುಖಕ್ಕೆ ಅವಚ್ಛೇದಕವಾಗಿಲ್ಲವಾದ್ದರಿಂದ ಪರರು ಹೇಳಿದ ವ್ಯಭಿಚಾರವು ಕೂಡುತ್ತಿತ್ತು. ಆದರೆ ನಾವು ಆಪಾದನೆಗೆ ಹಾಗೆ ಅರ್ಥ ಹೇಳುವುದೇ ಇಲ್ಲ.

ಕಿಂತು ''ತತ್ತದುಪಾಧಿಗತಚೈತನ್ಯಕ್ಕೆ ತತ್ತದುಪಾಧ್ಯವಚ್ಛಿನ್ನಸುಖಾದ್ಯನುಸಂಧಾನ ಬರಲಿ'' ಎಂದು ಆಪಾದನೆಯ ಅರ್ಥ. ಇಂತಹ ತತ್ತದುಪಾಧ್ಯವಚ್ಛಿನ್ನಸುಖಾದ್ಯನು-ಸಂಧಾನವು ಹಸ್ತಗತಾಂಶ-ಪಾದಗತಾಂಶಗಳಲ್ಲಿ ಇದ್ದೇ ಇದೆ. (ಹಸ್ತಗತ ಅಂಶಕ್ಕೆ ಆಗುತ್ತಿರುವ ಸುಖಾನುಸಂಧಾನವು ಪಾದಗತ ಅಂಶಕ್ಕೂ ಬಂದೇ ಬರುತ್ತದೆ. ಪಾದಗತ ಅಂಶಕ್ಕೆ ಆಗುತ್ತಿರುವ ದುಃಖಾನುಸಂಧಾನವು ಹಸ್ತಗತ ಅಂಶಕ್ಕೂ ಬಂದೇ ಬರುತ್ತದೆ.) ಒಂದುವೇಳೆ ಹಸ್ತಗತಾಂಶ-ಪಾದಗತಾಂಶ ಇವುಗಳಲ್ಲಿ ಪರಸ್ಪರ ಅನುಸಂಧಾನಗಳನ್ನು ಒಪ್ಪದಿದ್ದರೆ, ಪಾದತಲದಲ್ಲಿ ಸಿಕ್ಕಿಹಾಕಿಕೊಂಡ ಮುಳ್ಳನ್ನು ತೆಗೆಯುವುದಕ್ಕಾಗಿ ಹಸ್ತವ್ಯಾಪಾರ ನಡೆಯದೇ[126] ಹೋಗಬೇಕಾಗುತ್ತದೆ. ಆದ್ದರಿಂದ ಪಾದಗತಾಂಶ-

**126** ಕಾಲಿಗೆ ಮುಳ್ಳು ನೆಟ್ಟಿದಾಗ ಅದನ್ನು ತೆಗೆಯಲು ಹಸ್ತವು ಪ್ರವೃತ್ತವಾಗುತ್ತದೆ. ಇದು ಎಲ್ಲರ ಅನುಭವಸಿದ್ಧ. ಇದು ಹೇಗೆ ಸಾಧ್ಯ ? ಹಸ್ತಗತಾಂಶ-ಪಾದಗತಾಂಶಗಳಲ್ಲಿ ಪರಸ್ಪರ ಅನುಸಂಧಾನ ಒಪ್ಪಿದಾಗ ಮಾತ್ರ ಇದು ಸಾಧ್ಯ. ಆದ್ದರಿಂದ ಕಾಲಿನಲ್ಲಿ ಮುಳ್ಳು

ಹಸ್ತಗತಾಂಶಗಳಲ್ಲಿ ಪರಸ್ಪರ ಅನುಸಂಧಾನ ಬಂದೇ ಬರುವುದರಿಂದ 'ಅಂಶರಾದ ಜೀವರಿಗೆ ಪರಸ್ಪರ ಸುಖದುಃಖಾದ್ಯನುಸಂಧಾನವಾಗಲಿ' ಎಂಬ ಮೊದಲನೇ ಪಕ್ಷಕ್ಕೆ ಅಲ್ಲಿ ವ್ಯಭಿಚಾರದೋಷ ಬರುವುದಿಲ್ಲ.

ಇನ್ನು 'ಅಂಶಿಯಾದ ಬ್ರಹ್ಮನಿಗೆ ಸುಖದುಃಖಾದ್ಯನುಸಂಧಾನವಾಗಲಿ' ಎಂಬ ಎರಡನೇ ಪಕ್ಷಕ್ಕೂ ಯಾವ ದೋಷ ಬರುವುದಿಲ್ಲ. ''ಅಂಶಿಯಾದ ಬ್ರಹ್ಮನು ಅಭೋಕ್ತೃವಾಗಿದ್ದಾನೆ. ಅವನಿಗೆ ಭೋಗಾಪಾದನ ಮಾಡಲು ಬರುವುದಿಲ್ಲ'' ಎಂಬುದಾಗಿ ಈ ಪಕ್ಷಕ್ಕೆ ದೋಷ ಹೇಳಿದ್ದೇವೆಯಲ್ಲ ? ಎಂದರೆ, ಅದೂ ಸರಿಯಲ್ಲ.

ಏಕೆಂದರೆ - ನಿಮ್ಮ ಸಿದ್ಧಾಂತದಲ್ಲಿ ಅಂಶ-ಅಂಶಿಗಳಲ್ಲಿ (ಜೀವ-ಬ್ರಹ್ಮರಲ್ಲಿ) ಅಭೇದ ಒಪ್ಪಿದ್ದರಿಂದ, ಅಂಶಗಳು ಭೋಕ್ತೃವೆಂದು ಹೇಳಿದ ಮೇಲೆ ಅಂತಹ ಭೋಕ್ತೃಗಳಾದ ಅಂಶಗಳಿಂದ ಅಭಿನ್ನವಾದ ಅಂಶಿಯೂ ಭೋಕ್ತೃವೇ ಆಗಬೇಕು. ಹೊರತು ''ಅಂಶಗಳು ಭೋಕ್ತೃಗಳಾಗಿವೆ. ಆದರೆ ಅಂತಹ ಭೋಕ್ತೃಭೂತ ಅಂಶಗಳಿಂದ ಅಭಿನ್ನವಾದ ಅಂಶಿಯು ಮಾತ್ರ ಅಭೋಕ್ತೃ'' ಎನ್ನಲು ಸಾಧ್ಯವಿಲ್ಲ.

ಆದ್ದರಿಂದ ''ಅಂಶರಾದ ಜೀವರಿಗೆ ಅನುಸಂಧಾನವಾಗಲಿ'' ''ಅಂಶಿಯಾದ ಬ್ರಹ್ಮನಿಗೆ ಅನುಸಂಧಾನವಾಗಲಿ'' ಎಂಬುದಾಗಿ ಎರಡು ಪಕ್ಷಗಳನ್ನು ಅಂಗೀಕರಿಸಿದರೂ ಎರಡೂ ಪಕ್ಷಗಳಲ್ಲಿಯೂ ಯಾವ ದೋಷವೂ ಬರುವುದಿಲ್ಲ ಎಂದು ಅಭಿಪ್ರಾಯ.

**ಟೀಕಾ :- ಅತೀತಸುಖಾದಾವಿವ ಅನನುಸಂಧಾನಂ ಕಿಂ ನ ಸ್ಯಾತ್ ? ಇತಿ ಚೇತ್, ನ ಹಿ ವಯಂ ವರ್ತಮಾನತಯಾ ಅನುಭವಂ ಸ್ಮರಣಂ ವಾ ಅನುಸಂಧಾನಂ ಬ್ರೂಮಃ । ಕಿಂ ನಾಮ ? ಸ್ವೀಯತಯಾ ಅನುಭವಮಾತ್ರಮ್ । ನ ಚ ತನ್ನಾಸ್ತಿ ಅತೀತಸುಖಾದಾವಿತಿ ।**

**ಅನುವಾದ :-** ''ಒಂದುವೇಳೆ ಸ್ವರೂಪೈಕ್ಯ ಇರುವುದಾದರೆ ಆಗ ಪರಸ್ಪರ ಸುಖಾದ್ಯನುಸಂಧಾನ ಬರಬೇಕಾಗುತ್ತದೆ'' ಎಂಬುದಾಗಿ ಆಪಾದ್ಯಮಾನವಾದ ಸುಖಾದ್ಯಸಂಧಾನ ಎಂದರೆ = ಸುಖಾದಿಗಳ ವರ್ತಮಾನತಯಾ ಅನುಭವ ಅಥವಾ ಸುಖಾದಿಗಳ ವರ್ತಮಾನತಯಾ ಸ್ಮರಣ ಎಂದು ಹೇಳಬೇಕು. ಬೇರೆ ರೀತಿ ನಿರ್ವಚನ

---

ತೆಗೆಯಲು ತೊಡಗುವ ಹಸ್ತವ್ಯಾಪಾರವೇ ನಮಗೆ ತಿಳಿಸುತ್ತದೆ 'ಅಂಶಗಳಲ್ಲಿ ಪರಸ್ಪರ ಅನುಸಂಧಾವಿದೆ' ಎಂದು.

ಮಾಡಲು ಸಾಧ್ಯವಿಲ್ಲ. ಪ್ರಕೃತ ಆತ್ಮನಿಗೆ ಅತೀತಸುಖದ ಅನುಭವ ಅಥವಾ ಅತೀತಸುಖದ ಸ್ಮರಣೆ ಈಗ ಉಂಟಾಗುತ್ತದೆ. ಇಲ್ಲಿ ನಿಮ್ಮ ಆಪಾದನೆಗೆ ವ್ಯಭಿಚಾರ ಬರುತ್ತದೆ. ಕಾರಣ- ಅತೀತಸುಖವನ್ನು ಅನುಭವಿಸುವ ಆತ್ಮನಲ್ಲಿ ಸ್ವರೂಪೈಕ್ಯ ಇದ್ದರೂ ಸಹ ಅತೀತಸುಖಾದಿಗಳ ವರ್ತಮಾನತಯಾ ಅನುಭವ ಹಾಗೂ ಅತೀತಸುಖಾದಿಗಳ ವರ್ತಮಾನತಯಾ ಸ್ಮರಣೆಗಳು ಇಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆ.

ಅರ್ಥಾತ್ ಆತ್ಮನಲ್ಲಿ ಸ್ವರೂಪೈಕ್ಯ ಇದ್ದರೂ ಸಹ ಅತೀತಸುಖಾದಿಗಳ ವರ್ತಮಾನತಯಾ ಅನುಭವ- ಸ್ಮರಣೆಗಳು ಹೇಗೆ ಬರುವುದಿಲ್ಲವೋ, ಅದರಂತೆ ಜೀವರಲ್ಲಿ ಸ್ವರೂಪೈಕ್ಯ ಇದ್ದರೂ ಸಹ ಸುಖಾದ್ಯನುಸಂಧಾನ ಪರಸ್ಪರವಾಗಿ ಬರುವುದಿಲ್ಲ ಎಂದು ಹೇಳಬಹುದು ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ನಾವು ಅನುಸಂಧಾನ ಎಂದರೆ ಅತೀತಸುಖಾದಿಗಳ ವರ್ತಮಾನತಯಾ ಅನುಭವ ಅಥವಾ ವರ್ತಮಾನತಯಾ ಸ್ಮರಣೆ ಎಂಬುದಾಗಿ ಹೇಳುವುದಿಲ್ಲ. (ಒಂದುವೇಳೆ ಹಾಗೆ ಹೇಳುತ್ತಿದ್ದರೆ ವ್ಯಭಿಚಾರ ಬರುತ್ತಿತ್ತು.) ಕಿಂತು ಅನುಸಂಧಾನ ಎಂದರೆ ಸ್ವೀಯತಯಾ (ತನಗೆ ಸಂಬಂಧಿಸಿದ್ದವುಗಳಾಗಿ) ಸುಖಾದಿಗಳ ಕೇವಲ ಅನುಭವಮಾತ್ರವೇ ಆಗಿದೆ ಎನ್ನುತ್ತೇವೆ. ಅತೀತಸುಖಾದಿವಿಷಯದಲ್ಲಿ ಸ್ವೀಯತಯಾ ಆ ಅನುಭವಮಾತ್ರವು ಆತ್ಮನಿಗೆ ಇಲ್ಲ ಎನ್ನಲು ಸಾಧ್ಯವಿಲ್ಲ. ಕಿಂತು ಇದ್ದೇ ಇದೆ.

ಆದ್ದರಿಂದ ಆತ್ಮನಲ್ಲಿ ಸ್ವರೂಪೈಕ್ಯವೂ ಇದೆ. ಅತೀತಸುಖಾದಿಗಳ ಸ್ವೀಯತಯಾ ಅನುಭವಮಾತ್ರವೂ ಇದೆಯಾದ್ದರಿಂದ ವ್ಯಭಿಚಾರ ಬರುವುದಿಲ್ಲ ಎಂದು ಅಭಿಪ್ರಾಯ.

**ಟೀಕಾ :- ತದಯಂ ಪ್ರಸಂಗಾರ್ಥಃ । 'ಯದಿ ಜೀವಬ್ರಹ್ಮಣೀ ಜೀವಾಶ್ಚ ಸ್ವಭಾವತೋಽಭಿನ್ನಾಃ ಸ್ಯುಃ ತದಾ ಅನ್ಯೋನ್ಯಗತಸುಖದುಃಖಾದಿವಿಷಯೇ ಸ್ವೀಯತಯಾ ಅನುಭವವಂತಃ ಸ್ಯುಃ, ಯಥಾ ಸಂಪ್ರತಿಪನ್ನಃ' ಇತಿ ।**

**'ವಿಮತಾಃ ಪರಸ್ಪರಮೈಕ್ಯರಹಿತಾಃ ಚೇತನತ್ವೇ ಸತ್ಯನ್ಯೋನ್ಯಗತ-ಸುಖದುಃಖಾದ್ಯನುಸಂಧಾನಶೂನ್ಯತ್ವಾತ್ । ಯೋ ಯೇನೈಕ್ಯವಾನ್ ಚೇತನಃ ಸ ತತ್ಸುಖಾದ್ಯನುಸಂಧಾನವಾನ್ ಯಥಾ ಸಂಪ್ರತಿಪನ್ನಃ' ಇತ್ಯನುಮಾನಂ ವಾ ಅನೇನ ಸೂಚಿತಮ್ ।**

**ಚೈತನ್ಯಾವಚ್ಛಿನ್ನತ್ವಾತ್ ವ್ಯಾಪ್ತೇರ್ನ ಕಶ್ಚಿತ್ ಕ್ಷುದ್ರೋಪದ್ರವಃ ।**

**ಅನುವಾದ :-** 'ತದಯಂ' ಎನ್ನುವುದು ಒಂದೇ ಪದವಾಗಿದೆ. 'ಸ ಚಾಸೌ ಅಯಂ ಚ ತದಯಂ (ಸೋಽಯಂ)' ಎಂದು ವಿಗ್ರಹ. ಅಥವಾ 'ತತ್ + ಅಯಂ' ಎಂದು ಭಿನ್ನ ಭಿನ್ನ ಪದವಾಗಿದೆ. ಇಲ್ಲಿ ತತ್ ಎಂದರೆ, ತತ್ = ತಸ್ಮಾತ್ (ಆದ್ದರಿಂದ) ಎಂದು ಅರ್ಥ.

ಆದ್ದರಿಂದ-

**''ಸುಖದುಃಖಾದಿಭೋಗಶ್ಚ ಸ್ವರೂಪೈಕ್ಯೇ ನ ಭೇದತಃ ।''**

ಎಂಬ ಪ್ರಸಂಗರೂಪವಾದ ವಾಕ್ಯದ ಅಭಿಪ್ರಾಯ ಈ ರೀತಿಯಾಗಿದೆ :- ಒಂದುವೇಳೆ ಜೀವ-ಬ್ರಹ್ಮರು ಹಾಗೂ ಜೀವರು ಸ್ವಾಭಾವಿಕವಾಗಿ ಅಭಿನ್ನರಾಗಿದ್ದರೆ ಆಗ ಅನ್ಯೋನ್ಯಗತವಾದ ಸುಖದುಃಖಾದಿವಿಷಯದಲ್ಲಿ ಸ್ವೀಯತಯಾ ಅನುಭವ ಉಳ್ಳವರಾಗಬೇಕಾಗುತ್ತದೆ. (ದೇವದತ್ತನಿಗೆ ಸುಖಾನುಭವವಾದಾಗ ಆ ದೇವದತ್ತನ ಸುಖವು ತನಗೆ ಸಂಬಂಧಿಸಿದ್ದು ಎಂಬ ಅನುಭವ ಯಜ್ಞದತ್ತನಿಗೆ ಬರಬೇಕಾಗುತ್ತದೆ.) ಏಕೆಂದರೆ - ''ಯತ್ರ ಸ್ವಾಭಾವಿಕೋಽಭೇದಃ ತತ್ರ ಅನ್ಯೋನ್ಯಗತಸುಖಾದಿವಿಷಯೇ ಸ್ವೀಯತಯಾ ಅನುಭವವತ್ತ್ವಂ'' (ಎಲ್ಲಿ ಸ್ವಾಭಾವಿಕವಾಗಿ ಅಭೇದವಿದೆಯೋ ಅಲ್ಲಿ ಅನ್ಯೋನ್ಯಗತಸುಖಾದಿವಿಷಯದಲ್ಲಿ ಸ್ವೀಯತಯಾ ಅನುಭವವಿರುತ್ತದೆ) ಎಂದು ವ್ಯಾಪ್ತಿ ಇದೆ. ಅದಕ್ಕೆ ಸಂಪ್ರತಿಪನ್ನನಾದ ಏಕಾತ್ಮನು ದೇವದತ್ತನು ದೃಷ್ಟಾಂತನಾಗಿದ್ದಾನೆ. ದೇವದತ್ತನಲ್ಲಿ ತನ್ನಿಂದ ತನಗೆ ಸ್ವಾಭಾವಿಕೈಕ್ಯ ಇದೆ. ಅಂತೆಯೇ ಸ್ವಗತಸುಖಾದಿವಿಷಯದಲ್ಲಿ ಸ್ವೀಯತಯಾ ಅನುಭವವೂ ಇದೆ. ಅದರಂತೆಯೇ ಪ್ರಕೃತ ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವಾಭಾವಿಕೈಕ್ಯ ಇದ್ದದ್ದಾದರೆ ಅನ್ಯೋನ್ಯಗತಸುಖಾದಿವಿಷಯದಲ್ಲಿ ಸ್ವೀಯತಯಾ ಅನುಭವ ಉಳ್ಳವರಾಗಬೇಕಾಗುತ್ತದೆ ಎನ್ನುವುದು ''ಸುಖದುಃಖಾದಿಭೋಗಶ್ಚ'' ಎಂಬ ಮೂಲವಾಕ್ಯದ ಅಭಿಪ್ರಾಯವಾಗಿದೆ.

ಅಥವಾ ''ಸುಖದುಃಖಾದಿಭೋಗಶ್ಚ '' ಎಂಬ ಮೂಲವಾಕ್ಯದಿಂದ ಆಚಾರ್ಯರು ಅನುಮಾನವನ್ನು ಸೂಚಿಸುತ್ತಿದ್ದಾರೆ -

''ವಿಮತಾಃ, ಪರಸ್ಪರಂ ಐಕ್ಯರಹಿತಾಃ, ಚೇತನತ್ವೇ ಸತಿ ಅನ್ಯೋನ್ಯಗತಸುಖ-ದುಃಖಾದ್ಯನುಸಂಧಾನಶೂನ್ಯತ್ವಾತ್ । ''

ಮಾಡಲು ಸಾಧ್ಯವಿಲ್ಲ. ಪ್ರಕೃತ ಆತ್ಮನಿಗೆ ಅತೀತಸುಖದ ಅನುಭವ ಅಥವಾ ಅತೀತಸುಖದ ಸ್ಮರಣೆ ಈಗ ಉಂಟಾಗುತ್ತದೆ. ಇಲ್ಲಿ ನಿಮ್ಮ ಆಪಾದನೆಗೆ ವ್ಯಭಿಚಾರ ಬರುತ್ತದೆ. ಕಾರಣ- ಅತೀತಸುಖವನ್ನು ಅನುಭವಿಸುವ ಆತ್ಮನಲ್ಲಿ ಸ್ವರೂಪೈಕ್ಯ ಇದ್ದರೂ ಸಹ ಅತೀತಸುಖಾದಿಗಳ ವರ್ತಮಾನತಯಾ ಅನುಭವ ಹಾಗೂ ಅತೀತಸುಖಾದಿಗಳ ವರ್ತಮಾನತಯಾ ಸ್ಮರಣೆಗಳು ಇಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆ.

ಅರ್ಥಾತ್ ಆತ್ಮನಲ್ಲಿ ಸ್ವರೂಪೈಕ್ಯ ಇದ್ದರೂ ಸಹ ಅತೀತಸುಖಾದಿಗಳ ವರ್ತಮಾನತಯಾ ಅನುಭವ- ಸ್ಮರಣೆಗಳು ಹೇಗೆ ಬರುವುದಿಲ್ಲವೋ, ಅದರಂತೆ ಜೀವರಲ್ಲಿ ಸ್ವರೂಪೈಕ್ಯ ಇದ್ದರೂ ಸಹ ಸುಖಾದ್ಯನುಸಂಧಾನ ಪರಸ್ಪರವಾಗಿ ಬರುವುದಿಲ್ಲ ಎಂದು ಹೇಳಬಹುದು ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ನಾವು ಅನುಸಂಧಾನ ಎಂದರೆ ಅತೀತಸುಖಾದಿಗಳ ವರ್ತಮಾನತಯಾ ಅನುಭವ ಅಥವಾ ವರ್ತಮಾನತಯಾ ಸ್ಮರಣೆ ಎಂಬುದಾಗಿ ಹೇಳುವುದಿಲ್ಲ. (ಒಂದುವೇಳೆ ಹಾಗೆ ಹೇಳುತ್ತಿದ್ದರೆ ವ್ಯಭಿಚಾರ ಬರುತ್ತಿತ್ತು.) ಕಿಂತು ಅನುಸಂಧಾನ ಎಂದರೆ ಸ್ವೀಯತಯಾ (ತನಗೆ ಸಂಬಂಧಿಸಿದ್ದವುಗಳಾಗಿ) ಸುಖಾದಿಗಳ ಕೇವಲ ಅನುಭವಮಾತ್ರವೇ ಆಗಿದೆ ಎನ್ನುತ್ತೇವೆ. ಅತೀತಸುಖಾದಿವಿಷಯದಲ್ಲಿ ಸ್ವೀಯತಯಾ ಆ ಅನುಭವಮಾತ್ರವು ಆತ್ಮನಿಗೆ ಇಲ್ಲ ಎನ್ನಲು ಸಾಧ್ಯವಿಲ್ಲ. ಕಿಂತು ಇದ್ದೇ ಇದೆ.

ಆದ್ದರಿಂದ ಆತ್ಮನಲ್ಲಿ ಸ್ವರೂಪೈಕ್ಯವೂ ಇದೆ. ಅತೀತಸುಖಾದಿಗಳ ಸ್ವೀಯತಯಾ ಅನುಭವಮಾತ್ರವೂ ಇದೆಯಾದ್ದರಿಂದ ವ್ಯಭಿಚಾರ ಬರುವುದಿಲ್ಲ ಎಂದು ಅಭಿಪ್ರಾಯ.

**ಟೀಕಾ :- ತದಯಂ ಪ್ರಸಂಗಾರ್ಥಃ । 'ಯದಿ ಜೀವಬ್ರಹ್ಮಣೀ ಜೀವಾಶ್ಚ ಸ್ವಭಾವತೋಽಭಿನ್ನಾಃ ಸ್ಯುಃ ತದಾ ಅನ್ಯೋನ್ಯಗತಸುಖದುಃಖಾದಿವಿಷಯೇ ಸ್ವೀಯತಯಾ ಅನುಭವವಂತಃ ಸ್ಯುಃ, ಯಥಾ ಸಂಪ್ರತಿಪನ್ನಃ' ಇತಿ ।**

**'ವಿಮತಾಃ ಪರಸ್ಪರಮೈಕ್ಯರಹಿತಾಃ ಚೇತನತ್ವೇ ಸತ್ಯನ್ಯೋನ್ಯಗತ-ಸುಖದುಃಖಾದ್ಯನುಸಂಧಾನಶೂನ್ಯತ್ವಾತ್ । ಯೋ ಯೇನೈಕ್ಯವಾನ್ ಚೇತನಃ ಸ ತತ್ಸುಖಾದ್ಯನುಸಂಧಾನವಾನ್ ಯಥಾ ಸಂಪ್ರತಿಪನ್ನಃ' ಇತ್ಯನುಮಾನಂ ವಾ ಅನೇನ ಸೂಚಿತಮ್ ।**

**ಚೈತನ್ಯಾವಚ್ಛಿನ್ನತ್ವಾತ್ ವ್ಯಾಪ್ತೇರ್ನ ಕಶ್ಚಿತ್ ಕ್ಷುದ್ರೋಪದ್ರವಃ ।**

**ಅನುವಾದ :-** 'ತದಯಂ' ಎನ್ನುವುದು ಒಂದೇ ಪದವಾಗಿದೆ. 'ಸ ಚಾಸೌ ಅಯಂ ಚ ತದಯಂ (ಸೋಽಯಂ)' ಎಂದು ವಿಗ್ರಹ. ಅಥವಾ 'ತತ್ + ಅಯಂ' ಎಂದು ಭಿನ್ನ ಭಿನ್ನ ಪದವಾಗಿದೆ. ಇಲ್ಲಿ ತತ್ ಎಂದರೆ, ತತ್ = ತಸ್ಮಾತ್ (ಆದ್ದರಿಂದ) ಎಂದು ಅರ್ಥ.

ಆದ್ದರಿಂದ-

**''ಸುಖದುಃಖಾದಿಭೋಗಶ್ಚ ಸ್ವರೂಪೈಕ್ಯೇ ನ ಭೇದತಃ ।''**

ಎಂಬ ಪ್ರಸಂಗರೂಪವಾದ ವಾಕ್ಯದ ಅಭಿಪ್ರಾಯ ಈ ರೀತಿಯಾಗಿದೆ :- ಒಂದುವೇಳೆ ಜೀವ-ಬ್ರಹ್ಮರು ಹಾಗೂ ಜೀವರು ಸ್ವಾಭಾವಿಕವಾಗಿ ಅಭಿನ್ನರಾಗಿದ್ದರೆ ಆಗ ಅನ್ಯೋನ್ಯಗತವಾದ ಸುಖದುಃಖಾದಿವಿಷಯದಲ್ಲಿ ಸ್ವೀಯತಯಾ ಅನುಭವ ಉಳ್ಳವರಾಗಬೇಕಾಗುತ್ತದೆ. (ದೇವದತ್ತನಿಗೆ ಸುಖಾನುಭವವಾದಾಗ ಆ ದೇವದತ್ತನ ಸುಖವು ತನಗೆ ಸಂಬಂಧಿಸಿದ್ದು ಎಂಬ ಅನುಭವ ಯಜ್ಞದತ್ತನಿಗೆ ಬರಬೇಕಾಗುತ್ತದೆ.) ಏಕೆಂದರೆ - ''ಯತ್ರ ಸ್ವಾಭಾವಿಕೋಽಭೇದಃ ತತ್ರ ಅನ್ಯೋನ್ಯಗತಸುಖಾದಿವಿಷಯೇ ಸ್ವೀಯತಯಾ ಅನುಭವವತ್ವಂ'' (ಎಲ್ಲಿ ಸ್ವಾಭಾವಿಕವಾಗಿ ಅಭೇದವಿದೆಯೋ ಅಲ್ಲಿ ಅನ್ಯೋನ್ಯಗತಸುಖಾದಿವಿಷಯದಲ್ಲಿ ಸ್ವೀಯತಯಾ ಅನುಭವವಿರುತ್ತದೆ) ಎಂದು ವ್ಯಾಪ್ತಿ ಇದೆ. ಅದಕ್ಕೆ ಸಂಪ್ರತಿಪನ್ನನಾದ ಏಕಾತ್ಮನು ದೇವದತ್ತನು ದೃಷ್ಟಾಂತನಾಗಿದ್ದಾನೆ. ದೇವದತ್ತನಲ್ಲಿ ತನ್ನಿಂದ ತನಗೆ ಸ್ವಾಭಾವಿಕೈಕ್ಯ ಇದೆ. ಅಂತೆಯೇ ಸ್ವಗತಸುಖಾದಿವಿಷಯದಲ್ಲಿ ಸ್ವೀಯತಯಾ ಅನುಭವವೂ ಇದೆ. ಅದರಂತೆಯೇ ಪ್ರಕೃತ ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವಾಭಾವಿಕೈಕ್ಯ ಇದ್ದದ್ದಾದರೆ ಅನ್ಯೋನ್ಯಗತಸುಖಾದಿವಿಷಯದಲ್ಲಿ ಸ್ವೀಯತಯಾ ಅನುಭವ ಉಳ್ಳವರಾಗಬೇಕಾಗುತ್ತದೆ ಎನ್ನುವುದು ''ಸುಖದುಃಖಾದಿಭೋಗಶ್ಚ'' ಎಂಬ ಮೂಲವಾಕ್ಯದ ಅಭಿಪ್ರಾಯವಾಗಿದೆ.

ಅಥವಾ ''ಸುಖದುಃಖಾದಿಭೋಗಶ್ಚ '' ಎಂಬ ಮೂಲವಾಕ್ಯದಿಂದ ಆಚಾರ್ಯರು ಅನುಮಾನವನ್ನು ಸೂಚಿಸುತ್ತಿದ್ದಾರೆ -

''ವಿಮತಾಃ, ಪರಸ್ಪರಂ ಐಕ್ಯರಹಿತಾಃ, ಚೇತನತ್ವೇ ಸತಿ ಅನ್ಯೋನ್ಯಗತಸುಖ-ದುಃಖಾದ್ಯನುಸಂಧಾನಶೂನ್ಯತ್ವಾತ್ । ''

(ಜೀವಬ್ರಹ್ಮರು ಹಾಗೂ ಜೀವರು, ಪರಸ್ಪರ ಐಕ್ಯರಹಿತರಾಗಿದ್ದಾರೆ, ಚೇತನರಾಗಿದ್ದು ಅನ್ಯೋನ್ಯಗತಸುಖದುಃಖಾದ್ಯನುಸಂಧಾನಶೂನ್ಯರಾದ್ದರಿಂದ.)

ಈ ಅನುಮಾನದಲ್ಲಿ ವ್ಯತಿರೇಕವ್ಯಾಪ್ತಿಯನ್ನು ಹೇಳುತ್ತಾರೆ -

''ಯೋ ಯೇನೈಕ್ಯವಾನ್ ಚೇತನಃ ಸ ತತ್ಸುಖಾದ್ಯನುಸಂಧಾನವಾನ್, ಯಥಾ ಸಂಪ್ರತಿಪನ್ನಃ ।'' ಯಾವನು ಯಾವನಿಂದ ಐಕ್ಯ ಉಳ್ಳ ಚೇತನನಾಗಿರುತ್ತಾನೆಯೋ ಅವನು ಅವನ ಸುಖಾದ್ಯನುಸಂಧಾನ ಉಳ್ಳವನಾಗಿರುತ್ತಾನೆ. ಅದಕ್ಕೆ ಸಂಪ್ರತಿಪನ್ನನಾದ ಏಕಾತ್ಮ ದೇವದತ್ತನೇ ದೃಷ್ಟಾಂತ. ದೇವದತ್ತನು ತನ್ನಿಂದ ತಾನು ಐಕ್ಯ ಉಳ್ಳವನಾದ್ದರಿಂದ ಸ್ವಗತಸುಖಾದ್ಯನುಸಂಧಾನ ಉಳ್ಳವನಾಗಿದ್ದಾನೆ.

ಘಟಕ್ಕೆ ಘಟದಿಂದ ಐಕ್ಯ ಇದ್ದರೂ ಸಹ ಸುಖದುಃಖಾದ್ಯನುಸಂಧಾನ ಇಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆಯಲ್ಲ ? ಎಂದು ಶಂಕಿಸುವುದು ಸರಿಯಲ್ಲ. ಕಾರಣ ವ್ಯಾಪ್ತಿಯು ಚೈತನ್ಯಾವಚ್ಛಿನ್ನವಾದ್ದರಿಂದ (ಚೇತನತ್ವೇ ಸತಿ ಯೋ ಯೇನೈಕ್ಯವಾನ್ ಎಂದು ವ್ಯಾಪ್ತಿಯು ಅಭಿಪ್ರೇತವಾದ್ದರಿಂದ) ಅಚೇತನವಾದ ಘಟದಲ್ಲಿ ವ್ಯಭಿಚಾರಶಂಕೆ ಉಪಪನ್ನವಾಗುವುದಿಲ್ಲ.

ಆದ್ದರಿಂದ ''ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವಾಭಾವಿಕೈಕ್ಯ ಇರುವುದಾಗಿದ್ದರೆ ಪರಸ್ಪರ ಸುಖದುಃಖಾದ್ಯನುಸಂಧಾನ ಉಳ್ಳವರಾಗಬೇಕಿತ್ತು. ಈಗಲಾದರೋ ಪರಸ್ಪರ ಸುಖದುಃಖಾದ್ಯನುಸಂಧಾನ ಇಲ್ಲವಾದ್ದರಿಂದ ಜೀವಬ್ರಹ್ಮರು ಹಾಗೂ ಜೀವರು ಸ್ವಾಭಾವಿಕೈಕ್ಯರಹಿತರಾಗಿದ್ದಾರೆ'' ಎಂಬುದಾಗಿ ಅನುಮಾನವನ್ನಾದರೂ ಆಚಾರ್ಯರು ಸೂಚಿಸುತ್ತಿದ್ದಾರೆ ಎಂದು ಅಭಿಪ್ರಾಯ.

**ಅವತಾರಿಕೆ :-** 'ಸ್ವರೂಪೈಕ್ಯೇ ಅನುಸಂಧಾನಂ ಸ್ಯಾತ್' (ಸ್ವರೂಪೈಕ್ಯ ಇರುವುದಾದರೆ ಪರಸ್ಪರ ಸುಖದುಃಖಾದ್ಯನುಸಂಧಾನ ಬರಲಿ) ಎಂಬ ನಮ್ಮ ತರ್ಕದಲ್ಲಿ ಉಪಾಧಿಯನ್ನು ಶಂಕಿಸುತ್ತಾರೆ -

**ಟೀಕಾ :- ನನು ದೃಷ್ಟಾಂತಸ್ಥಲೇ ಅನುಸಂಧಾನಸ್ಯ ಉಪಾಧಿಭೇದಾಭಾವಃ ಪ್ರಯೋಜಕಃ, ನ ತು ಸ್ವರೂಪೈಕ್ಯಮಾತ್ರಂ ಪ್ರಕೃತೇ ತು ಉಪಾಧಿಭೇದಸದ್ಭಾವಾತ್ ಕಥಮನುಸಂಧಾನಪ್ರಸಂಗಃ ?**

**ಕಥಂ ಚ ಅನ್ಯನಿಮಿತ್ತಸ್ಯ ಅನುಸಂಧಾನಸ್ಯಾಭಾವಾತ್ ಸ್ವರೂಪೈಕ್ಯಾ-ಭಾವಾನುಮಾನಂ ಇತಿ ।**

**ಅನುವಾದ :-** ''ಜೀವ-ಬ್ರಹ್ಮರು ಹಾಗೂ ಜೀವರು ಸ್ವಾಭಾವಿಕವಾಗಿ ಅಭಿನ್ನರಾಗಿರುವುದಾದರೆ ಆಗ ಪರಸ್ಪರ ಸುಖಾದ್ಯನುಸಂಧಾನ ಉಳ್ಳವರಾಗಲಿ. ದೃಷ್ಟಾಂತನಾದ ದೇವದತ್ತನು ತನ್ನಿಂದ ತನಗೆ ಸ್ವರೂಪೈಕ್ಯ ಉಳ್ಳವನಾದ್ದರಿಂದ ಅನುಸಂಧಾನ ಉಳ್ಳವನಾಗಿದ್ದಾನೆ'' ಎಂಬುದಾಗಿ ತರ್ಕ ಮಾಡುವುದು ಸರಿಯಲ್ಲ. ಏಕೆಂದರೆ - ಇದಕ್ಕೆ ಉಪಾಧಿಭೇದಾಭಾವ ಎಂಬ ಉಪಾಧಿದೋಷ ಬರುತ್ತದೆ.

ಅಂದರೆ - ದೃಷ್ಟಾಂತನಾದ ದೇವದತ್ತನಲ್ಲಿ ಸುಖಾದ್ಯನುಸಂಧಾನವು ಕೇವಲ ಸ್ವರೂಪೈಕ್ಯ ಇದ್ದದ್ದಕ್ಕಾಗಿ ಆಗುವುದಿಲ್ಲ. ಕಿಂತು (ಉಪಾಧಿಭೇದ ಇಲ್ಲದ್ದರಿಂದ) ಉಪಾಧಿಭೇದಾಭಾವವೂ ಇರುವುದರಿಂದ ಆಗುತ್ತದೆ. ಅರ್ಥಾತ್ ಸುಖಾದ್ಯನುಸಂಧಾನವನ್ನು ಕುರಿತು ಕೇವಲ ಸ್ವರೂಪೈಕ್ಯ ಪ್ರಯೋಜಕವಲ್ಲ. ಕಿಂತು ಉಪಾಧಿಭೇದಾಭಾವವೂ ಪ್ರಯೋಜಕ. (ಉಪಾಧಿಭೇದಾಭಾವವಿಶಿಷ್ಟಸ್ವರೂಪೈಕ್ಯ ಪ್ರಯೋಜಕ.) ಪ್ರಕೃತದಲ್ಲಿ ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವರೂಪೈಕ್ಯ ಇದ್ದರೂ ಸಹ ಉಪಾಧಿಭೇದಾಭಾವ-[127] ವಿಶಿಷ್ಟಸ್ವರೂಪೈಕ್ಯ ಎಂಬ ಪ್ರಯೋಜಕ ಇಲ್ಲ. (ದೇಹ- ಅಂತಃಕರಣಾದಿರೂಪವಾದ ಉಪಾಧಿಗಳು ಭಿನ್ನ ಭಿನ್ನವಾಗಿವೆ.) ಆದ್ದರಿಂದ ಸುಖಾದ್ಯನುಸಂಧಾನ ಇಲ್ಲ. ಅಂದಮೇಲೆ (ಕೇವಲ ಸ್ವರೂಪೈಕ್ಯ ಪ್ರಯೋಜಕವಲ್ಲ ಎಂದಮೇಲೆ) ''ಸ್ವರೂಪೈಕ್ಯೇ ಅನುಸಂಧಾನಂ ಸ್ಯಾತ್'' ಎಂಬುದಾಗಿ ತರ್ಕ ಮಾಡುವುದು ಸರಿಯಲ್ಲ.

---

127 ಕೇವಲ ಉಪಾಧಿಭೇದಾಭಾವ ಒಂದೇ ಪ್ರಯೋಜಕ ಎಂದು ಹೇಳಿದರೆ ತಾಯಿಗೂ ಗರ್ಭಸ್ಥಶಿಶುವಿಗೂ ಉಪಾಧಿಭೇದ ಇಲ್ಲದ್ದರಿಂದ ಉಪಾಧಿಭೇದಾಭಾವ ಎಂಬ ಪ್ರಯೋಜಕ ಇರುವುದರಿಂದ ಗರ್ಭಸ್ಥಶಿಶುವಿಗೂ ಸಹ ಮಾತೃಗತಸುಖಾದ್ಯನುಸಂಧಾನ ಬರಬೇಕಾಗುತ್ತದೆ. ಆದ್ದರಿಂದ ಕೇವಲ ಉಪಾಧಿಭೇದಾಭಾವ ಒಂದೇ ಪ್ರಯೋಜಕವಲ್ಲ. ಕಿಂತು ಸ್ವರೂಪೈಕ್ಯವೂ ಪ್ರಯೋಜಕ. ಗರ್ಭಸ್ಥಶಿಶುವಿಗೆ ತಾಯಿಯಿಂದ ಸ್ವರೂಪೈಕ್ಯ ಇಲ್ಲವಾದ್ದರಿಂದ ಅನುಸಂಧಾನಪ್ರಸಕ್ತಿ ಇಲ್ಲ. ಆದ್ದರಿಂದ ಉಪಾಧಿಭೇದಾಭಾವವಿಶಿಷ್ಟಸ್ವರೂಪೈಕ್ಯ ಪ್ರಯೋಜಕವಾಗಿದೆ ಎಂದು ಭಾವ.

ಮತ್ತು -

''ವಿಮತಾಃ ಪರಸ್ಪರಂ ಐಕ್ಯರಹಿತಾಃ ಪರಸ್ಪರಸುಖಾದ್ಯನುಸಂಧಾನಶೂನ್ಯತ್ವಾತ್'' ಎಂಬ ಅನುಮಾನವೂ ಸರಿಯಲ್ಲ.

ಏಕೆಂದರೆ - ಅನುಸಂಧಾನವನ್ನು ಕುರಿತು ಸ್ವರೂಪೈಕ್ಯ ಪ್ರಯೋಜಕವಲ್ಲ. ಕಿಂತು ಉಪಾಧಿಭೇದಾಭಾವ ಪ್ರಯೋಜಕ ಎಂದು ಹೇಳಿದ್ದರಿಂದ, ಅನುಸಂಧಾನಾಭಾವದಿಂದ ಉಪಾಧಿಭೇದಾಭಾವದ ಅಭಾವವನ್ನು ಸಾಧಿಸುವುದು ಸೂಕ್ತವಾಗುತ್ತದೆಯೇ ಹೊರತು ಅನುಸಂಧಾನಾಭಾವದಿಂದ ಸ್ವರೂಪೈಕ್ಯಾಭಾವವನ್ನು ಸಾಧಿಸುವುದು ಸೂಕ್ತವಲ್ಲ. ಅರ್ಥಾತ್ ''ಸುಖಾದ್ಯನುಸಂಧಾನಶೂನ್ಯತ್ವಮಸ್ತು ಐಕ್ಯರಾಹಿತ್ಯಂ ಮಾಸ್ತು'' ಎಂಬುದಾಗಿ ನಿಮ್ಮ ಅನುಮಾನಕ್ಕೆ ಅಪ್ರಯೋಜಕತಾಶಂಕೆ ಬರುತ್ತದೆ.

ಈ ರೀತಿಯಾಗಿ ತರ್ಕಕ್ಕೆ ಉಪಾಧಿದೋಷವನ್ನು, ಅನುಮಾನಕ್ಕೆ ಅಪ್ರಯೋಜಕತಾದೋಷವನ್ನು ಶಂಕಿಸುತ್ತಾರೆ.

**ಟೀಕಾ :- ಅತ ಆಹ -**

**ಮೂಲ :- ..... ಉಪಾಧಿಭೇದೇಽಪಿ ......।**

**ಪೂರ್ವವಾಕ್ಯೇನ ಸಂಬಂಧಃ । ಅನೇನ 'ಅನುಸಂಧಾನಂ ಪ್ರತಿ ಉಪಾಧಿಭೇದಾಭಾವೋ ನ ಪ್ರಯೋಜಕಃ । ಕಿಂ ನಾಮ ? ಸ್ವರೂಪೈಕ್ಯಮೇವ' ಇತ್ಯುಕ್ತಂ ಭವತಿ । ತತ್ಕುತೋ ಜ್ಞಾಯತೇ ? ಇತ್ಯತ ಆಹ -**

**ಮೂಲ :- ..... ಹಸ್ತಪಾದಾದಿಗೋ ಯಥಾ ।**

**ಅಸ್ಯಾಪಿ ಪೂರ್ವೇಣೈವ ಸಂಬಂಧಃ । 'ಸ್ವರೂಪೈಕ್ಯೇ ಸತಿ ಹಸ್ತಪಾದಾದ್ಯುಪಾಧೀನಾಂ ಭೇದೇ ಸತ್ಯಪಿ ಅನುಸಂಧಾನದರ್ಶನಾತ್ ತದೇವ ಪ್ರಯೋಜಕಂ ನೋಪಾಧಿಭೇದಾಭಾವಃ' ಇತಿ ಜ್ಞಾಯತೇ । ಅನ್ಯಥಾ ಉಪಾಧಿಭೇದಾತ್ ಹಸ್ತಪಾದಾದಿಗತಸುಖಾದಿಭೋಗ ಏಕಸ್ಯ ನ ಸ್ಯಾತ್ । ಅತಃ 'ಉಪಾಧಿಭೇದೇಽಪಿ ಹಸ್ತಪಾದಾದಿಗತಸುಖಾದಿಭೋಗವತ್ ಸ್ವರೂಪೈಕ್ಯೇ ಸರ್ವೋಪಾಧಿಗತೋಽಸೌ ಭೇದೇನ ನ ದೃಶ್ಯೇತ' ಇತಿ ।**

**ಅನುವಾದ :-** ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

**ಮೂಲ :- .... ಉಪಾಧಿಭೇದೇऽಪಿ ..... ।**

**ಮೂಲಾರ್ಥ :- ಉಪಾಧಿಭೇದ ಇದ್ದಾಗಲೂ ಸಹ ಸ್ವರೂಪೈಕ್ಯವಿದ್ದರೆ ಸುಖದುಃಖಾದಿಭೋಗವು ಭಿನ್ನಭಿನ್ನವಾಗಿ ಕಂಡಿಲ್ಲ. ಉಪಾಧಿಭೇದವಿದ್ದರೂ ಸಹ ಸ್ವರೂಪೈಕ್ಯವಿದ್ದರೆ ಪರಸ್ಪರ ಸುಖಾದ್ಯನುಸಂಧಾನವು ಕಂಡಿದೆ ಎಂದು ಭಾವ.**

ಈ ಮೂಲಕ್ಕೆ 'ಸುಖದುಃಖಾದಿಭೋಗಶ್ಚ ......' ಎಂಬ ಪೂರ್ವವಾಕ್ಯದಿಂದ ಸಂಬಂಧ ತಿಳಿಯಬೇಕು. ''ಉಪಾಧಿಭೇದೇऽಪಿ ಸುಖದುಃಖಾದಿಭೋಗೋ ಭೇದೇನ ನ ದೃಶ್ಯಃ । ಸುಖಾದ್ಯನುಸಂಧಾನಮಸ್ತೀತಿ ಯಾವತ್'' ಎಂಬುದಾಗಿ ಅನ್ವಯ ಮತ್ತು ಅರ್ಥ ತಿಳಿಯಬೇಕು ಎಂದು ಭಾವ.

ಈ ರೀತಿ ಹೇಳುವುದರಿಂದ ''ಅನುಸಂಧಾನ ಇದ್ದರೂ ಸಹ ಉಪಾಧಿ ಭೇದಾಭಾವ ಇಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆ. ಆದ್ದರಿಂದ ಅನುಸಂಧಾನವನ್ನು ಕುರಿತು ಉಪಾಧಿಭೇದಾಭಾವವು ಪ್ರಯೋಜಕವಲ್ಲ. ಕಿಂತು ಸ್ವರೂಪೈಕ್ಯವೇ ಪ್ರಯೋಜಕ'' ಎಂದು ಹೇಳಿದಂತಾಗುತ್ತದೆ. ವ್ಯಭಿಚಾರ ಬರುವುದರಿಂದ ಉಪಾಧಿ ಭೇದಾಭಾವವು ಪ್ರಯೋಜಕವಲ್ಲ ಎನ್ನುವುದಾದ್ದರೆ, ಎಲ್ಲಿ ವ್ಯಭಿಚಾರ ಬರುವುದರಿಂದ ಪ್ರಯೋಜಕವಲ್ಲ ಎನ್ನುತ್ತೀರಿ ? ಎಂದರೆ, ಅದಕ್ಕೆ ಹೇಳುತ್ತಾರೆ -

**ಮೂಲ - ..... ಹಸ್ತಪಾದಾದಿಗೋ ಯಥಾ ।**

**ಮೂಲಾರ್ಥ - ಯಾವ ರೀತಿಯಾಗಿ ಹಸ್ತಪಾದಾದಿ ಉಪಾಧಿಭೇದವಿದ್ದರೂ ಸ್ವರೂಪೈಕ್ಯವಿದ್ದದ್ದರಿಂದ ಸುಖಾದ್ಯನುಸಂಧಾನ ಕಂಡಿದೆಯೋ ಅದರಂತೆಯೇ ದೇಹಾದಿ ಉಪಾಧಿಭೇದವಿದ್ದರೂ ಜೀವರಲ್ಲಿ ಸ್ವರೂಪೈಕ್ಯವಿರುವುದಾದರೆ ಪರಸ್ಪರ ಸುಖಾದ್ಯನುಸಂಧಾನ ಬರಬೇಕಾಗುತ್ತದೆ ಎಂದು ಭಾವ.**

ಈ ವಾಕ್ಯಕ್ಕೂ ಸಹ ''ಸುಖದುಃಖಾದಿಭೋಗಶ್ಚ ....'' ಎಂಬ ಪೂರ್ವವಾಕ್ಯದಿಂದಲೇನೇ ಸಂಬಂಧ ತಿಳಿಯುವುದು.

ಸ್ವರೂಪೈಕ್ಯ ಇದ್ದಾಗ ಹಸ್ತಪಾದಾದಿ ಉಪಾಧಿಗಳಲ್ಲಿ ಭೇದ ಇದ್ದರೂ ಸಹ (ಉಪಾಧಿಭೇದಾಭಾವವು ಇಲ್ಲದಿದ್ದರೂ ಸಹ) ಅನುಸಂಧಾನ ಕಂಡಿದ್ದರಿಂದ, ಅನುಸಂಧಾನವನ್ನು ಕುರಿತು ಸ್ವರೂಪೈಕ್ಯವೇ ಪ್ರಯೋಜಕ ಹೊರತು ಉಪಾಧಿ ಭೇದಾಭಾವವು ಪ್ರಯೋಜಕವಲ್ಲ ಎಂದು ತಿಳಿಯುತ್ತದೆ.

ಮತ್ತು -

''ವಿಮತಾಃ ಪರಸ್ಪರಂ ಐಕ್ಯರಹಿತಾಃ ಪರಸ್ಪರಸುಖಾದ್ಯನುಸಂಧಾನಶೂನ್ಯ-ತ್ವಾತ್'' ಎಂಬ ಅನುಮಾನವೂ ಸರಿಯಲ್ಲ.

ಏಕೆಂದರೆ - ಅನುಸಂಧಾನವನ್ನು ಕುರಿತು ಸ್ವರೂಪೈಕ್ಯ ಪ್ರಯೋಜಕವಲ್ಲ. ಕಿಂತು ಉಪಾಧಿಭೇದಾಭಾವ ಪ್ರಯೋಜಕ ಎಂದು ಹೇಳಿದ್ದರಿಂದ, ಅನುಸಂಧಾನಾಭಾವ ದಿಂದ ಉಪಾಧಿಭೇದಾಭಾವದ ಅಭಾವವನ್ನು ಸಾಧಿಸುವುದು ಸೂಕ್ತವಾಗುತ್ತದೆಯೇ ಹೊರತು ಅನುಸಂಧಾನಾಭಾವದಿಂದ ಸ್ವರೂಪೈಕ್ಯಾಭಾವವನ್ನು ಸಾಧಿಸುವುದು ಸೂಕ್ತವಲ್ಲ. ಅರ್ಥಾತ್ ''ಸುಖಾದ್ಯನುಸಂಧಾನಶೂನ್ಯತ್ವಮಸ್ತು ಐಕ್ಯರಾಹಿತ್ಯಂ ಮಾಸ್ತು'' ಎಂಬುದಾಗಿ ನಿಮ್ಮ ಅನುಮಾನಕ್ಕೆ ಅಪ್ರಯೋಜಕತಾಶಂಕೆ ಬರುತ್ತದೆ.

ಈ ರೀತಿಯಾಗಿ ತರ್ಕಕ್ಕೆ ಉಪಾಧಿದೋಷವನ್ನು, ಅನುಮಾನಕ್ಕೆ ಅಪ್ರಯೋಜಕತಾ-ದೋಷವನ್ನು ಶಂಕಿಸುತ್ತಾರೆ.

**ಟೀಕಾ :- ಅತ ಆಹ -**

**ಮೂಲ :- ..... ಉಪಾಧಿಭೇದೇಽಪಿ ......।**

**ಪೂರ್ವವಾಕ್ಯೇನ ಸಂಬಂಧಃ । ಅನೇನ 'ಅನುಸಂಧಾನಂ ಪ್ರತಿ ಉಪಾಧಿ ಭೇದಾಭಾವೋ ನ ಪ್ರಯೋಜಕಃ । ಕಿಂ ನಾಮ ? ಸ್ವರೂಪೈಕ್ಯಮೇವ' ಇತ್ಯುಕ್ತಂ ಭವತಿ । ತತ್ಕುತೋ ಜ್ಞಾಯತೇ ? ಇತ್ಯತ ಆಹ -**

**ಮೂಲ :- ..... ಹಸ್ತಪಾದಾದಿಗೋ ಯಥಾ ।**

**ಅಸ್ಯಾಪಿ ಪೂರ್ವೇಣೈವ ಸಂಬಂಧಃ । 'ಸ್ವರೂಪೈಕ್ಯೇ ಸತಿ ಹಸ್ತಪಾದಾ-ದ್ಯುಪಾಧೀನಾಂ ಭೇದೇ ಸತ್ಯಪಿ ಅನುಸಂಧಾನದರ್ಶನಾತ್ ತದೇವ ಪ್ರಯೋಜಕಂ ನೋಪಾಧಿಭೇದಾಭಾವಃ' ಇತಿ ಜ್ಞಾಯತೇ । ಅನ್ಯಥಾ ಉಪಾಧಿಭೇದಾತ್ ಹಸ್ತಪಾದಾದಿಗತಸುಖಾದಿಭೋಗ ಏಕಸ್ಯ ನ ಸ್ಯಾತ್ । ಅತಃ 'ಉಪಾಧಿಭೇದೇಽಪಿ ಹಸ್ತಪಾದಾದಿಗತಸುಖಾದಿಭೋಗವತ್ ಸ್ವರೂಪೈಕ್ಯೇ ಸರ್ವೋಪಾಧಿಗತೋಽಸೌ ಭೇದೇನ ನ ದೃಶ್ಯೇತ' ಇತಿ ।**

**ಅನುವಾದ :-** ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

**ಮೂಲ :- .... ಉಪಾಧಿಭೇದೇऽಪಿ ..... ।**

**ಮೂಲಾರ್ಥ :- ಉಪಾಧಿಭೇದ ಇದ್ದಾಗಲೂ ಸಹ ಸ್ವರೂಪೈಕ್ಯವಿದ್ದರೆ ಸುಖದುಃಖಾದಿಭೋಗವು ಭಿನ್ನಭಿನ್ನವಾಗಿ ಕಂಡಿಲ್ಲ. ಉಪಾಧಿಭೇದವಿದ್ದರೂ ಸಹ ಸ್ವರೂಪೈಕ್ಯವಿದ್ದರೆ ಪರಸ್ಪರ ಸುಖಾದ್ಯನುಸಂಧಾನವು ಕಂಡಿದೆ ಎಂದು ಭಾವ.**

ಈ ಮೂಲಕ್ಕೆ 'ಸುಖದುಃಖಾದಿಭೋಗಶ್ಚ ......' ಎಂಬ ಪೂರ್ವವಾಕ್ಯದಿಂದ ಸಂಬಂಧ ತಿಳಿಯಬೇಕು. ''ಉಪಾಧಿಭೇದೇऽಪಿ ಸುಖದುಃಖಾದಿಭೋಗೋ ಭೇದೇನ ನ ದೃಶ್ಯಃ । ಸುಖಾದ್ಯನುಸಂಧಾನಮಸ್ತೀತಿ ಯಾವತ್'' ಎಂಬುದಾಗಿ ಅನ್ವಯ ಮತ್ತು ಅರ್ಥ ತಿಳಿಯಬೇಕು ಎಂದು ಭಾವ.

ಈ ರೀತಿ ಹೇಳುವುದರಿಂದ ''ಅನುಸಂಧಾನ ಇದ್ದರೂ ಸಹ ಉಪಾಧಿ ಭೇದಾಭಾವ ಇಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆ. ಆದ್ದರಿಂದ ಅನುಸಂಧಾನವನ್ನು ಕುರಿತು ಉಪಾಧಿಭೇದಾಭಾವವು ಪ್ರಯೋಜಕವಲ್ಲ. ಕಿಂತು ಸ್ವರೂಪೈಕ್ಯವೇ ಪ್ರಯೋಜಕ'' ಎಂದು ಹೇಳಿದಂತಾಗುತ್ತದೆ. ವ್ಯಭಿಚಾರ ಬರುವುದರಿಂದ ಉಪಾಧಿ ಭೇದಾಭಾವವು ಪ್ರಯೋಜಕವಲ್ಲ ಎನ್ನುವುದಾದರೆ, ಎಲ್ಲಿ ವ್ಯಭಿಚಾರ ಬರುವುದರಿಂದ ಪ್ರಯೋಜಕವಲ್ಲ ಎನ್ನುತ್ತೀರಿ ? ಎಂದರೆ, ಅದಕ್ಕೆ ಹೇಳುತ್ತಾರೆ -

**ಮೂಲ - ..... ಹಸ್ತಪಾದಾದಿಗೋ ಯಥಾ ।**

**ಮೂಲಾರ್ಥ - ಯಾವ ರೀತಿಯಾಗಿ ಹಸ್ತಪಾದಾದಿ ಉಪಾಧಿಭೇದವಿದ್ದರೂ ಸ್ವರೂಪೈಕ್ಯವಿದ್ದದ್ದರಿಂದ ಸುಖಾದ್ಯನುಸಂಧಾನ ಕಂಡಿದೆಯೋ ಅದರಂತೆಯೇ ದೇಹಾದಿ ಉಪಾಧಿಭೇದವಿದ್ದರೂ ಜೀವರಲ್ಲಿ ಸ್ವರೂಪೈಕ್ಯವಿರುವುದಾದರೆ ಪರಸ್ಪರ ಸುಖಾದ್ಯನುಸಂಧಾನ ಬರಬೇಕಾಗುತ್ತದೆ ಎಂದು ಭಾವ.**

ಈ ವಾಕ್ಯಕ್ಕೂ ಸಹ ''ಸುಖದುಃಖಾದಿಭೋಗಶ್ಚ ....'' ಎಂಬ ಪೂರ್ವವಾಕ್ಯದಿಂದಲೇನೇ ಸಂಬಂಧ ತಿಳಿಯುವುದು.

ಸ್ವರೂಪೈಕ್ಯ ಇದ್ದಾಗ ಹಸ್ತಪಾದಾದಿ ಉಪಾಧಿಗಳಲ್ಲಿ ಭೇದ ಇದ್ದರೂ ಸಹ (ಉಪಾಧಿಭೇದಾಭಾವವು ಇಲ್ಲದಿದ್ದರೂ ಸಹ) ಅನುಸಂಧಾನ ಕಂಡಿದ್ದರಿಂದ, ಅನುಸಂಧಾನವನ್ನು ಕುರಿತು ಸ್ವರೂಪೈಕ್ಯವೇ ಪ್ರಯೋಜಕ ಹೊರತು ಉಪಾಧಿ ಭೇದಾಭಾವವು ಪ್ರಯೋಜಕವಲ್ಲ ಎಂದು ತಿಳಿಯುತ್ತದೆ.

ಒಂದುವೇಳೆ ಅನುಸಂಧಾನವನ್ನು ಕುರಿತು ಉಪಾಧಿಭೇದಾಭಾವವೇ ಪ್ರಯೋಜಕವಾಗಿದ್ದರೆ, ದೇವದತ್ತನಿಗೆ ಹಸ್ತಪಾದಾದಿ ಉಪಾಧಿಭೇದ ಇರುವ ಕಾರಣ ಪ್ರಯೋಜಕವಾದ ಉಪಾಧಿಭೇದಾಭಾವವು ಇಲ್ಲವಾದ್ದರಿಂದ ಹಸ್ತಪಾದಾದಿಗತಸುಖಾದಿಭೋಗವು ಒಬ್ಬನಿಗೇ ಆಗಬಾರದಾಗುತ್ತದೆ. (ಅನುಸಂಧಾನವೂ ಆಗದೇ ಹೋಗಬೇಕಾಗುತ್ತದೆ.)

ಆದ್ದರಿಂದ ಒಬ್ಬನೇ ದೇವದತ್ತನಿಗೆ ಹಸ್ತಪಾದಾದಿಉಪಾಧಿಭೇದ ಇದ್ದರೂ ಸಹ ಸ್ವರೂಪೈಕ್ಯ ಇರುವುದರಿಂದ ಹಸ್ತಪಾದಾದಿಗತ ಸುಖಾದ್ಯನುಸಂಧಾನ ಆಗುವಂತೆ, ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವರೂಪೈಕ್ಯ ಇರುವುದಾದರೆ ದೇಹ-ಅಂತಃಕರಣಾದಿ ಉಪಾಧಿಭೇದ ಇದ್ದರೂ ಸಹ ಸರ್ವೋಪಾಧಿಗತ (ಎಲ್ಲ ದೇಹಗಳಲ್ಲಿ ಆಗುವ) ಸುಖಾದ್ಯನುಸಂಧಾನವು (ಪರಸ್ಪರವಾಗಿ ಆಗಬೇಕಾಗುತ್ತದೆ) ಭಿನ್ನಭಿನ್ನವಾಗಿ ಆಗದೇ ಹೋಗಬೇಕಾಗುತ್ತದೆ ಎಂದು ಅಭಿಪ್ರಾಯ.

ಹಾಗಾದರೆ ವ್ಯಭಿಚಾರ ಬರುವ ಕಾರಣ ಅನುಸಂಧಾನವನ್ನು ಕುರಿತು ಉಪಾಧಿಭೇದಾಭಾವವು ಪ್ರಯೋಜಕವಾಗುವುದಿಲ್ಲವಾದ್ದರಿಂದ, ಸ್ವರೂಪೈಕ್ಯವೇ ಪ್ರಯೋಜಕವಾಗಿ ಅನ್ವಯ-ವ್ಯತಿರೇಕಗಳಿಂದ ನಿರ್ಣೀತವಾದ್ದರಿಂದ, ಅನುಸಂಧಾನಾಭಾವದಿಂದ ಪರಸ್ಪರ ಸ್ವರೂಪೈಕ್ಯಾಭಾವವನ್ನು ಸಾಧಿಸುವ ನಮ್ಮ ಅನುಮಾನವು ಅಪ್ರಯೋಜಕವಲ್ಲ.

(''ವಿಮತಾಃ, ಪರಸ್ಪರಂ ಐಕ್ಯರಹಿತಾಃ, ಸುಖಾದ್ಯನುಸಂಧಾನಶೂನ್ಯತ್ವಾತ್'' ಎಂಬ ನಮ್ಮ ಅನುಮಾನಕ್ಕೆ ಅಪ್ರಯೋಜಕತಾಶಂಕೆ ಬರುವುದಿಲ್ಲ.)

ಉಪಾಧಿಭೇದಾಭಾವ ಇಲ್ಲದಿದ್ದರೂ ಸುಖಾದ್ಯನುಸಂಧಾನ ಆಗುವುದರಿಂದ ತರ್ಕಕ್ಕೆ ಉಪಾಧಿಭೇದಾಭಾವ ಎಂಬ ಉಪಾಧಿಯೂ ಬರುವುದಿಲ್ಲ (ಅನುಸಂಧಾನವನ್ನು ಕುರಿತು ಉಪಾಧಿಭೇದಾಭಾವವು ಪ್ರಯೋಜಕವೇ ಹೊರತು ಸ್ವರೂಪೈಕ್ಯ ಪ್ರಯೋಜಕವಲ್ಲ ಎಂದು ಶಂಕಿಸಲು ಬರುವುದಿಲ್ಲ) ಎಂದು ತಿಳಿಯಬೇಕು.

**ಟೀಕಾ :- ಅಥಾಪಿ ಸ್ಯಾತ್ । ಸಂಶ್ಲಿಷ್ಟೋಪಾಧಿತ್ವಮನುಸಂಧಾನೇ ಪ್ರಯೋಜಕಮ್ । ತದಭಾವಾತ್ ಪ್ರಕೃತೇ ನಾನುಸಂಧಾನಮಿತಿ ಚೇತ್, ಕಿಮುಪಾಧಿಸಂಶ್ಲೇಷಮಾತ್ರಂ ಪ್ರಯೋಜಕಮ್ ? ಉತ ಸ್ವರೂಪೈಕ್ಯೇ ಸತಿ ?**

**ನಾದ್ಯಃ । ಮಾತೃಸುಖಾದೇರ್ಗರ್ಭಸ್ಥೇನಾನುಭವಪ್ರಸಂಗಾತ್ । ನ ದ್ವಿತೀಯಃ । ಸ್ವರೂಪೈಕ್ಯಮಾತ್ರಸ್ಯ ಪ್ರಯೋಜಕತ್ವೇ ಸಂಭವತಿ ವಿಶೇಷಣಪ್ರಕ್ಷೇಪೇ ಪ್ರಮಾಣಾಭಾವಾತ್ ।**

**ದೋಷಾಂತರಂ ಚ ಸೂಚಯತಿ -**

**ಮೂಲ :- ನಾನಾದೇಹಗಭೋಗಾನುಸಂಧಾನಂ ಯೋಗಿನೋ ಯಥಾ ।**

**ಸ್ವರೂಪೈಕ್ಯಸದ್ಭಾವಾತ್ ವಿಶ್ಲಿಷ್ಟನಾನಾದೇಹಗತಸುಖಾದ್ಯನುಸಂಧಾನಂ ಸೌಭರ್ಯಾದಿಯೋಗಿನೋ ದೃಷ್ಟಮಿತಿ ತದೇವಾನುಸಂಧಾನೇ ಪ್ರಯೋಜಕಂ ನೋಪಾಧಿಸಂಶ್ಲೇಷೋಽಪೀತಿ ಜ್ಞಾಯತೇ । ಅನ್ಯಥಾ ಯೋಗಪ್ರಭಾವೋತ್ಪಾದಿತಾನೇಕಶರೀರಗತಸುಖಾದ್ಯನುಸಂಧಾನಂ ಯೋಗಿನೋ ನ ಸ್ಯಾತ್ । ಅತೋ ಯೋಗಿನಃ ಸ್ವರೂಪೈಕ್ಯಾತ್ ಉಪಾಧಿಷು ವಿಶ್ಲಿಷ್ಟೇಷ್ವಪಿ ಯಥಾ ನಾನಾದೇಹಗತಸುಖಾದಿಭೋಗಾನುಸಂಧಾನಂ ತಥಾ ಪ್ರಕೃತೇಽಪ್ಯಾಪಾದ್ಯತ ಏವೇತಿ ।**

**ಅನುವಾದ :-** ಆದರೂ ಸಹ ಅನುಸಂಧಾನವನ್ನು ಕುರಿತು ಕೇವಲ ಉಪಾಧಿ ಭೇದಾಭಾವವು ಪ್ರಯೋಜಕವಾಗದಿದ್ದರೂ ಸಹ ಸಂಶ್ಲಿಷ್ಟೋಪಾಧಿಮತ್ತ್ವವು (ವಿಶ್ಲಿಷ್ಟೋಪಾಧಿಭೇದಾಭಾವವು) ಪ್ರಯೋಜಕವಾಗಿದೆ. ಒಬ್ಬನೇ ಆತ್ಮನಿಗೆ (ದೇವದತ್ತನಿಗೆ) ಹಸ್ತಪಾದಾದಿಉಪಾಧಿಭೇದ ಇದ್ದರೂ ಅನುಸಂಧಾನವಾಗುತ್ತದೆ. ಏಕೆ ? ಅಲ್ಲಿ ಸಂಶ್ಲಿಷ್ಟೋಪಾಧಿ ಇರುವುದರಿಂದ. ಅಂದರೆ ಹಸ್ತಪಾದಾದಿಉಪಾಧಿಗಳ ಸಂಶ್ಲೇಷ (ಕೂಡಿರುವಿಕೆ) ಇರುವುದರಿಂದ (ವಿಶ್ಲಿಷ್ಟೋಪಾಧಿಭೇದ ಇಲ್ಲವಾದ್ದರಿಂದ) ಅನುಸಂಧಾನವಾಗುತ್ತದೆ. ಪ್ರಕೃತದಲ್ಲಿ ಜೀವ-ಬ್ರಹ್ಮರು ಹಾಗೂ ಜೀವರಲ್ಲಿ ಸಂಶ್ಲಿಷ್ಟೋಪಾಧಿ (ಉಪಾಧಿ ಕೂಡಿರುವಿಕೆ) ಇಲ್ಲವಾದ್ದರಿಂದ ಪರಸ್ಪರ ಅನುಸಂಧಾನ ಆಗುವುದಿಲ್ಲ ಎಂಬುದಾಗಿ ಶಂಕಿಸಿದರೆ,

ನೀವು ಕೇವಲ ಉಪಾಧಿಸಂಶ್ಲೇಷವು ಪ್ರಯೋಜಕ ಎನ್ನುತ್ತೀರೋ ? ಅಥವಾ ಸ್ವರೂಪೈಕ್ಯವೂ ಇದ್ದು ಉಪಾಧಿಸಂಶ್ಲೇಷವು ಪ್ರಯೋಜಕ ಎನ್ನುತ್ತೀರೋ ?

ಕೇವಲ ಉಪಾಧಿಸಂಶ್ಲೇಷವು ಪ್ರಯೋಜಕ ಎಂಬ ಮೊದಲನೇ ಪಕ್ಷ ಸರಿಯಲ್ಲ. ಏಕೆಂದರೆ - ಕೇವಲ ಉಪಾಧಿಸಂಶ್ಲೇಷವು ಪ್ರಯೋಜಕ ಎನ್ನುವುದಾದರೆ, ತಾಯಿಗೂ ಗರ್ಭಸ್ಥಶಿಶುವಿಗೂ ಉಪಾಧಿಸಂಶ್ಲೇಷ (ದೇಹ ಕೂಡಿರುವಿಕೆ) ಇರುವ ಕಾರಣ

ತಾಯಿಯ ಸುಖದ ಅನುಸಂಧಾನ ಗರ್ಭಸ್ಥಶಿಶುವಿಗೆ ಬರಬೇಕಾದ ಅತಿಪ್ರಸಂಗ ಬರುತ್ತದೆ. ಇನ್ನು ಸ್ವರೂಪೈಕ್ಯವೂ ಇದ್ದು ಉಪಾಧಿಸಂಶ್ಲೇಷ ಪ್ರಯೋಜಕ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಕೇವಲ ಸ್ವರೂಪೈಕ್ಯವೇ ಪ್ರಯೋಜಕವಾಗಲು ಸಾಧ್ಯವಿರಲು ಉಪಾಧಿಸಂಶ್ಲೇಷ ಎಂಬ ವಿಶೇಷಣವೂ ಅಗತ್ಯ ಎನ್ನಲು ಪ್ರಮಾಣವಿಲ್ಲ.

ಈ ಎರಡನೇ ಪಕ್ಷಕ್ಕೆ ಮತ್ತೊಂದು ದೋಷವನ್ನು ಹೇಳುತ್ತಾರೆ -

**ಮೂಲ :- ನಾನಾದೇಹಗಭೋಗಾನುಸಂಧಾನಂ ಯೋಗಿನೋ ಯಥಾ।**

**ಮೂಲಾರ್ಥ :- ಹೇಗೆ ಸೌಭರ್ಯಾದಿಯೋಗಿಗೆ ಉಪಾಧಿಗಳು ವಿಶ್ಲಿಷ್ಟವಾಗಿದ್ದರೂ ಸ್ವರೂಪೈಕ್ಯ ಇರುವ ಕಾರಣ ನಾನಾದೇಹಗತಸುಖಾದ್ಯನುಸಂಧಾನ ಆಗಿದೆಯೋ ಹಾಗೆ ಜೀವರಲ್ಲಿಯೂ ದೇಹರೂಪಉಪಾಧಿಗಳು ವಿಶ್ಲಿಷ್ಟವಾಗಿದ್ದರೂ ಸ್ವರೂಪೈಕ್ಯ ಇರುವುದರಿಂದ ನಾನಾದೇಹಗತಸುಖಾದ್ಯನುಸಂಧಾನ ಒಬ್ಬನಿಗೇ ಆಗಲಿ ಎಂಬ ಆಪಾದನೆ ಬಂದೇ ಬರುತ್ತದೆ.**

ಸೌಭರಿ ಮೊದಲಾದ ಯೋಗಿಗಳು ಏಕಕಾಲಕ್ಕೆ 50 ದೇಹಗಳನ್ನು ತೆಗೆದುಕೊಂಡು ಭೋಗ ಮಾಡಿದ್ದನ್ನು ಇತಿಹಾಸದಲ್ಲಿ ಕಾಣುತ್ತೇವೆ. ಅಲ್ಲಿ ಅವರ 50 ದೇಹಗಳು ಭಿನ್ನ-ಭಿನ್ನವಾಗಿದ್ದರಿಂದ ವಿಶ್ಲಿಷ್ಟವಾಗಿವೆ. ಆದರೂ ಉಪಾಧಿಸಂಶ್ಲೇಷ ಇಲ್ಲದಿದ್ದರೂ ಸ್ವರೂಪೈಕ್ಯ ಇರುವ ಕಾರಣ ಅಂತಹ ವಿಶ್ಲಿಷ್ಟನಾನಾದೇಹಗತಸುಖಾದ್ಯನುಸಂಧಾನವು ಒಬ್ಬರೇ ಯೋಗಿಗೆ ಆಗಿದ್ದು ಕಂಡಿದೆಯಾದ್ದರಿಂದ, ಸ್ವರೂಪೈಕ್ಯವೇ ಅನುಸಂಧಾನವನ್ನು ಕುರಿತು ಪ್ರಯೋಜಕ, ಹೊರತು ಉಪಾಧಿಸಂಶ್ಲೇಷವಿಶಿಷ್ಟ ಸ್ವರೂಪೈಕ್ಯ ಪ್ರಯೋಜಕವಲ್ಲ ಎಂದು ತಿಳಿಯುತ್ತದೆ.

ಒಂದುವೇಳೆ ಸಂಶ್ಲಿಷ್ಟೋಪಾಧಿಯೇ (ವಿಶ್ಲಿಷ್ಟೋಪಾಧಿಭೇದಾಭಾವವೇ) ಪ್ರಯೋಜಕ ಎಂದಾಗಿದ್ದರೆ ಯೋಗಪ್ರಭಾವದಿಂದ ತೆಗೆದುಕೊಂಡ ಅನೇಕಶರೀರಗಳಲ್ಲಿ ಆಗುವ ಸುಖಾದ್ಯನುಸಂಧಾನವು ಒಬ್ಬರೇ ಯೋಗಿಗೆ ಆಗಬಾರದಿತ್ತು. (ಪ್ರಯೋಜಕವಾದ ವಿಶ್ಲಿಷ್ಟೋಪಾಧಿಭೇದಾಭಾವ ಇಲ್ಲವಾದ್ದರಿಂದ ಅನುಸಂಧಾನವು ಆಗಬಾರದಿತ್ತು ಎಂದು ಭಾವ.)

ಆದ್ದರಿಂದ ಅನುಸಂಧಾನವನ್ನು ಕುರಿತು ವಿಶ್ಲಿಷ್ಟೋಪಾಧಿಭೇದಾಭಾವವು ಅಪ್ರಯೋಜಕವಾದ್ದರಿಂದ ಸೌಭರ್ಯಾದಿ ಯೋಗಿಗೆ ಉಪಾಧಿಗಳು (ದೇಹಗಳು)

ವಿಶ್ಲಿಷ್ಟವಾಗಿದ್ದರೂ ಸಹ ಸ್ವರೂಪೈಕ್ಯ ಇರುವ ಕಾರಣ ಯಾವ ರೀತಿಯಾಗಿ ನಾನಾದೇಹಗತ ಸುಖಾದಿಭೋಗಾನುಸಂಧಾನವು ಆಗುವುದೋ, ಅದೇ ರೀತಿಯಾಗಿ ಜೀವರಲ್ಲಿ ದೇವದತ್ತ-ಯಜ್ಞದತ್ತ ಎಂಬ ಹೆಸರಿನ ಉಪಾಧಿಗಳು (ದೇಹಗಳು) ಭಿನ್ನ-ಭಿನ್ನವಾಗಿದ್ದರೂ ವಿಶ್ಲಿಷ್ಟವಾಗಿದ್ದರೂ ಸಹ ಸ್ವರೂಪೈಕ್ಯ ಇರುವ ಕಾರಣ ಪರಸ್ಪರ ಸುಖಾದ್ಯನುಸಂಧಾನವಾಗಲಿ ಎಂಬ ಆಪಾದನೆ ಬಂದೇ ಬರುತ್ತದೆ ಎಂದು ಅಭಿಪ್ರಾಯ.

**ಟೀಕಾ :- ಸ್ಯಾದೇತತ್ । ಪರಬುದ್ಧೇರಪ್ರತ್ಯಕ್ಷತ್ವಾತ್ ಯೋಗಿನೋ ನಾನಾದೇಹಗತಭೋಗಾನುಸಂಧಾನಂ ಕುತಃ ಸಿದ್ಧಮ್ ? ಇತ್ಯತ ಆಹ -**

**ಮೂಲ :- ನ ಚೇದ್ಭೋಗಾನುಸಂಧಾನಂ ತದಿಚ್ಛಾ ಯೋಗಿನಃ ಕುತಃ।**

**ಇಚ್ಛಾಪೂರ್ವಂ ಖಲು ಯೋಗಿನೋಽನೇಕಶರೀರೋಪಾದಾನಂ ಪುರಾಣೇಷು ಪಠ್ಯತೇ । ತತ್ರ ಯದಿ ಯೋಗಿನೋಽನೇಕಶರೀರಗತಸುಖಾದ್ಯನುಸಂಧಾನಂ ನ ಸ್ಯಾತ್ ತದಾ ತಸ್ಯ ತದಿಚ್ಛೈವ ನ ಸ್ಯಾತ್ । ಶರೀರೋಪಾದಾನಸ್ಯ ಪ್ರಯೋಜನಾಂತರಾಭಾವಾತ್ । ಅಪ್ರಯೋಜನಸ್ಯ ಪ್ರೇಕ್ಷಾವತಾ ನಿವರ್ತಿಷ್ಯ-ಮಾಣತ್ವಾತ್ । ಅತೋ ಜ್ಞಾಯತೇ ಅಸ್ತ್ಯನುಸಂಧಾನಮಿತಿ ।**

**ನ ಚ ಯೋಗಿನೋಽವಿವೇಕಿನಃ । ಯೇನಾನುಸಂಧಾನಾಸಾಧನಮಪಿ ದೇಹಬಾಹುಲ್ಯಂ ತದರ್ಥಮಿಚ್ಛಂತೀತಿ ಕಲ್ಪಯಾಮಃ ।**

**ಅನುವಾದ :-** ಯೋಗಿಯ ಅನುಸಂಧಾನವನ್ನು ದೃಷ್ಟಾಂತವನ್ನಾಗಿ ಇಟ್ಟುಕೊಂಡು ಜೀವರಲ್ಲಿ ಪರಸ್ಪರ ಅನುಸಂಧಾನವನ್ನು ಆಪಾದಿಸುವುದು ಕೂಡುತ್ತಿತ್ತು. ಯಾವಾಗ ? ಯೋಗಿಯ ಅನುಸಂಧಾನವು ನಮಗೆ ಪ್ರಮಾಣಸಿದ್ಧವಾಗಿದ್ದರೆ. ಆದರೆ ಯೋಗಿಗೆ ನಾನಾದೇಹಗತಭೋಗಾನುಸಂಧಾನವು ಯಾವ ಪ್ರಮಾಣದಿಂದ ಸಿದ್ಧವಾಗಿದೆ ?

ಪರಬುದ್ಧೇರಪ್ರತ್ಯಕ್ಷತ್ವಾತ್ = ಪರರ ಸುಖಾದಿವಿಷಯದಲ್ಲಿ ನಮ್ಮ ಪ್ರತ್ಯಕ್ಷವು ಪ್ರವೃತ್ತವಾಗುವುದಿಲ್ಲವಾದ್ದರಿಂದ ನಮ್ಮ ಪ್ರತ್ಯಕ್ಷವು ಪ್ರಮಾಣವಾಗುವುದಿಲ್ಲ. ಯೋಗಿಗೆ ನಾನಾದೇಹಗತಭೋಗಾನುಸಂಧಾನವಾಗುತ್ತದೆ ಎಂದು ತಿಳಿಸುವ ಆಗಮ ಯಾವುದೂ ಇಲ್ಲವಾದ್ದರಿಂದ ಆಗಮವೂ ಪ್ರಮಾಣವಾಗುವುದಿಲ್ಲ. ವ್ಯಾಪ್ತಿಗ್ರಹ

ಇಲ್ಲವಾದ್ದರಿಂದ ಅನುಮಾನವೂ ಪ್ರಮಾಣವಾಗುವುದಿಲ್ಲ. ಆದ್ದರಿಂದ ಯೋಗಿಗೆ ನಾನಾದೇಹಗತಭೋಗಾನುಸಂಧಾನವು ಯಾವ ಪ್ರಮಾಣದಿಂದ ಸಿದ್ಧವಾಗಿದೆ ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲ :- ನ ಚೇದ್ಭೋಗಾನುಸಂಧಾನಂ ತದಿಚ್ಛಾ ಯೋಗಿನಃ ಕುತಃ ।**

ಮೂಲಾರ್ಥ :- ಸೌಭರಿಯೋಗಿಗೆ ನಾನಾದೇಹಗತಸುಖಾನುಸಂಧಾನ ಆಗುವುದಿಲ್ಲವಾಗಿದ್ದರೆ, ಸುಖಾನುಸಂಧಾನಕ್ಕಾಗಿ ದೇಹಬಾಹುಲ್ಯವನ್ನು ತೆಗೆದುಕೊಳ್ಳಬೇಕು ಎಂಬ ಇಚ್ಛೆಯಾದರೂ ಯೋಗಿಗೆ ಏಕೆ ಬರುತ್ತಿತ್ತು ?

**ಸೌಭರಿಶ್ಚ ಮಹಾಯೋಗೀ ಪಂಚಾಶಜ್ಜನ್ಮಸಂಸ್ಮೃತಿಮ್ ।**
**ದಿವ್ಯಜ್ಞಾನೇನ ವಿಜ್ಞಾಯ ಭಾವಿಜನ್ಮಫಲಂ ಪುನಃ ।**
**ಏಕದೈವ ಫಲಂ ಭುಂಕ್ತ್ವಾ ಪಂಚಾಶಜ್ಜನ್ಮಕರ್ಮಜಮ್ ।**
**ಸ್ವೇಚ್ಛಯೈವ ತತಃ ಶುದ್ಧೋ ರಾಹುಮುಕ್ತ ಇವೋಡುಪಃ ॥**

ಎಂಬುದಾಗಿ ಸೌಭರಿಯೋಗಿಯು ಇಚ್ಛಾಪೂರ್ವಕವಾಗಿ ಅನೇಕ ಶರೀರಗಳನ್ನು ಸ್ವೀಕರಿಸಿದ್ದು ಪುರಾಣಗಳಲ್ಲಿ ಪಠಿತವಾಗಿದೆ. ಅಲ್ಲಿ ಒಂದುವೇಳೆ ಸೌಭರಿಯೋಗಿಗೆ ಅನೇಕಶರೀರಗತಸುಖಾದ್ಯನುಸಂಧಾನವು ಆಗುವುದಿಲ್ಲ ಎಂದಾದರೆ ಆಗ ಯೋಗಿಗೆ ಅನೇಕ ಶರೀರಗಳನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯೇ ಕೂಡದೇ ಹೋಗಬೇಕಾಗುತ್ತದೆ.

ಅನೇಕಶರೀರಗತಸುಖಾದ್ಯನುಸಂಧಾನ ಎಂಬ ಪ್ರಯೋಜನಕ್ಕಾಗಿಯೇ ತಾನೇ ಯೋಗಿಯು ಅನೇಕ ಶರೀರಗಳನ್ನು ತೆಗೆದುಕೊಂಡದ್ದು ! ಪ್ರಕೃತ ಸುಖಾದ್ಯನುಸಂಧಾನವೇ ಆಗುವುದಿಲ್ಲ ಎಂದಾದರೆ ಅನೇಕ ಶರೀರಗಳನ್ನು ತೆಗೆದುಕೊಳ್ಳಬೇಕೆಂಬ ಯೋಗಿಯ ಇಚ್ಛೆಯೇ ಅನುಪಪನ್ನವಾಗುತ್ತದೆ. ಅನೇಕ ಶರೀರಗಳನ್ನು ತೆಗೆದುಕೊಳ್ಳುವುದಕ್ಕೆ ಸುಖಾದ್ಯನುಸಂಧಾನವನ್ನು ಬಿಟ್ಟು ಬೇರೆ ಪ್ರಯೋಜನ ಯಾವುದೂ ಇಲ್ಲ. ಯಾವ ಪ್ರಯೋಜನ ಇಲ್ಲದಿದ್ದರೂ ಅನೇಕ ಶರೀರಗಳನ್ನು ತೆಗೆದುಕೊಳ್ಳಲು ಯೋಗಿಯು ಇಚ್ಛಿಸಲು ಸಾಧ್ಯವಿಲ್ಲ. ಕಾರಣ ಯೋಗಿಯು ಪ್ರೇಕ್ಷಾವಂತನಾಗಿದ್ದಾನೆ. ಪ್ರೇಕ್ಷಾವಂತರು ನಿಷ್ಪ್ರಯೋಜನವಾದ ಕಾರ್ಯವನ್ನು ಎಂದಿಗೂ ಮಾಡುವುದಿಲ್ಲ. ಇದರಿಂದಲೇ ತಿಳಿಯುತ್ತದೆ :- ಅನೇಕಶರೀರಗತಸುಖಾದ್ಯನುಸಂಧಾನಕ್ಕಾಗಿ ಅನೇಕಶರೀರಗಳನ್ನು ತೆಗೆದುಕೊಂಡಿದ್ದರಿಂದ ಯೋಗಿಗೆ ನಾನಾದೇಹಗತ ಸುಖಾನುಸಂಧಾನ ಇದ್ದೇ ಇದೆ ಎಂದು.

ಇನ್ನು ಯೋಗಿಗಳು, ನಿಜವಾಗಿ ದೇಹಬಾಹುಲ್ಯವು ಸುಖಾನುಸಂಧಾನಕ್ಕೆ ಸಾಧನವಾಗದಿದ್ದರೂ ಸಹ 'ದೇಹಬಾಹುಲ್ಯವು ಸುಖಾಸಂಧಾನಕ್ಕೆ ಸಾಧನವಾಗಿದೆ' ಎಂದು ಭ್ರಮಿಸಿ ಭ್ರಾಂತಿಯಿಂದಾಗಿ ಸುಖಾನುಸಂಧಾನಕ್ಕಾಗಿ ದೇಹಬಾಹುಲ್ಯವನ್ನು ಇಚ್ಛಿಸುತ್ತಾರೆ ಎಂದು ಹೇಳಲು ಸಾಧ್ಯವಿಲ್ಲ. ಕಾರಣ ಯೋಗಿಗಳು ಅವಿವೇಕಿಗಳಲ್ಲ. (ಭ್ರಾಂತರಲ್ಲ = ಅವರಿಗೆ ಈ ವಿಧವಾದ ಭ್ರಾಂತಿ ಕೂಡುವುದಿಲ್ಲ.) ಆದ್ದರಿಂದ ಯೋಗಿಗಳು ಯಥಾರ್ಥಜ್ಞಾನಿಗಳಾದ್ದರಿಂದ, ಸುಖಾನುಸಂಧಾನಕ್ಕಾಗಿಯೇ ದೇಹಬಾಹುಲ್ಯವನ್ನು ತೆಗೆದುಕೊಂಡಿದ್ದರಿಂದ ಸೌಭರಿಯೋಗಿಗೆ ಅನೇಕಶರೀರಗತ ಸುಖಾನುಸಂಧಾನ ಇದೆ ಎಂದು ಸಿದ್ಧವಾಗುತ್ತದೆ.

**ವಿಶೇಷ ವಿಚಾರ :-** ಯೋಗಿಗೆ ನಾನಾದೇಹಗತಸುಖಾನುಸಂಧಾನವು ಯಾವ ಪ್ರಮಾಣದಿಂದ ಸಿದ್ಧವಾಗಿದೆ ? ಎಂಬ ಪ್ರಶ್ನೆಗೆ, ಈ ಮೂಲಕ ಆಚಾರ್ಯರು ಅರ್ಥಾಪತ್ತಿ ಪ್ರಮಾಣವನ್ನು ತಿಳಿಸುತ್ತಿದ್ದಾರೆ.

**ಅರ್ಥಾಪತ್ತಿಸ್ವರೂಪ :**

ಅನೇಕಶರೀರೋಪಾದಾನೇಚ್ಛಾ ಅನೇಕಶರೀರಗತಸುಖಾನುಸಂಧಾನಂ ವಿನಾ ಅನುಪಪದ್ಯಮಾನಾ । ಅತಃ ಅನೇಕಶರೀರೋಪಾದಾನೇಚ್ಛಾಽನ್ಯಥಾಽನುಪಪತ್ಯಾ ಅನೇಕಶರೀರಗತಸುಖಾನುಸಂಧಾನಂ ಸಿದ್ಧ್ಯತಿ ।

ಅನೇಕಶರೀರಗತಸುಖಾನುಸಂಧಾನವು ಇಲ್ಲದೇ ಹೋದರೆ ಯೋಗಿಗೆ ಅನೇಕ ಶರೀರಗಳನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯೇ ಅನುಪಪನ್ನವಾಗುತ್ತದೆ. ಆದ್ದರಿಂದ ಅನೇಕಶರೀರೋಪಾದಾನೇಚ್ಛಾಽನ್ಯಥಾಽನುಪಪತ್ತಿಯಿಂದ ಅನೇಕಶರೀರಗತ ಸುಖಾನುಸಂಧಾನವು ಸಿದ್ಧವಾಗುತ್ತದೆ.

ಈ ರೀತಿಯಾಗಿ ಸುಖಾನುಸಂಧಾನವಿಷಯದಲ್ಲಿ ಅರ್ಥಾಪತ್ತಿಪ್ರಮಾಣವನ್ನು ತಿಳಿಸುತ್ತಿದ್ದಾರೆ ಆಚಾರ್ಯರು ಎಂದು ತಿಳಿಯಬೇಕು.

**ಅವತಾರಿಕೆ :-** ನಾವು ಹೇಳಿದ ಅರ್ಥಾಪತ್ತಿಪ್ರಮಾಣಕ್ಕೆ ಅನ್ಯಥಾಽಪ್ಯುಪ-ಪತ್ತಿಯನ್ನು ಶಂಕಿಸುತ್ತಾರೆ -

**ಟೀಕಾ :- ಅಥೋಚ್ಯೇತ, ನ ಯೋಗಿನಃ ಅನೇಕಶರೀರೋಪಾದಿತ್ಸಯಾ ಅನೇಕಶರೀರಗತಸುಖಾದ್ಯನುಸಂಧಾನಮೇಕಸ್ಯ ಕಲ್ಪಯಿತುಂ ಶಕ್ಯತೇ**

ದೇಹಬಾಹುಲ್ಯಾರ್ಥಮೇವೇಚ್ಛೋಪಪತ್ತೇಃ । ನ ಚ ತಸ್ಯ ವೈಯರ್ಥ್ಯಾದ-ಪ್ರಯೋಜಕತ್ವಮ್ । ಕರ್ಮಕ್ಷಯಾಯ ಭೋಗಾರ್ಥತ್ವಾತ್ । ಭೋಗಶ್ಚ ವಿನಾಽಪ್ಯನುಸಂಧಾನೇನ ತತ್ರ ತತ್ರ ತದ್ಗತಾಂಶೈಃ ಶಕ್ಯತೇ ಕರ್ತುಮಿತಿ । ತತ್ರಾಹ-

**ಮೂಲ :-** ಅನುಸಂಧಾನರಹಿತದೇಹಬಾಹುಲ್ಯಮನ್ಯಥಾ ।
ಸಿದ್ಧಮೇವ ಹಿ ತತ್ಪಕ್ಷೇ ವಿಶೇಷೋ ಯೋಗಿನಃ ಕುತಃ ॥

ನ ಯೋಗಿನಃ ಅನುಸಂಧಾನೇನ ವಿನಾ ಕೇವಲದೇಹಬಾಹುಲ್ಯಾರ್ಥ-ಮೇವೇಚ್ಛೇತಿ ಕಲ್ಪಯಿತುಂ ಶಕ್ಯತೇ । ತಥಾ ಸತಿ ಅನುಸಂಧಾನರಹಿತ-ದೇಹಬಾಹುಲ್ಯಸ್ಯ ಯೋಗಿತ್ವೇನ ವಿನಾಪಿ ವಿದ್ಯಮಾನತ್ವಾತ್ ಯೋಗಿನೋಽನೇಕ-ಶರೀರಾಧಿಷ್ಠಾತೃತ್ವಮಿತಿ ವಿಶೇಷೋ ನ ಸ್ಯಾತ್ । ಅಸ್ತಿ ಚಾಸೌ । ತೇನ ಜ್ಞಾಯತೇ 'ನ ಶರೀರಬಾಹುಲ್ಯಮಾತ್ರಾಯೇಚ್ಛಾ ಯೋಗಿನಃ, ಕಿಂತು ? ತದ್ಗತ-ಭೋಗಾದ್ಯನುಸಂಧಾನಾರ್ಥಾ ' ಇತಿ ।

ಕಥಮಯೋಗಿನೋಽಪಿ ಶರೀರಬಾಹುಲ್ಯಂ ಸಿದ್ಧಮ್ ? ಇತ್ಯತ ಉಕ್ತಂ ॥ ತತ್ಪಕ್ಷ ಇತಿ ॥ ಸರ್ವಶರೀರಗತಚೇತನಾನಾಂ ಸ್ವಭಾವತೋಽಭೇದಸ್ಯ ಪರೇಣಾಂಗೀಕೃತತ್ವಾದಿತಿ।

**ಅನುವಾದ :-** ಅನೇಕಶರೀರಗಳನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯಿಂದಾಗಿ ಅನೇಕಶರೀರಗತಸುಖಾದ್ಯನುಸಂಧಾನವನ್ನು ಒಬ್ಬನೇ ಯೋಗಿಗೆ ಕಲ್ಪಿಸಲು (ಹೇಳಲು) ಸಾಧ್ಯವಿಲ್ಲ. ಏಕೆಂದರೆ - ಸುಖಾನುಸಂಧಾನಕ್ಕಾಗಿ ದೇಹಬಾಹುಲ್ಯೇಚ್ಛಾ ಅಲ್ಲದಿದ್ದರೂ, ದೇಹಬಾಹುಲ್ಯಕ್ಕಾಗಿಯೇ ದೇಹಬಾಹುಲ್ಯೇಚ್ಛಾ ಎನ್ನುವುದು ಉಪಪನ್ನವಾಗುತ್ತದೆ. (ಸುಖಾನುಸಂಧಾನಕ್ಕಾಗಿ ಅನೇಕಶರೀರೋಪಾದಾನೇಚ್ಛಾ ಅಲ್ಲ. ಕಿಂತು ಅನೇಕ ಶರೀರಗಳನ್ನು ತೆಗೆದುಕೊಳ್ಳುವುದಕ್ಕಾಗಿಯೇ ಅನೇಕ-ಶರೀರೋಪಾದಾನೇಚ್ಛಾ ಕೂಡುತ್ತದೆ.)

ದೇಹಬಾಹುಲ್ಯಕ್ಕಾಗಿ ದೇಹಬಾಹುಲ್ಯೇಚ್ಛಾ ಎನ್ನುವುದು ಹೇಗೆ ಸರಿ ? ಹಾಗೆ ಅನೇಕ ಶರೀರಗಳನ್ನು ತೆಗೆದುಕೊಳ್ಳುವುದಕ್ಕೆ ಯಾವ ಪ್ರಯೋಜನವೂ ಇಲ್ಲವಾದ್ದರಿಂದ ಅದು ಅಪ್ರಯೋಜಕ ಎಂದು ತಿಳಿಯಬೇಡಿ. ಏಕೆಂದರೆ - ಕರ್ಮಕ್ಷಯಕ್ಕಾಗಿ, ಭೋಗ ಮಾಡಿ ಮುಗಿಸುವುದಕ್ಕಾಗಿ ಅನೇಕ ಶರೀರಗಳನ್ನು ತೆಗೆದುಕೊಳ್ಳುವುದು

ಸಾರ್ಥಕವೇ ಆಗುತ್ತದೆ. ಇನ್ನು ಭೋಗವಾದರೂ ಪರಸ್ಪರ ಅನುಸಂಧಾನ ಇಲ್ಲದೆಯೂ ಆ ಆ ದೇಹದಲ್ಲಿ ಅಲ್ಲಿರುವ ಅಂಶಗಳಿಂದ ಮಾಡಲು ಶಕ್ಯವಿದೆ.

ಆದ್ದರಿಂದ ದೇಹಬಾಹುಲ್ಯಕ್ಕಾಗಿ ದೇಹಬಾಹುಲ್ಯೇಚ್ಛಾ ಸಂಭಾವಿತವಾದ್ದರಿಂದ, ಅನೇಕಶರೀರೋಪಾದಾನೇಚ್ಛೆಯು ಅನೇಕಶರೀರಗತಸುಖಾನುಸಂಧಾನವನ್ನು ಒಪ್ಪದಿದ್ದರೂ ಉಪಪನ್ನವಾಗುವುದರಿಂದ ನಿಮ್ಮ ಅರ್ಥಾಪತ್ತಿಪ್ರಮಾಣವು ಅನ್ಯಥಾಽಪ್ಯುಪಪನ್ನವಾಗಿದೆ.

ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲ - ಅನುಸಂಧಾನರಹಿತದೇಹಬಾಹುಲ್ಯಮನ್ಯಥಾ ।**
**ಸಿದ್ಧಮೇವ ಹಿ ತತ್ಪಕ್ಷೇ ವಿಶೇಷೋ ಯೋಗಿನಃ ಕುತಃ ॥**

**ಮೂಲಾರ್ಥ :- ಸರ್ವಶರೀರಗತಚೇತನರಿಗೆ ಸ್ವಾಭಾವಿಕವಾಗಿ ಅಭೇದ ಹೇಳುವ ಪರರ ಪಕ್ಷದಲ್ಲಿ ಅನುಸಂಧಾನರಹಿತದೇಹಬಾಹುಲ್ಯವು ಅನ್ಯಥಾಽಪಿ = ಯೋಗಿತ್ವ ಇಲ್ಲದೇ ಹೋದರೂ (ಅಯೋಗಿಗೂ) ಸಿದ್ಧವೇ ಆಗಿದೆ. ಅಂದಮೇಲೆ ''ಯೋಗಿಯಾದವನಿಗೆ ಅನೇಕಶರೀರಾಧಿಷ್ಠಾತೃತ್ವ'' ಎಂಬ ವಿಶೇಷ ಯಾಕೆ ?**

ಯೋಗಿಯಾದವನಿಗೆ ಅನುಸಂಧಾನವಿಲ್ಲದೇ ಕೇವಲ ದೇಹಬಾಹುಲ್ಯಕ್ಕಾಗಿಯೇ ಇಚ್ಛೆ ಎಂದು ಕಲ್ಪಿಸಲು ಶಕ್ಯವಿಲ್ಲ. ಏಕೆಂದರೆ - ಹಾಗಾದರೆ ಅನುಸಂಧಾನರಹಿತವಾದ ದೇಹಬಾಹುಲ್ಯವು ಯೋಗಿತ್ವ ಇಲ್ಲದೆಯೂ (ಯೋಗಿಗಳಾಗದ ನಮ್ಮಂತಹ ಅಯೋಗಿಗಳಿಗೂ) ಇರುವುದರಿಂದ ''ಯೋಗಿಯಾದವನಿಗೆ ಅನೇಕಶರೀರಾಧಿಷ್ಠಾತೃತ್ವ ಇರುತ್ತದೆ'' ಎಂಬ ವಿಶೇಷ ಕೂಡದೇ ಹೋಗಬೇಕಾಗುತ್ತದೆ.

ಈಗಲಾದರೋ ''ಯೋಗಿಯಾದವನಿಗೆ ಅನೇಕಶರೀರಾಧಿಷ್ಠಾತೃತ್ವ'' ಎಂಬ ವಿಶೇಷ ಇದೆ. ಅಂದಮೇಲೆ ಇದರಿಂದಲೇ ತಿಳಿಯುತ್ತದೆ - ''ಯೋಗಿಗೆ ಕೇವಲ ದೇಹಬಾಹುಲ್ಯಕ್ಕಾಗಿ ಇಚ್ಛಾ ಅಲ್ಲ. ಕಿಂತು ಆ ಆ ಶರೀರಗಳಲ್ಲಿ ಆಗುವ ಭೋಗಾದ್ಯನುಸಂಧಾನಕ್ಕಾಗಿ ಇಚ್ಛೆ'' ಎಂದು.

ಹೌದು, ಯೋಗಿತ್ವ ಇಲ್ಲದೆಯೂ (ಯೋಗಿಗಳಾಗದ ನಮ್ಮಂತಹ ಅಯೋಗಿಗಳಿಗೂ) ಶರೀರಬಾಹುಲ್ಯ ಇದೆ ಎಂದು ಹೇಗೆ ಹೇಳುತ್ತೀರಿ ? (ಅಯೋಗಿಗೂ ಶರೀರಬಾಹುಲ್ಯವಿದೆ ಎಂದು ಹೇಗೆ ಸಿದ್ಧವಾಗಿದೆ ?) ಎಂದು ಕೇಳಿದರೆ, ಅದಕ್ಕೆ ಆಚಾರ್ಯರು -

''ತತ್ತಕ್ಷೇ''

ಎಂದು ಹೇಳಿದರು. ಎಲ್ಲ ಶರೀರಗಳಲ್ಲಿ ಇರುವ ಚೇತನರಿಗೆ ಸ್ವಾಭಾವಿಕವಾಗಿ ಅಭೇದವನ್ನು ಪರರು ಅಂಗೀಕರಿಸಿದ್ದರಿಂದ, ಯೋಗಿಯಾಗದ ಒಬ್ಬನೇ ದೇವದತ್ತನಿಗೆ ದೇಹಬಾಹುಲ್ಯವು ಸಿದ್ಧವಾಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಯೋಗಿಯಾದವನಿಗೆ ಅನೇಕಶರೀರಾಧಿಷ್ಠಾತೃತ್ವ ಎಂಬ ವಿಶೇಷ ಕೂಡುವುದಿಲ್ಲ ಎಂಬುದಾಗಿ ನಾವು ಹೇಳಿದ ಅನುಪಪತ್ತಿಯನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ -

**ಟೀಕಾ :- ಅಥ ಮನ್ಯೇತ, ಏಕಸ್ಯೈವ ಯೋಗಿನೋಽನೇಕಶರೀರಗತ-ಸುಖಾನುಸಂಧಾನಾಭಾವೇಽಪಿ ಯೋಗಿನ ಏವಾನೇಕಶರೀರತ್ವಮಿತಿ ವಿಶೇಷೋ ಯುಜ್ಯತೇ । ತೇಷಾಂ ಶರೀರಾಣಾಂ ತತ್ಕರ್ಮಫಲಭೋಗಾರ್ಥತ್ವಾತ್ । ಭೋಗಸ್ಯ ಚ ಅನುಸಂಧಾನೇನ ವಿನಾಽಪ್ಯುಪಪತ್ತೇಃ । ನ ಚೈವಂ ಸಕಲದೇಹಗತಚೇತನಾನಾಂ ಸ್ವಭಾವತೋಽಭೇದೇಽಪಿ ದೇಹಬಾಹುಲ್ಯಸ್ಯ ಅಸ್ತಿ ದೇವದತ್ತಕರ್ಮಫಲ-ಭೋಗಾರ್ಥತೇತಿ ।**

**ತದೇತದಸತ್ । ಸರ್ವದೇಹಗತಾತ್ಮನಾಂ ದೇವದತ್ತಾಭೇದೇನ ಸರ್ವಕರ್ಮಣಾಮಪಿ ದೇವದತ್ತಸಂಬಂಧಿತ್ವಾಪತ್ತ್ಯಾ ಸರ್ವದೇಹಾನಾಂ ದೇವದತ್ತಕರ್ಮಫಲಭೋಗಾರ್ಥತಾಽಭಾವಾನುಪಪತ್ತೇಃ ।**

**ಅನುವಾದ :-** ಒಬ್ಬನೇ ಯೋಗಿಗೆ ಅನೇಕಶರೀರಗತಸುಖಾನುಸಂಧಾನ ಇಲ್ಲದೇ ಹೋದರೂ 'ಯೋಗಿಯಾದವನಿಗೇನೇ ಅನೇಕಶರೀರಾಧಿಷ್ಠಾತೃತ್ವ' ಎಂಬ ವಿಶೇಷವು ಉಪಪನ್ನವಾಗುತ್ತದೆ. ಕಾರಣ - ಯೋಗಿಯಾದವನು ಅವನ ಕರ್ಮಗಳ ಫಲವನ್ನು ಭೋಗ ಮಾಡುವುದಕ್ಕಾಗಿ ಅನೇಕ ಶರೀರಗಳನ್ನು ಸ್ವೀಕರಿಸಿದ್ದಾನೆ. (ಯೋಗಿಯು ಅನೇಕ ಶರೀರಗಳನ್ನು ಸ್ವೀಕರಿಸುವುದಕ್ಕೆ ಕರ್ಮಫಲಭೋಗ ಎಂಬ ಪ್ರಯೋಜನ-ವಿದೆ.) ಭೋಗವಾದರೂ ಅನುಸಂಧಾನವಿಲ್ಲದಿದ್ದರೂ ಉಪಪನ್ನವಾಗುತ್ತದೆ.

ಪ್ರಕೃತ ದೇವದತ್ತನ ವಿಷಯದಲ್ಲಿ ಹಾಗಿಲ್ಲ. ಸಕಲದೇಹಗತಚೇತನರಲ್ಲಿ ಸ್ವಾಭಾವಿಕವಾಗಿ ಅಭೇದವಿದ್ದರೂ ಸಹ ದೇಹಬಾಹುಲ್ಯವು ದೇವದತ್ತಕರ್ಮಫಲ-ಭೋಗಕ್ಕಾಗಿ ಇದ್ದದ್ದಲ್ಲ. (ಯಜ್ಞದತ್ತಾದಿ ಸಕಲಶರೀರಗಳು ದೇವದತ್ತನ

ಕರ್ಮಫಲಭೋಗಕ್ಕಾಗಿ ಇದ್ದದ್ದಲ್ಲ.) ಆದ್ದರಿಂದ "ಯೋಗಿಯ ಅನೇಕ ಶರೀರಗಳು ಅವನ ಕರ್ಮಫಲಭೋಗಕ್ಕಾಗಿ ಇದ್ದದ್ದು. ಆದರೆ ಯಜ್ಞದತ್ತಾದಿ ಸಕಲ ಶರೀರಗಳು ದೇವದತ್ತನ ಕರ್ಮಫಲಭೋಗಕ್ಕಾಗಿ ಇದ್ದದ್ದಲ್ಲ" ಎಂಬುದಾಗಿ ದೇವದತ್ತ -ಯಜ್ಞದತ್ತಾದಿ ದೇಹಬಾಹುಲ್ಯಕ್ಕೂ ಯೋಗಿಯ ದೇಹಬಾಹುಲ್ಯಕ್ಕೂ ವ್ಯತ್ಯಾಸ ಇರುವುದರಿಂದ 'ಯೋಗಿಯಾದವನಿಗೇನೇ ಅನೇಕಶರೀರಾಧಿಷ್ಠಾತೃತ್ವ' ಎಂಬ ವಿಶೇಷವು ಕೂಡುತ್ತದೆ ಎಂಬುದಾಗಿ ಶಂಕಿಸುತ್ತಾರೆ.

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ ಯಜ್ಞದತ್ತಾದಿ ಸಕಲದೇಹಗಳಲ್ಲಿರುವ ಚೇತನರಿಗೆ ದೇವದತ್ತನಿಂದ ಅಭೇದ ಇರುವುದರಿಂದ, ಯಜ್ಞದತ್ತಾದಿ ಸಕಲಚೇತನರ ಸಕಲಕರ್ಮಗಳೂ ದೇವದತ್ತಸಂಬಂಧಿ ಯಾಗುವುದರಿಂದ, ಯಜ್ಞದತ್ತಾದಿ ಸಕಲದೇಹಗಳು ದೇವದತ್ತನ ಕರ್ಮಫಲ-ಭೋಗಕ್ಕಾಗಿ ಇದ್ದದ್ದಲ್ಲ ಎನ್ನಲು ಬರುವುದಿಲ್ಲ. (ಯಜ್ಞದತ್ತಾದಿ ಸಕಲದೇಹಗಳು ದೇವದತ್ತನ ಕರ್ಮಫಲಭೋಗಕ್ಕಾಗಿಯೇ ಇದ್ದದ್ದಾಗಬೇಕಾಗುತ್ತದೆ.)

**ಟೀಕಾ :- ಅಭೇದೇಽಪಿ ದೇವದತ್ತೋಪಾಧಿಕೃತಮೇವ ಕರ್ಮ ದೇವದತ್ತಸಂಬಂಧಿ ನಾನ್ಯದಿತಿ ನಿಯಮ ಇತಿ ಚೇನ್ನ । ಅಭೇದಾದೇವ ಸರ್ವೋಪಾಧೀನಾಮಪಿ ದೇವದತ್ತೋಪಾಧಿತ್ವಾಪಾತಾತ್ । ದೇವದತ್ತಕರ್ಮನಿರ್ಮಿತ ಏವ ದೇವದತ್ತೋಪಾಧಿಃ ನೇತರೋಽಭೇದೇಽಪೀತಿ ಚೇತ್, ತತ್ರಾಹ -**

**ಮೂಲ :- ಸಿದ್ಧೌ ಹಿ ಕರ್ಮಭೇದಸ್ಯ ಸ್ಯಾದುಪಾಧಿವಿಭಿನ್ನತಾ ।**
**ತತ್ಸಿದ್ಧೌ ಚೈವ ತತ್ಸಿದ್ಧಿರಿತ್ಯನ್ಯೋನ್ಯವ್ಯಪಾಶ್ರಯಃ ॥**

**ಇದಂ ದೇವದತ್ತಸ್ಯೈವ ಇದಂ ಯಜ್ಞದತ್ತಸ್ಯೈವ ಇತಿ ಕರ್ಮಭೇದಸಿದ್ಧೌ ತತ್ತತ್ಕೃತತ್ವೇನ ಅಯಂ ದೇವದತ್ತೋಪಾಧಿಃ ಅಯಂ ಯಜ್ಞದತ್ತೋಪಾಧಿಃ ಇತಿ ಉಪಾಧಿವಿಭನ್ನತಾ ಸ್ಯಾತ್ ಸ್ವರೂಪಾಭೇದೇನ ನಿಮಿತ್ತಾಂತರಾಭಾವಾತ್ । ಉಪಾಧಿಭೇದಸಿದ್ಧಾವೇವ ಕರ್ಮಭೇದಸಿದ್ಧಿಃ ಉಕ್ತಾದೇವ ಹೇತೋಃ । ತತಶ್ಚ ಅನ್ಯೋನ್ಯಾಶ್ರಯಾತ್ ನೈಕಮಪಿ ಸಿದ್ಧ್ಯತಿ ।**

**ಅನುವಾದ :-** ಸಕಲದೇಹಗಳಲ್ಲಿರುವ ಚೇತನರಿಗೆ ಅಭೇದ ಇರುವ ಕಾರಣ ಎಲ್ಲ ಕರ್ಮಗಳೂ ದೇವದತ್ತಸಂಬಂಧಿಯಾಗಬೇಕಾದ ಅತಿಪ್ರಸಂಗ ಇಲ್ಲ.

ಏಕೆಂದರೆ- ಚೇತನರಲ್ಲಿ ಅಭೇದವಿದ್ದರೂ ಸಹ ದೇವದತ್ತೋಪಾಧಿಕೃತವಾದ (ದೇವದತ್ತ ಎಂಬ ದೇಹದಿಂದ ಮಾಡಿದ) ಕರ್ಮವು ಮಾತ್ರವೇ ದೇವದತ್ತಸಂಬಂಧಿಯಾಗುತ್ತದೆ. ಹೊರತು ಯಜ್ಞದತ್ತೋಪಾಧಿಕೃತವಾದ (ಯಜ್ಞದತ್ತ ಎಂಬ ದೇಹದಿಂದ ಮಾಡಿದ) ಕರ್ಮವು ದೇವದತ್ತಸಂಬಂಧಿಯಾಗುವುದಿಲ್ಲ ಎಂಬುದಾಗಿ ನಿಯಮ ಹೇಳುತ್ತೇವೆ ಎಂದು ಶಂಕಿಸುವುದು ಸರಿಯಲ್ಲ. ಕಾರಣ ಚೇತನರಲ್ಲಿ ಅಭೇದ ಇರುವುದರಿಂದಲೇನೇ ಎಲ್ಲ ಉಪಾಧಿ(ದೇಹ)ಗಳೂ ದೇವದತ್ತೋಪಾಧಿಯಾಗಬೇಕಾಗುತ್ತದೆ. ಅಂದರೆ - ಇದು ದೇವದತ್ತೋಪಾಧಿಕೃತವಾದ ಕರ್ಮ, ಇದು ಯಜ್ಞದತ್ತೋಪಾಧಿಕೃತವಾದ ಕರ್ಮ ಎಂಬುದಾಗಿ ಕರ್ಮಭೇದವನ್ನು ಯಾವಾಗ ಹೇಳಬಹುದಿತ್ತು ? ದೇವದತ್ತೋಪಾಧಿ ಬೇರೆ, ಯಜ್ಞದತ್ತೋಪಾಧಿ ಬೇರೆ ಎಂಬುದಾಗಿ ಉಪಾಧಿಗಳಲ್ಲಿ ಭೇದ ಇದ್ದರೆ. ಆದರೆ ಉಪಾಧಿಗಳಲ್ಲಿ ಭೇದ ಹೇಳಲು ಸಾಧ್ಯವಿಲ್ಲ. ದೇಹಗತರಾದ ಚೇತನರಲ್ಲಿ ಅಭೇದ ಇರುವ ಕಾರಣ ಎಲ್ಲ ದೇಹಗಳೂ ದೇವದತ್ತೋಪಾಧಿಯೇ ಆಗಬೇಕಾಗುತ್ತದೆ ಎಂದು ಭಾವ.

ಉಪಾಧಿಗಳಲ್ಲಿ ಭೇದ ಹೇಳಬಹುದು. ಹೇಗೆಂದರೆ - ದೇಹಗತಚೇತನರಲ್ಲಿ ಅಭೇದ ಇದ್ದರೂ ಸಹ ದೇವದತ್ತಕರ್ಮನಿರ್ಮಿತವಾದ ದೇಹವು ಮಾತ್ರವೇ ದೇವದತ್ತೋಪಾಧಿ ಎನಿಸುತ್ತದೆ. ಯಜ್ಞದತ್ತಾದಿಕರ್ಮನಿರ್ಮಿತವಾದ ದೇಹಗಳು ದೇವದತ್ತೋಪಾಧಿ ಎನಿಸುವುದಿಲ್ಲ. ಹೀಗೆ ಉಪಾಧಿಭೇದ ಹೇಳಬಹುದು ಎಂದು ಶಂಕಿಸಿದರೆ, ಆದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲ :- ಸಿದ್ಧೌ ಹಿ ಕರ್ಮಭೇದಸ್ಯ ಸ್ಯಾದುಪಾಧಿವಿಭಿನ್ನತಾ ।**
**ತತ್ಸಿದ್ಧೌ ಚೈವ ತತ್ಸಿದ್ಧಿರಿತ್ಯನ್ಯೋನ್ಯವ್ಯಪಾಶ್ರಯಃ ॥**

**ಮೂಲಾರ್ಥ :- ಕರ್ಮಭೇದವು ಸಿದ್ಧವಾದರೆ ಆ ಆ ಕರ್ಮಕೃತವಾದ ಕಾರಣ ಉಪಾಧಿಭೇದವು ಸಿದ್ಧವಾಗುತ್ತದೆ. ಉಪಾಧಿಭೇದವು ಸಿದ್ಧವಾದರೆ ಆ ಆ ಉಪಾಧಿಕೃತವಾದ ಕಾರಣ ಕರ್ಮಭೇದವು ಸಿದ್ಧವಾಗುತ್ತದೆ. ಈ ರೀತಿ ಅನ್ಯೋನ್ಯಾಶ್ರಯದೋಷ ಬರುತ್ತದೆ.**

ಜೀವರಲ್ಲಿ ಅಭೇದ ಒಪ್ಪಿದ್ದರಿಂದ ಜೀವಭೇದದಿಂದಾಗಿ ಉಪಾಧಿಭೇದವನ್ನು ಹೇಳಲು ಸಾಧ್ಯವಿಲ್ಲ. ಹಾಗಾಗಿ ಕರ್ಮಭೇದದಿಂದಲೇ ಉಪಾಧಿಭೇದ ಹೇಳಬೇಕು. ಇದು ದೇವದತ್ತನದೇ ಕರ್ಮ, ಇದು ಯಜ್ಞದತ್ತನದೇ ಕರ್ಮ ಎಂಬುದಾಗಿ ಕರ್ಮಭೇದ ಸಿದ್ಧವಾದರೆ, ಆ ಆ ಕರ್ಮಕೃತವಾದ ಕಾರಣ ಇದು ದೇವದತ್ತೋಪಾಧಿ,

ಇದು ಯಜ್ಞದತ್ತೋಪಾಧಿ ಎಂಬುದಾಗಿ ಉಪಾಧಿಭೇದ ಸಿದ್ಧವಾಗುತ್ತದೆ. ಉಪಾಧಿ ಭೇದ ಸಿದ್ಧವಾದರೆ ಆ ಆ ಉಪಾಧಿಕೃತವಾದ ಕಾರಣ ಕರ್ಮಭೇದವು ಸಿದ್ಧವಾಗುತ್ತದೆ. ಈ ರೀತಿಯಾಗಿ ಅನ್ಯೋನ್ಯಾಶ್ರಯದೋಷ ಬರುತ್ತದೆ.

ಕರ್ಮಭೇದ ಸಿದ್ಧವಾದರೆ ಉಪಾಧಿಭೇದ ಸಿದ್ಧವಾಗುತ್ತದೆ ಎಂದೇನಿಲ್ಲ. ದೇವದತ್ತ ಯಜ್ಞದತ್ತಾದಿ ಚೇತನಸ್ವರೂಪದಲ್ಲಿಯೇ ಭೇದ ಇರುವುದರಿಂದ, ಸ್ವರೂಪಭೇದದಿಂದಲೇ ಉಪಾಧಿಭೇದ ಹೇಳಬಹುದು. ಅದರಂತೆಯೇ ಉಪಾಧಿ ಭೇದ ಸಿದ್ಧವಾದರೆ ಕರ್ಮಭೇದವು ಸಿದ್ಧವಾಗುತ್ತದೆ ಎಂದೇನಿಲ್ಲ. ಅಲ್ಲಿಯೂ ಸ್ವರೂಪಭೇದದಿಂದಲೇ ಕರ್ಮಭೇದ ಹೇಳಬಹುದು. ಆದ್ದರಿಂದ ಅನ್ಯೋನ್ಯಾಶ್ರಯ ದೋಷ ಬರುವುದಿಲ್ಲ ಎಂದು ಶಂಕಿಸಲು ಅವಕಾಶವೇ ಇಲ್ಲ. ಕಾರಣ ನೀವು ದೇವದತ್ತ-ಯಜ್ಞದತ್ತಾದಿ ಚೇತನಸ್ವರೂಪದಲ್ಲಿ ಅಭೇದ ಒಪ್ಪಿದ್ದರಿಂದ ಸ್ವರೂಪಭೇದದಿಂದ ಉಪಾಧಿಭೇದ-ಕರ್ಮಭೇದಗಳನ್ನು ಕೂಡಿಸಲು ಬರುವುದಿಲ್ಲ. ಪರಂತು ಉಪಾಧಿಭೇದದಿಂದಲೇ ಕರ್ಮಭೇದ, ಕರ್ಮಭೇದದಿಂದಲೇ ಉಪಾಧಿ ಭೇದ ಹೇಳಬೇಕು. ಹಾಗಾಗಿ ಅನ್ಯೋನ್ಯಾಶ್ರಯದೋಷ ಬಂದೇ ಬರುತ್ತದೆ.

ಈ ರೀತಿ ಅನ್ಯೋನ್ಯಾಶ್ರಯದೋಷ ಬರುವುದರಿಂದ ಉಪಾಧಿಭೇದ ಅಥವಾ ಕರ್ಮಭೇದ ಯಾವುದೊಂದೂ ಸಿದ್ಧವಾಗುವುದಿಲ್ಲ.

**ಟೀಕಾ :- ಕರ್ಮೋಪಾಧಿವ್ಯಕ್ತಿಭೇದಾನ್ನಾನ್ಯೋನ್ಯಾಶ್ರಯ ಇತಿ ಚೇತ್ । ತಥಾಪ್ಯನವಸ್ಥಾ ಸ್ಯಾತ್ । ಅನಾದಿತ್ವಾನ್ನೇತಿ ಚೇನ್ನ । ಅಸಿದ್ಧವಿಷಯತ್ವೇನ ಮೂಲಕ್ಷತೇಃ ।**

**ಕರ್ಮಾಣ್ಯುಪಾಧಯಶ್ಚ ವಿಭಿನ್ನಾ ಏವ ದೃಶ್ಯಂತ ಇತಿ ಚೇತ್ । ಸತ್ಯಮ್ । ತದ್ಭೇದಸ್ಯ ಸ್ವಾಭಾವಿಕಾತ್ಮಭೇದೇನೈವೋಪಪತ್ತೇಃ ।**

**ತದೇವಂ ಯೋಗಿನೋಽನುಸಂಧಾನಾಭಾವೇ ವಿಶೇಷಾಭಾವಪ್ರಸಂಗಾತ್ ಅನುಸಂಧಾನಮಂಗೀಕಾರ್ಯಂ, ಅಭೇದೋ ವಾ ತ್ಯಾಜ್ಯಃ । ಅನುಸಂಧಾನೇ ಚ ಸತಿ ಉಪಾಧಿವಿಶ್ಲೇಷೋಽಕಿಂಚಿತ್ಕರ ಇತಿ ''ಸ್ವರೂಪೈಕ್ಯಾಂಗೀಕಾರೇ ಸುಖದುಃಖಾದಿಭೋಗೋ ಭೇದೇನ ನ ದೃಶ್ಯೇತ'' ಇತ್ಯುಕ್ತಂ ಯುಕ್ತಮ್ ।**

**ಅನುವಾದ :-** ಯಾವ ರೀತಿಯಾಗಿ ಬೀಜದಿಂದ ಅಂಕುರ, ಅಂಕುರದಿಂದ ಬೀಜ ಎಂಬುದಾಗಿ ಸಾಮಾನ್ಯವಾಗಿ ಅನ್ಯೋನ್ಯಸಾಪೇಕ್ಷವಾದ್ದರಿಂದ ಅನ್ಯೋನ್ಯಾಶ್ರಯವು ಪ್ರಾಪ್ತವಾದರೂ ಸಹ ಬೀಜ-ಅಂಕುರ[128] ವ್ಯಕ್ತಿಭೇದದಿಂದಾಗಿ ಅನ್ಯೋನ್ಯಾಶ್ರಯದೋಷ ಬರುವುದಿಲ್ಲವೋ, ಅದೇ ರೀತಿಯಾಗಿ ಕರ್ಮ-ಉಪಾಧಿಗಳು ಸಾಮಾನ್ಯವಾಗಿ ಅನ್ಯೋನ್ಯಸಾಪೇಕ್ಷವಾದ್ದರಿಂದ ಅನ್ಯೋನ್ಯಾಶ್ರಯವು ಪ್ರಾಪ್ತವಾದರೂ ಸಹ ಕರ್ಮ-ಉಪಾಧಿ[129] ವ್ಯಕ್ತಿಭೇದದಿಂದಾಗಿ ಅನ್ಯೋನ್ಯಾಶ್ರಯ ದೋಷ ಬರುವುದಿಲ್ಲ ಎಂದು ಶಂಕಿಸಿದರೆ, ಆದರೂ ಹಾಗೆ ಅನ್ಯೋನ್ಯಾಶ್ರಯ ದೋಷ ಬರದಿದ್ದರೂ ಅನವಸ್ಥಾದೋಷ ಬಂದೇ ಬರುತ್ತದೆ. ಅಂದರೆ ಬೀಜ-ಅಂಕುರ ವ್ಯಕ್ತಿಭೇದವನ್ನು ಅಂಗೀಕರಿಸಿ ಪರಂಪರೆಯನ್ನು ಅಂಗೀಕರಿಸಿದರೆ (ಅನಂತ ವ್ಯಕ್ತಿಗಳನ್ನು ಅಂಗೀಕರಿಸಿದರೆ) ಹೇಗೆ ಅನವಸ್ಥಾದೋಷ ಬರುವುದೋ ಹಾಗೆ ಕರ್ಮ-ಉಪಾಧಿ ವ್ಯಕ್ತಿಭೇದವನ್ನು ಅಂಗೀಕರಿಸಿ ಪರಂಪರೆಯನ್ನು ಅಂಗೀಕರಿಸಿದರೆ (ಅನಂತ ವ್ಯಕ್ತಿಗಳನ್ನು ಅಂಗೀಕರಿಸಿದರೆ) ಅನವಸ್ಥಾದೋಷ ಬಂದೇ ಬರುತ್ತದೆ ಎಂದು ಭಾವ.

ಬೀಜ-ಅಂಕುರ ವ್ಯಕ್ತಿಭೇದದಿಂದ ಪ್ರಾಪ್ತವಾದ ಅನವಸ್ಥಾವು ಹೇಗೆ ಅನಾದಿಯಾದ್ದರಿಂದ ದೋಷವಲ್ಲವೋ ಹಾಗೆ ಕರ್ಮ-ಉಪಾಧಿ ವ್ಯಕ್ತಿಭೇದದಿಂದ ಪ್ರಾಪ್ತವಾದ ಅನವಸ್ಥಾವೂ ಅನಾದಿಯಾದ್ದರಿಂಧ ದೋಷವಲ್ಲ ಎಂದು ಹೇಳುವುದು ಸರಿಯಲ್ಲ. ಕಾರಣ ಅಸಿದ್ಧವಿಷಯವಾದ್ದರಿಂದ (ಅಪ್ರಾಮಾಣಿಕವಿಷಯವಾದ್ದರಿಂದ) ಮೂಲಕ್ಷತಿ ಆಗೇ ಆಗುತ್ತದೆ. ಬೀಜಾಂಕುರಸ್ಥಲದಲ್ಲಿ ಅನಾದಿಯಾದ ಕಾರಣ ಅನವಸ್ಥಾ ದೋಷವಲ್ಲ ಎನ್ನುವುದು ಯುಕ್ತವೇ ಆಗಿದೆ. ಕಾರಣ ಮೂಲಭೂತವಾದ ಅಂಕುರೋತ್ಪತ್ತಿಯು ಪ್ರತ್ಯಕ್ಷಸಿದ್ಧವಾದ್ದರಿಂದ, ಪ್ರಾಮಾಣಿಕವಾದ

---

128 ಒಂದು ಬೀಜದಿಂದ ಒಂದು ಅಂಕುರ, ಆ ಅಂಕುರದಿಂದ ಮೊದಲನೇ ಬೀಜವಲ್ಲ. ಕಿಂತು ಮತ್ತೊಂದು ಬೇರೇನೇ ಬೀಜ. ಆ ಬೀಜದಿಂದ ಮೊದಲನೇ ಅಂಕುರವಲ್ಲ, ಕಿಂತು ಮತ್ತೊಂದು ಬೇರೇನೇ ಅಂಕುರ. ಹೀಗೆ ಬೀಜ-ಅಂಕುರ ವ್ಯಕ್ತಿಗಳು ಭಿನ್ನಭಿನ್ನವಾದ್ದರಿಂದ ಅನ್ಯೋನ್ಯಾಶ್ರಯದೋಷ ಬರುವುದಿಲ್ಲ ಎಂದು ಭಾವ.

129 ಒಂದು ಕರ್ಮದಿಂದ ಒಂದು ಉಪಾಧಿ, ಆ ಉಪಾಧಿಯಿಂದ ಮೊದಲನೇ ಕರ್ಮವೇ ಅಲ್ಲ. ಕಿಂತು ಮತ್ತೊಂದು ಬೇರೇನೇ ಕರ್ಮ. ಆ ಕರ್ಮದಿಂದ ಮೊದಲನೇ ಉಪಾಧಿಯೇ ಅಲ್ಲ. ಕಿಂತು ಮತ್ತೊಂದು ಬೇರೇನೇ ಉಪಾಧಿ. ಹೀಗೆ ಕರ್ಮ-ಉಪಾಧಿವ್ಯಕ್ತಿಗಳು ಭಿನ್ನ-ಭಿನ್ನವಾದ್ದರಿಂದ ಅನ್ಯೋನ್ಯಾಶ್ರಯದೋಷ ಬರುವುದಿಲ್ಲ ಎಂದು ಭಾವ.

ಕಾರಣ ಪರಂಪರಾಕಲ್ಪಕವಾದದ್ದು ಇದೆ. ಆದರೆ ಪ್ರಕೃತ ಕರ್ಮೋಪಾಧಿವಿಷಯದಲ್ಲಿ ಹಾಗಿಲ್ಲ. ಚೇತನರಲ್ಲಿ ಅಭೇದ ಹೇಳುವ ನಿಮ್ಮ ಪಕ್ಷದಲ್ಲಿ ಕರ್ಮ-ಉಪಾಧಿ ವ್ಯಕ್ತಿಭೇದರೂಪವಾದ ಮೂಲವೇ ಅಪ್ರಾಮಾಣಿಕವಾಗಿರುವುದರಿಂದ ಆ ಮೂಲಕ್ಕೇ ಕ್ಷತಿ ಉಂಟಾಗುತ್ತದೆ. ಹೀಗೆ ಮೂಲಕ್ಷತಿ ಉಂಟಾಗುವುದರಿಂದ ಅನವಸ್ಥೆಯು ದೋಷ ಆಗೇ ಆಗುತ್ತದೆ.

ಕರ್ಮೋಪಾಧಿ ವಿಷಯದಲ್ಲಿ ಕರ್ಮ-ಉಪಾಧಿ ವ್ಯಕ್ತಿಭೇದ ಎಂಬ ಮೂಲವು ಅಸಿದ್ಧವಿಷಯವಾಗಿಲ್ಲ (ಅಪ್ರಮಾಣಿಕವಾಗಿಲ್ಲ). ಕಿಂತು ಅಂಕುರೋತ್ಪತ್ತಿಯು ಪ್ರಾಮಾಣಿಕವಾದಂತೆ ಮೂಲಭೂತವಾದ ಕರ್ಮ-ಉಪಾಧಿವ್ಯಕ್ತಿಭೇದವೂ ಪ್ರತ್ಯಕ್ಷಸಿದ್ಧವೇ ಆಗಿದ್ದರಿಂದ ಅಸಿದ್ಧವಿಷಯವಾಗಿಲ್ಲ ಎಂದು ಹೇಳುವುದು ಸರಿಯಲ್ಲ. ಕಾರಣ - ಕರ್ಮ-ಉಪಾಧಿ ವ್ಯಕ್ತಿಭೇದವು ಸ್ವಾಭಾವಿಕ ಆತ್ಮಭೇದವನ್ನು ಅಂಗೀಕರಿಸಿದರೂ ಉಪಪನ್ನವಾಗುತ್ತದೆ. (ಚೇತನರಲ್ಲಿ ಸ್ವಾಭಾವಿಕ ಅಭೇದ ಒಪ್ಪಿ ಕರ್ಮ-ಉಪಾಧಿವ್ಯಕ್ತಿಭೇದ ಪ್ರತ್ಯಕ್ಷಸಿದ್ಧವಾಗಿದೆ ಎಂದೇ ಹೇಳಬೇಕಾಗಿಲ್ಲ.)

ಆದ್ದರಿಂದ ಯೋಗಿಯಾದವನಿಗೆ ಅನುಸಂಧಾನ ಇಲ್ಲ ಎಂದಾದರೆ (50 ದೇಹಗಳಲ್ಲಿರುವ ಯೋಗಿಚೇತನನಿಗೆ ಅಭೇದವಿದೆ, ಆದರೆ ಪರಸ್ಪರ ಅನುಸಂಧಾನ ಆಗುವುದಿಲ್ಲ ಎಂದು ಹೇಳಿದರೆ) ಅಯೋಗಿಗಳಾದ ನಮ್ಮಿಂದ ಯಾವುದೇ ವೈಲಕ್ಷಣ್ಯ ಇಲ್ಲದಂತಾಗುವುದರಿಂದ (ದೇವದತ್ತ-ಯಜ್ಞದತ್ತಾದಿ ದೇಹಗಳಲ್ಲಿರುವ ಚೇತನರಿಗೆ ಅಭೇದವಿದೆ. ಆದರೆ ಪರಸ್ಪರ ಅನುಸಂಧಾನ ಆಗುವುದಿಲ್ಲ ಎಂಬುದಾಗಿ ನಮ್ಮಲ್ಲಿಯೂ ಹೇಳಲು ಬರುವುದರಿಂದ) ಯೋಗಿಗೆ ಅನುಸಂಧಾನವನ್ನು ಅಂಗೀಕರಿಸಲೇಬೇಕು. ಅಥವಾ ಅನುಸಂಧಾನ ಒಪ್ಪದಿದ್ದರೆ ಅಭೇದವನ್ನಾದರೂ ಕೈ ಬಿಡಬೇಕು. ಅನುಸಂಧಾನವನ್ನು ಅಂಗೀಕರಿಸಿದರೆ ಉಪಾಧಿವಿಶ್ಲೇಷವು ಅಕಿಂಚಿತ್ಕರವಾಗುತ್ತದೆ. ಹೀಗೆ ಉಪಾಧಿವಿಶ್ಲೇಷವು ಅಕಿಂಚಿತ್ಕರವಾಗುವುದರಿಂದ, ವಿಶ್ಲಿಷ್ಟೋಪಾಧಿಭೇದಾಭಾವವು (ಸಂಶ್ಲಿಷ್ಟೋಪಾಧಿಮತ್ತ್ವವು) ಅನುಸಂಧಾನಕ್ಕೆ ಪ್ರಯೋಜಕ ಎಂದು ಅಂಗೀಕರಿಸಿ ಪ್ರಕೃತದಲ್ಲಿ ''ದೇವದತ್ತ-ಯಜ್ಞದತ್ತಾದಿ ವಿಷಯದಲ್ಲಿ ಅಂತಹ ವಿಶ್ಲಿಷ್ಟೋಪಾಧಿಭೇದಾಭಾವ (ಸಂಶ್ಲಿಷ್ಟೋಪಾಧಿಮತ್ತ್ವ) ಇಲ್ಲವಾದ್ದರಿಂದ ಅನುಸಂಧಾನ (ಪರಸ್ಪರ ಸುಖಾದ್ಯನುಸಂಧಾನ) ಆಗುವುದಿಲ್ಲ'' ಎಂಬುದಾಗಿ ಹೇಳುವುದು ಸರಿಯಲ್ಲ.

'ಸ್ವರೂಪೈಕ್ಯಾಂಗೀಕಾರೇ ಸುಖದುಃಖಾದಿಭೋಗೋ ಭೇದೇನ ನ ದೃಶ್ಯೇತ' ''ಚೇತನರಲ್ಲಿ ಸ್ವಾಭಾವಿಕವಾಗಿ ಅಭೇದವನ್ನು ಅಂಗೀಕರಿಸುವುದಾದರೆ ಸುಖ-ದುಃಖಾದ್ಯನುಸಂಧಾನವು ಭಿನ್ನಭಿನ್ನವಾಗಿ ಆಗಬಾರದಿತ್ತು (ಪರಸ್ಪರವಾಗಿ ಸುಖದುಃಖಾದ್ಯನುಸಂಧಾನವಾಗಲಿ)'' ಎಂಬುದಾಗಿ ನಾವು ಆಪಾದನೆ ಮಾಡಿದ್ದು ಯುಕ್ತವೇ ಆಗಿದೆ ಎಂದು ಅಭಿಪ್ರಾಯ.

**ಟೀಕಾ :- ಏವಮಸತ್ಯೋಪಾಧಿನಿಮಿತ್ತಾಧ್ಯಸ್ತಭೇದಮಂಗೀಕುರ್ವತಾಂ ಸತ್ಯೋಪಾಧಿಕೃತಸತ್ಯಭೇದಮಭ್ಯುಪಗಚ್ಛತಾಂ ಚಾದ್ವೈತವಾದಿನಾಂ ಪಕ್ಷಂ ಪೃಥಜ್ ನಿರಾಕೃತ್ಯ ಸಾಧಾರಣದೋಷೇಣಾಪಿ ದೂಷಯತಿ –**

**ಮೂಲ :- ಆತ್ಮಸ್ವಭಾವಭೇದಸ್ಯ ವಿದೋಷತ್ವೇನ ಚಾಖಿಲಃ ।**
**ಪ್ರತ್ಯಕ್ಷಾದಿವಿರೋಧಾಚ್ಚ ದುಷ್ಟಃ ಪಕ್ಷೋಽಯಮಂಜಸಾ ॥**

**'ಜೀವಾತ್ಮಪರಮಾತ್ಮನೋಃ ಜೀವಾನಾಂ ಚ ಯೋ ಭೇದಃ ಸ ಸ್ವಭಾವತ ಏವ, ನ ಮಿಥ್ಯಾಸತ್ಯೋಪಾಧಿನಿಮಿತ್ತಃ' ಇತಿ ಪಕ್ಷಸ್ಯ । ವಿದೋಷತ್ವೇನ ಇತ್ಯುಪಲಕ್ಷಣಮ್ । ಪ್ರಾಮಾಣಿಕತ್ವೇನೇತ್ಯಪಿ ಜ್ಞಾತವ್ಯಮ್ । ಅಯಮಖಿಲಃ ಪಕ್ಷ ಇತ್ಯುಕ್ತೋಭಯವಿಧಾದ್ವೈತಸಿದ್ಧಾಂತಃ । ಪ್ರತ್ಯಕ್ಷಾದಿವಿರೋಧಾಚ್ಚೇತ್ಯುಪ-ಲಕ್ಷಣಮ್ । ಪ್ರಮಾಣಾಭಾವಾಚ್ಚೇತ್ಯಪಿ ದ್ರಷ್ಟವ್ಯಮ್ ।**

**ಪರಪಕ್ಷಪ್ರತಿಕ್ಷೇಪೇಣ ಸ್ವಪಕ್ಷಸಾಧನೇನ ಚ ಸಿದ್ಧಾಂತಸ್ಯ ಪ್ರತಿಷ್ಠಾ ತದಭಾವೇ ದುಷ್ಟತಾ । ಪರಪಕ್ಷಪ್ರತಿಕ್ಷೇಪೋ ದ್ವಿವಿಧಃ ಬಾಧಕಸಾಧಕಭಾವಾಭಾವ-ವ್ಯುತ್ಪಾದನಭೇದಾತ್ । ಸ್ವಪಕ್ಷಸಾಧನಮಪಿ ಸಾಧಕಬಾಧಕಭಾವಾಭಾವ-ವ್ಯುತ್ಪಾದನಭೇದೇನ ದ್ವಿವಿಧಮ್ ।**

**ತತ್ರೈಕೈಕಸ್ಯಾಪ್ಯಭಾವೋ ದುಷ್ಟತ್ವಹೇತುಃ ಕಿಮು ಸರ್ವಸ್ಯೇತಿ । ತದಿದಮುಕ್ತಂ ಅಂಜಸಾ ಇತಿ । ತತ್ರ ಆತ್ಮಸ್ವಭಾವಭೇದಬಾಧಕಸ್ಯ ತದಭೇದಸಾಧಕಸ್ಯ ಚಾಭಾವೋಽನ್ಯತ್ರ ವ್ಯುತ್ಪಾದಿತಃ ॥**

**ಅನುವಾದ :-** ಈ ರೀತಿಯಾಗಿ 'ಉಪಾಧಿಯೂ ಮಿಥ್ಯಾ ತನ್ನಿಮಿತ್ತವಾದ ಭೇದವೂ ಮಿಥ್ಯಾ' ಎಂದು ಹೇಳುವ ಅದ್ವೈತವಾದಿಗಳ ಪಕ್ಷವನ್ನು ಹಾಗೂ 'ಉಪಾಧಿಯೂ ಸತ್ಯ ತನ್ನಿಮಿತ್ತವಾದ ಭೇದವೂ ಸತ್ಯ' ಎಂದು ಹೇಳುವ

ಅದ್ವೈತವಾದಿಗಳ (ಭಾಸ್ಕರಾಚಾರ್ಯರ) ಪಕ್ಷವನ್ನು ಪ್ರತ್ಯೇಕ ಪ್ರತ್ಯೇಕವಾಗಿ ನಿರಾಕರಣೆ ಮಾಡಿ, ಉಭಯಪಕ್ಷಕ್ಕೂ ಸಾಧಾರಣವಾದ ದೋಷವನ್ನು ಹೇಳುವ ಮೂಲಕವಾಗಿಯೂ ಎರಡೂ ಪಕ್ಷವನ್ನು ನಿರಾಕರಣೆ ಮಾಡುತ್ತಾರೆ -

**ಮೂಲ - ಆತ್ಮಸ್ವಭಾವಭೇದಸ್ಯ ವಿದೋಷತ್ವೇನ ಚಾಖಿಲಃ ।**
**ಪ್ರತ್ಯಕ್ಷಾದಿವಿರೋಧಾಚ್ಚ ದುಷ್ಟಃ ಪಕ್ಷೋಽಯಮಂಜಸಾ ॥**

**ಮೂಲಾರ್ಥ :- ''ಜೀವ-ಪರಮಾತ್ಮರ ಹಾಗೂ ಜೀವರಲ್ಲಿನ ಭೇದವು ಸ್ವಾಭಾವಿಕವೇ ಆಗಿದೆ. ಹೊರತು ಮಿಥ್ಯೋಪಾಧಿನಿಮಿತ್ತವೂ ಅಲ್ಲ, ಸತ್ಯೋಪಾಧಿ ನಿಮಿತ್ತವೂ ಅಲ್ಲ'' ಎಂಬ ಪಕ್ಷವು ನಿರ್ದುಷ್ಟವಾದ್ದರಿಂದ, ಹಿಂದೆ ಹೇಳಿದಂತಹ ಉಭಯವಿಧ ಅದ್ವೈತಸಿದ್ಧಾಂತವೂ ಪ್ರತ್ಯಕ್ಷಾದಿವಿರೋಧ ಬರುವ ಕಾರಣ ದುಷ್ಟವಾಗಿದೆ ಎಂದು ಅರ್ಥ.**

''ಜೀವಾತ್ಮ-ಪರಮಾತ್ಮರಲ್ಲಿ ಯಾವ ಭೇದವಿದೆಯೋ ಮತ್ತು ಜೀವರಲ್ಲಿ ಪರಸ್ಪರವಾಗಿ ಯಾವ ಭೇದವಿದೆಯೋ ಆ ಆತ್ಮಭೇದವು ಸ್ವಾಭಾವಿಕವಾದದ್ದೇ ಆಗಿದೆ. ಹೊರತು ಮಿಥ್ಯೋಪಾಧಿನಿಮಿತ್ತವೂ ಅಲ್ಲ. ಸತ್ಯೋಪಾಧಿನಿಮಿತ್ತವೂ ಅಲ್ಲ'' ಎಂಬ ಪಕ್ಷವು (ಆತ್ಮರಲ್ಲಿ ಸ್ವಾಭಾವಿಕವಾಗಿ ಇರುವ ಭೇದವು) ನಿರ್ದುಷ್ಟವಾದ್ದರಿಂದ ಹಾಗೂ ಪ್ರಾಮಾಣಿಕವಾದ್ದರಿಂದ ಮಿಥ್ಯೋಪಾಧಿನಿಮಿತ್ತಮಿಥ್ಯಾಭೇದ ಸತ್ಯೋಪಾಧಿ ನಿಮಿತ್ತಸತ್ಯಭೇದ ಎಂದು ಹೇಳುವ ಉಭಯವಿಧವಾದ ಅದ್ವೈತಸಿದ್ಧಾಂತಗಳೂ ಪ್ರತ್ಯಕ್ಷಾದಿವಿರೋಧ ಬರುವುದರಿಂದ ಹಾಗೂ ಸಾಧಕಪ್ರಮಾಣ ಇಲ್ಲವಾದ್ದರಿಂದಲೂ ದುಷ್ಟವಾಗಿವೆ.

ಪರಪಕ್ಷಪ್ರತಿಕ್ಷೇಪ (ಪರಮತನಿರಾಕರಣೆ) ಮಾಡುವುದರಿಂದ ಹಾಗೂ ಸ್ವಪಕ್ಷಸಾಧನ ಮಾಡುವುದರಿಂದ ಸಿದ್ಧಾಂತದ ಸ್ಥಾಪನೆ ಚೆನ್ನಾಗಿ ಆಗುತ್ತದೆ. ಪರಪಕ್ಷಪ್ರತಿಕ್ಷೇಪ ಮಾಡದಿದ್ದರೆ ಹಾಗೂ ಸ್ವಪಕ್ಷಸಾಧನ ಮಾಡದಿದ್ದರೆ ಸಿದ್ಧಾಂತವು ದುಷ್ಟವಾಗುತ್ತದೆ.

ಇದರಲ್ಲಿ ಪರಪಕ್ಷಪ್ರತಿಕ್ಷೇಪವು ಎರಡುವಿಧವಾಗಿದೆ -

1) ಪರಪಕ್ಷದಲ್ಲಿ ಬಾಧಕಭಾವವ್ಯುತ್ಪಾದನ ಮಾಡುವುದು
(ಬಾಧಕವಿದೆ ಎಂದು ತೋರಿಸುವುದು)

2) ಪರಪಕ್ಷದಲ್ಲಿ ಸಾಧಕಾಭಾವವ್ಯುತ್ಪಾದನ ಮಾಡುವುದು
(ಸಾಧಕಪ್ರಮಾಣವಿಲ್ಲ ಎಂದು ತೋರಿಸುವುದು)

ಅದರಂತೆ ಸ್ವಪಕ್ಷಸಾಧನವೂ ಸಹ ಎರಡುವಿಧವಾಗಿದೆ -

1) ಸ್ವಪಕ್ಷದಲ್ಲಿ ಸಾಧಕಭಾವವ್ಯುತ್ಪಾದನ ಮಾಡುವುದು
(ಸಾಧಕಪ್ರಮಾಣವಿದೆ ಎಂದು ತೋರಿಸುವುದು)

2) ಸ್ವಪಕ್ಷದಲ್ಲಿ ಬಾಧಕಾಭಾವವ್ಯುತ್ಪಾದನ ಮಾಡುವುದು
(ಬಾಧಕವಿಲ್ಲ ಎಂದು ತೋರಿಸುವುದು)

ಇವುಗಳಲ್ಲಿ ಒಂದೊಂದರ ಅಭಾವವೂ ದುಷ್ಟತ್ವಕ್ಕೆ ಹೇತುವಾಗುತ್ತದೆ. ಅಂದರೆ ಪರಪಕ್ಷಪ್ರತಿಕ್ಷೇಪದ ಅಭಾವವು ಅಥವಾ ಸ್ವಪಕ್ಷಸಾಧನದ ಅಭಾವವು ಸಿದ್ಧಾಂತಕ್ಕೆ ದುಷ್ಟತ್ವವನ್ನು ತಂದುಕೊಡುತ್ತದೆ. ಸಿದ್ಧಾಂತ ಪ್ರತಿಷ್ಠಾಪಕವಾಗುವುದಿಲ್ಲ ಎಂದು ಅಭಿಪ್ರಾಯ. ಅದೇ ರೀತಿಯಾಗಿ ಬಾಧಕಸದ್ಭಾವವ್ಯುತ್ಪಾದನೆಯ ಅಭಾವವು ಅಥವಾ ಸಾಧಕಾಭಾವವ್ಯುತ್ಪಾದನೆಯ ಅಭಾವವು ಪರಪಕ್ಷಕ್ಕೆ ದುಷ್ಟತ್ವವನ್ನು ತಂದುಕೊಡುತ್ತದೆ. ಪರಪಕ್ಷಪ್ರತಿಕ್ಷೇಪಕವಾಗುವುದಿಲ್ಲ ಎಂದು ಅಭಿಪ್ರಾಯ.

ಹಾಗಾದರೆ ಪರಪಕ್ಷಪ್ರತಿಕ್ಷೇಪ + ಸ್ವಪಕ್ಷಸಾಧನ ಹೀಗೆ ಸಿದ್ಧಾಂತಪ್ರತಿಷ್ಠಾಪಕವಾದವುಗಳು ಎರಡು. ಇವೆರಡರ ಅಭಾವ. ಅದೇ ರೀತಿಯಾಗಿ ಬಾಧಕಸದ್ಭಾವವ್ಯುತ್ಪಾದನೆ+ಸಾಧಕಾಭಾವವ್ಯುತ್ಪಾದನೆ ಹೀಗೆ ಪರಪಕ್ಷಪ್ರತಿಕ್ಷೇಪಕವಾದವುಗಳು ಎರಡು. ಇವೆರಡರ ಅಭಾವ. ಈ ನಾಲ್ಕು ಅಭಾವಗಳಲ್ಲಿ ಒಂದೊಂದರ ಅಭಾವವೂ ದುಷ್ಟತ್ವಕ್ಕೆ ಹೇತುವಾಗುತ್ತದೆ ಎಂದಮೇಲೆ ಈ ನಾಲ್ಕರ ಅಭಾವಗಳೂ ದುಷ್ಟತ್ವಕ್ಕೆ ಹೇತುವಾಗುತ್ತವೆ ಎಂದು ಏನು ಹೇಳುವುದು ?

ಸಿದ್ಧಾಂತಪ್ರತಿಷ್ಠಾಪಕವಾದವುಗಳು ಎರಡು. ಪರಪಕ್ಷಪ್ರತಿಕ್ಷೇಪಕವಾದವುಗಳು ಎರಡು. ಹೀಗೆ ನಾಲ್ಕೂ ಪರಪಕ್ಷದಲ್ಲಿ[130] ಇಲ್ಲ. (ಅದ್ವೈತವಾದದಲ್ಲಿ ಈ ನಾಲ್ಕರ ಅಭಾವಗಳೂ ಇವೆ) ಎಂಬ ಪ್ರಮೇಯವನ್ನು ಶ್ರೀಮದಾಚಾರ್ಯರು ''ಅಂಜಸಾ'' ಎಂಬ ಪದದಿಂದ ತಿಳಿಸುತ್ತಿದ್ದಾರೆ.

---

130 ಇಲ್ಲಿ 'ಆತ್ಮಸ್ವಭಾವಭೇದಸ್ಯ ವಿದೋಷತ್ವೇನ, ಪ್ರಾಮಾಣಿಕತ್ವೇನ ಚ' ಎಂದು-ಹೇಳುವ ಮೂಲಕ ಆಚಾರ್ಯರು ಹಾಗೂ ಟೀಕಾಕಾರರು ಸಾಧಕಭಾವವ್ಯುತ್ಪಾದನೆ -ಬಾಧಕಾಭಾವವ್ಯುತ್ಪಾದನೆ ರೂಪವಾದ ಸ್ವಪಕ್ಷಸಾಧನವನ್ನು ತೋರಿಸುತ್ತಿದ್ದಾರೆ.

ಹಾಗೆಯೇ - 'ಅಯಮಖಿಲಃ ಪಕ್ಷಃ ಪ್ರತ್ಯಕ್ಷಾದಿವಿರೋಧಾತ್, ಪ್ರಮಾಣಾಭಾವಾಚ್ಚ ದುಷ್ಟಃ' ಎಂದು ಹೇಳುವ ಮೂಲಕ ಬಾಧಕಭಾವವ್ಯುತ್ಪಾದನೆ-ಸಾಧಕಾಭಾವವ್ಯುತ್ಪಾದನೆ ರೂಪವಾದ ಪರಪಕ್ಷಪ್ರತಿಕ್ಷೇಪವನ್ನೂ ತೋರಿಸುತ್ತಿದ್ದಾರೆ ಎಂದು ತಿಳಿಯುವುದು.

ಮಾಯಾವಾದಿಗಳ ಮತದಲ್ಲಿ ಸಿದ್ಧಾಂತಪ್ರತಿಷ್ಠಾಪಕವಾದ ಪರಪಕ್ಷಪ್ರತಿಕ್ಷೇಪ ಹಾಗೂ ಸ್ವಪಕ್ಷಸಾಧನ ಎರಡೂ ಇಲ್ಲ ಎನ್ನುವುದನ್ನು

''ತತ್ರ ಆತ್ಮಸ್ವಭಾವಭೇದಬಾಧಕಸ್ಯ ......'' ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ ಟೀಕಾಕೃತ್ಪಾದರು.

**ಪರಪಕ್ಷಪ್ರತಿಕ್ಷೇಪ ಇಲ್ಲ :** ಮಾಯಾವಾದಿಗಳಿಗೆ ಪರಪಕ್ಷ ಎಂದರೆ ಭೇದಪಕ್ಷ. ಆ ಭೇದಪಕ್ಷವನ್ನು ಪ್ರತಿಕ್ಷೇಪ (ನಿರಾಕರಣೆ) ಮಾಡಲು ಸಾಧ್ಯವಿಲ್ಲ. ಅಂದರೆ

- **ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್ (ಅನುಮಾನ)**
- **ಜ್ಞಾತೇ ದ್ವೈತಂ ನ ವಿದ್ಯತೇ (ಶ್ರುತಿ)**
- **ಅವಿದ್ಯಮಾನೋ ಹ್ಯವಭಾತಿ ಹಿ ದ್ವಯಃ (ಸ್ಮೃತಿ)**

ಎಂಬುದಾಗಿ ಭೇದಪಕ್ಷಕ್ಕೆ ಅನುಮಾನಾದಿಬಾಧಕಗಳನ್ನು ಹೇಳಬೇಕು. ಆದರೆ ಆತ್ಮಸ್ವಭಾವಭೇದಕ್ಕೆ ಯಾವ ಬಾಧಕಗಳೂ ಬರುವುದಿಲ್ಲ (ಅನುಮಾನಗಳು ಆಭಾಸವಾಗಿವೆ, ಶ್ರುತಿ-ಸ್ಮೃತಿಗಳು ಅನ್ಯಾರ್ಥಪರವಾಗಿವೆ) ಎಂಬುದಾಗಿ ಅನ್ಯತ್ರ = ವಿಷ್ಣುತತ್ತ್ವವಿನಿರ್ಣಯಾದಿಗಳಲ್ಲಿ ವ್ಯುತ್ಪಾದನೆ ಮಾಡಲಾಗಿದೆ.

**ಸ್ವಪಕ್ಷಸಾಧನ ಇಲ್ಲ :** ಮತ್ತು ಮಾಯಾವಾದಿಗಳಿಗೆ ಸ್ವಪಕ್ಷ ಎಂದರೆ ಅಭೇದಪಕ್ಷ. ಅಂತಹ ಅಭೇದಪಕ್ಷವನ್ನು ಸಾಧಿಸಲೂ ಬರುವುದಿಲ್ಲ. ಅಂದರೆ -

- **ಜೀವಾಃ ಪರಮಾತ್ಮನಃ ತತ್ವತೋ ನ ಭಿದ್ಯಂತೇ, ಆತ್ಮತ್ವಾತ್, ಪರಮಾತ್ಮವತ್ (ಅನುಮಾನ)**
- **ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ (ಶ್ರುತಿ)**
- **ಸ ಆತ್ಮಾ ತತ್ತ್ವಮಸಿ (ಶ್ರುತಿ)**
- **ಅಹಂ ಹರಿಃ ಸರ್ವಮಿದಂ ಜನಾರ್ದನಃ (ಸ್ಮೃತಿ)**

ಎಂಬುದಾಗಿ ಅಭೇದಪಕ್ಷಕ್ಕೆ ಸಾಧಕಗಳನ್ನು ಹೇಳಬೇಕು. ಆದರೆ ಅಭೇದಪಕ್ಷಕ್ಕೆ ಯಾವ ಸಾಧಕಗಳೂ ಇಲ್ಲ (ಅನುಮಾನಗಳು ಆಭಾಸವಾಗಿವೆ. ಶ್ರುತಿ-ಸ್ಮೃತಿಗಳು ಅನ್ಯಾರ್ಥಪರವಾಗಿವೆ) ಎಂಬುದಾಗಿ ಅನ್ಯತ್ರ = ವಿಷ್ಣುತತ್ತ್ವವಿನಿರ್ಣಯಾದಿಗಳಲ್ಲಿ ವ್ಯುತ್ಪಾದನೆ ಮಾಡಲಾಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಮಾಯಾವಾದಿಗಳ ಮತದಲ್ಲಿ ಸಿದ್ಧಾಂತಪ್ರತಿಷ್ಠಾಪಕವಾದದ್ದು ಇಲ್ಲ ಎಂದು ತಿಳಿಸಿ, ಪ್ರಕೃತ ನಮ್ಮ ಸಿದ್ಧಾಂತದಲ್ಲಿ ಸಿದ್ಧಾಂತಪ್ರತಿಷ್ಠಾಪಕವಾದದ್ದು, (ಸ್ವಪಕ್ಷಸಾಧನ-ಪರಪಕ್ಷಪ್ರತಿಕ್ಷೇಪಗಳು) ಇದೆ ಎಂದು ತಿಳಿಸಲು ಮುಂದಿನ ವಾಕ್ಯಗಳು ಹೊರಟಿವೆ ಎನ್ನುತ್ತಾರೆ-

**ಟೀಕಾ :- ಭೇದಸಾಧಕಾಭೇದಬಾಧಕವ್ಯುತ್ಪಾದನಾಯ ಉತ್ತರಂ ವಾಕ್ಯಮ್ । ತತ್ರೇದಮಾಹ - ಯದುಕ್ತಂ ''ಪ್ರತ್ಯಕ್ಷಾದಿಸಿದ್ಧೋ ಜೀವೇಶ್ವರಯೋರ್ಜೀವಾನಾಂ ಚ ಭೇದಃ ತತ ಏವ ತದಭೇದಃ ಪ್ರತ್ಯಕ್ಷಾದಿವಿರುದ್ಧಃ'' ಇತಿ ತದಯುಕ್ತಮ್ । ಸರ್ವಸ್ಯ ಹಿ ಸ್ವಾತ್ಮೈವ ಪ್ರತ್ಯಕ್ಷೋ ನ ತು ಜೀವಾಂತರಮೀಶ್ವರೋ ವಾ । ನ ಚ ಪ್ರತ್ಯಕ್ಷಾಪ್ರತ್ಯಕ್ಷಧರ್ಮಃ ಪ್ರತ್ಯಕ್ಷೋ ವಾಯುವನಸ್ಪತಿಸಂಯೋಗವತ್ । ತತ್ಕಥಂ ಭೇದಃ ಪ್ರತ್ಯಕ್ಷ ಇತ್ಯಾಶಂಕಾಂ ಪರಿಹರನ್ ಜೀವಭೇದಸ್ಯ ಪ್ರತ್ಯಕ್ಷತಾಂ ತಾವತ್ ಸಮರ್ಥಯತೇ -**

**ಮೂಲ :- ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ ।**
**ಅನ್ಯತ್ವಂ ಸ್ವಾತ್ಮನಸ್ತಸ್ಮಾತ್ ಸರ್ವೈರೇವಾನುಭೂಯತೇ ॥**

**ಅನುವಾದ :-** ಭೇದಸಾಧಕಪ್ರಮಾಣವನ್ನು ವ್ಯುತ್ಪಾದನೆ ಮಾಡುವುದಕ್ಕಾಗಿ ಹಾಗೂ ಅಭೇದಬಾಧಕವನ್ನು ವ್ಯುತ್ಪಾದನೆ ಮಾಡುವುದಕ್ಕಾಗಿ ಮುಂದಿನ ವಾಕ್ಯ ಹೊರಟಿದೆ.

ಇಲ್ಲಿ ಮಾಯವಾದಿಗಳು ಈ ರೀತಿಯಾಗಿ ಆಕ್ಷೇಪ ಮಾಡುತ್ತಾರೆ -

''ಜೀವ-ಪರಮಾತ್ಮರ ಹಾಗೂ ಜೀವರಲ್ಲಿನ ಭೇದವು ಪ್ರತ್ಯಕ್ಷಾದಿಸಿದ್ಧವಾಗಿದೆ. ಆದ್ದರಿಂದಲೇ ಜೀವ-ಪರಮಾತ್ಮರ ಹಾಗೂ ಜೀವರ ಅಭೇದವು ಪ್ರತ್ಯಕ್ಷಾದಿವಿರುದ್ಧವಾಗಿದೆ'' ಎಂಬುದಾಗಿ ನೀವು (ಭೇದವಾದಿಗಳು) ಏನು ಹೇಳಿದಿರಿ, ಅದು ಸರಿಯಾದದ್ದಲ್ಲ.

ಏಕೆಂದರೆ - 'ಅಹಂ' 'ಅಹಂ' ಎಂಬುದಾಗಿ ಅನುಭವ ಬರುವುದರಿಂದ ಎಲ್ಲರಿಗೂ ತನ್ನ ಆತ್ಮ ತಮಗೆ ಪ್ರತ್ಯಕ್ಷನಾಗಿದ್ದಾನೆಯೇ ಹೊರತು ಇತರ ಜೀವರಾಗಲೀ ಈಶ್ವರನಾಗಲೀ ಪ್ರತ್ಯಕ್ಷವಾಗಿಲ್ಲ. ಹೀಗಾಗಿ-

ಅನುಮಾನಪ್ರಯೋಗ :-

**ಸ್ವಸ್ಮಿನ್ ಜೀವಾಂತರ-ಈಶ್ವರಪ್ರತಿಯೋಗಿಕಃ ಭೇದಃ, ಅಪ್ರತ್ಯಕ್ಷೋ ಭವಿತುಮರ್ಹತಿ, ಪ್ರತ್ಯಕ್ಷಾಪ್ರತ್ಯಕ್ಷಧರ್ಮತ್ವಾತ್, ವಾಯುವನಸ್ಪತಿಸಂಯೋಗವತ್ ।**

ವಾಯು-ವನಸ್ಪತಿಗಳಲ್ಲಿ ವನಸ್ಪತಿಯು ಪ್ರತ್ಯಕ್ಷವಾದರೂ ವಾಯು ಅಪ್ರತ್ಯಕ್ಷವಾಗಿದೆ. ಆದ್ದರಿಂದ ವಾಯು-ವನಸ್ಪತಿಗಳ ಸಂಯೋಗವು ಪ್ರತ್ಯಕ್ಷ-ಅಪ್ರತ್ಯಕ್ಷಧರ್ಮವಾದ್ದರಿಂದ ಅದು ಹೇಗೆ ಅಪ್ರತ್ಯಕ್ಷವೇ ಆಗಿದೆಯೋ, ಅದರಂತೆಯೇ ಜೀವ-ಬ್ರಹ್ಮರಲ್ಲಿ ಸ್ವಾತ್ಮ- ಪರಾತ್ಮರಲ್ಲಿ ಜೀವನು (ಸ್ವಾತ್ಮನು) ಪ್ರತ್ಯಕ್ಷನಾದರೂ ಬ್ರಹ್ಮ-ಪರಾತ್ಮರು ಅಪ್ರತ್ಯಕ್ಷರಾಗಿದ್ದಾರೆ. ಆದ್ದರಿಂದ ಜೀವ-ಬ್ರಹ್ಮರ ಭೇದವು, ಸ್ವಾತ್ಮ-ಪರಾತ್ಮರ ಭೇದವು ಪ್ರತ್ಯಕ್ಷ- ಅಪ್ರತ್ಯಕ್ಷಧರ್ಮವಾದ್ದರಿಂದ ಅದೂ ಅಪ್ರತ್ಯಕ್ಷವೇ ಆಗಿದೆ.

ಅಂದಮೇಲೆ ಜೀವ-ಬ್ರಹ್ಮರ ಭೇದವು ಹಾಗೂ ಸ್ವಾತ್ಮ-ಪರಾತ್ಮರ ಭೇದವು ಹೇಗೆ ಪ್ರತ್ಯಕ್ಷಸಿದ್ಧವಾಗುತ್ತದೆ ? ಭೇದವು ಪ್ರತ್ಯಕ್ಷಸಿದ್ಧವಾಗಿಲ್ಲ ಎಂದಮೇಲೆ ಅಭೇದವು ಪ್ರತ್ಯಕ್ಷವಿರುದ್ಧ ಎನ್ನುವುದು ಸರಿಯಲ್ಲ.

ಈ ರೀತಿಯಾಗಿ ಮಾಯಾವಾದಿಗಳು ಆಕ್ಷೇಪ ಮಾಡಿದರೆ, ಈ ಆಕ್ಷೇಪವನ್ನು ಆಚಾರ್ಯರು ಪರಿಹರಿಸುವವರಾಗಿ, ಮೊದಲಿಗೆ 'ಜೀವ-ಜೀವರ ಭೇದವು ಪ್ರತ್ಯಕ್ಷಸಿದ್ಧ' ಎನ್ನುವುದನ್ನು ಸಮರ್ಥಿಸುತ್ತಾರೆ -

**ಮೂಲ :- ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ ।**
**ಅನ್ಯತ್ವಂ ಸ್ವಾತ್ಮನಸ್ತಸ್ಮಾತ್ ಸರ್ವೈರೇವಾನುಭೂಯತೇ ॥**

ಮೂಲಾರ್ಥ :- ''ಪರದೇಹಃ ಆತ್ಮವಾನ್ ಚೇಷ್ಟಾವತ್ವಾತ್ ಸ್ವದೇಹವತ್'' (ತನ್ನ ದೇಹದಂತೆ ದೇವದತ್ತಾದಿಪರದೇಹವೂ ಆತ್ಮಸಹಿತವಾಗಿದೆ, ಚೇಷ್ಟಾ ಉಳ್ಳದ್ದಾದ್ದರಿಂದ,) ಎಂಬುದಾಗಿ ಚೇಷ್ಟಾಲಿಂಗದಿಂದ ದೇವದತ್ತಾದಿಪರ-ದೇಹಗಳು ಆತ್ಮಸಹಿತವಾಗಿವೆ ಎಂದು ಸಾಧಿಸಿ (ಪರದೇಹಗತಪರಾತ್ಮನನ್ನು ಅನುಮಾನದಿಂದ ಸಿದ್ಧಪಡಿಸಿ), 'ನಾಹಂ ದೇವದತ್ತಃ' 'ನಾಹಂ ಯಜ್ಞದತ್ತಃ' ಎಂಬುದಾಗಿ ಅಂತಹ ಪರಾತ್ಮರಿಂದ ತನಗೆ ಭೇದವು ಎಲ್ಲರ ಅನುಭವಸಿದ್ಧವಾಗಿದೆ. ಆದ್ದರಿಂದ ಜೀವ-ಜೀವರ ಭೇದವು ಪ್ರತ್ಯಕ್ಷಸಿದ್ಧವಾಗಿದೆ.

**ಟೀಕಾ :-** 'ಭೇದೋ ಹಿ ನೈಕ ಏವ ಅನೇಕಧರ್ಮ್ಯಃ' ಇತ್ಯುಪಪಾದಿತಮನ್ಯತ್ರ। ಕಿಂತು ? ಏಕಸ್ಮಿನ್ ಧರ್ಮಿಣಿ ಪರಪ್ರತಿಯೋಗಿಕ ಏವ । ತಸ್ಯ ಚ ಪ್ರತ್ಯಕ್ಷತಾ ಧರ್ಮಿಣಃ ಪ್ರತ್ಯಕ್ಷತಾಂ ಪ್ರತಿಯೋಗಿನಶ್ಚ ಸ್ಮರಣಮಪೇಕ್ಷತೇ । ತತ್ರ ಧರ್ಮೀ ಸ್ವಾತ್ಮಾ ತಾವತ್ ಪ್ರತ್ಯಕ್ಷಸಿದ್ಧಃ । ಪ್ರತಿಯೋಗಿಸ್ಮೃತಿಹೇತುಶ್ಚಾನು-ಭವೋಽನುಮಾನಾತ್ ಭವತಿ । ತಥಾ ಹಿ, ಪರಶರೀರಂ ತಾವತ್ ಪ್ರತ್ಯಕ್ಷಸಿದ್ಧಮ್ । ತಸ್ಯ ಚೇಷ್ಟಾದಿಲಿಂಗೇನ ಸ್ವಶರೀರವತ್ ಸಾತ್ಮತ್ವಮನುಮಾತುಂ ಶಕ್ಯತೇ । ಚೇಷ್ಟಾ ನಾಮ ಹಿತಾಹಿತಪ್ರಾಪ್ತಿಪರಿಹಾರೇಚ್ಛಾಪೂರ್ವಕೋ ವ್ಯಾಪಾರಃ । ನ ಪರಿಸ್ಪಂದಮಾತ್ರಂ ಯೇನ ವ್ಯಭಿಚಾರಃ ಸ್ಯಾತ್ । ನ ಚೈವಂ ಸಂದಿಗ್ಧಾಸಿದ್ಧತಾ । ಹಿತಾಹಿತಪ್ರಾಪ್ತಿಪರಿಹಾರಾನುಗುಣತಾಯಾಃ ಸ್ವಾತ್ಮದೃಷ್ಟಾಂತೇನೈವಾವಗಮಾತ್ ।

ಅತಃ ತಸ್ಮಾತ್ ಪರಶರೀರಾಧಿಷ್ಠಾತುಃ ಸ್ವಾತ್ಮನೋಽನ್ಯತ್ವಂ ಪ್ರತ್ಯಕ್ಷಂ ಭವಿತುಮರ್ಹತಿ । ನ ಚೈವಂ ಸಂಭಾವನಾಮಾತ್ರಮ್ । ಸರ್ವೈರಪಿ ತು ಅನುಭೂಯತ ಏವ । ನ ಹಿ ಚೇಷ್ಟಾವಿಶೇಷಾನುಮಿತಪ್ರಯತ್ನವಿಶೇಷವತಃ ಪರಾತ್ಮನಃ ಸ್ಮೃತೌ ಸತ್ಯಾಂ ತಥಾವಿಧಪ್ರಯತ್ನವಿರಹಿಣಂ ಸ್ವಾತ್ಮಾನಂ ಪ್ರತ್ಯಕ್ಷತ ಏವಾನುಭವಂಸ್ತಸ್ಮಾತ್ ಸ್ವಾತ್ಮನೋಽನ್ಯತ್ವಂ ನಾನುಭವತಿ ಇತಿ ಯುಜ್ಯತೇ ।

**ಅನುವಾದ :-** ತಾರ್ಕಿಕಮತದಲ್ಲಿ ಒಂದೇ ಸಂಯೋಗವು ಅನೇಕಧರ್ಮಿನಿಷ್ಠ-ವಾಗಿರುವಂತೆ, ನಮ್ಮ ಸಿದ್ಧಾಂತದಲ್ಲಿ ಒಂದೇ ಭೇದವು ಅನೇಕಧರ್ಮಿನಿಷ್ಠವಲ್ಲ ಎಂಬುದಾಗಿ ಅನ್ಯತ್ರ=ವಿಷ್ಣುತತ್ತ್ವವಿನಿರ್ಣಯಾದಿಗಳಲ್ಲಿ ಉಪಪಾದನೆ ಮಾಡಲಾಗಿದೆ. ಕಿಂತು ಒಂದು ಧರ್ಮಿಯಲ್ಲಿ ಒಂದೇ ಭೇದ ಇರುತ್ತದೆ. ಅಂತಹ ಏಕಧರ್ಮಿಕವಾದ ಭೇದವು ಪರಪ್ರತಿಯೋಗಿಕವಾಗಿದೆ. (ಅನೇಕ ವಸ್ತುಪ್ರತಿಯೋಗಿಕವಾಗಿದೆ.) ಹೀಗಾಗಿ ಒಂದುವೇಳೆ ಭೇದವು ಸಂಯೋಗದಂತೆ ಅನೇಕಧರ್ಮಿನಿಷ್ಠವಾಗಿದ್ದರೆ ಆಗ ಭೇದಪ್ರತ್ಯಕ್ಷವು ಉಭಯಧರ್ಮಿಪ್ರತ್ಯಕ್ಷವನ್ನು ಅಪೇಕ್ಷಿಸುತ್ತಿತ್ತು. (ಭೇದವು ಪ್ರತ್ಯಕ್ಷವಾಗಬೇಕಾದರೆ ಎರಡು ಧರ್ಮಿಗಳೂ ಪ್ರತ್ಯಕ್ಷವಾಗಬೇಕಾಗುತ್ತಿತ್ತು.) ಪ್ರಕೃತ ಭೇದವು ಸಂಯೋಗದಂತೆ ಅನೇಕಧರ್ಮಿ-ನಿಷ್ಠವಾಗದೇ ಏಕಧರ್ಮಿಕ-ಪರಪ್ರತಿಯೋಗಿಕವಾಗಿರುವುದರಿಂದ ಭೇದಪ್ರತ್ಯಕ್ಷವು ಧರ್ಮಿಪ್ರತ್ಯಕ್ಷವನ್ನು ಮಾತ್ರ ಅಪೇಕ್ಷಿಸುತ್ತದೆ ಹಾಗೂ ಇನ್ನೊಂದೆಡೆ ಪ್ರತಿಯೋಗಿಯ ಸ್ಮರಣೆಯನ್ನು ಅಪೇಕ್ಷಿಸುತ್ತದೆ. (ಭೇದವು ಪ್ರತ್ಯಕ್ಷವಾಗಬೇಕಾದರೆ ಧರ್ಮಿಯು ಪ್ರತ್ಯಕ್ಷವಾಗಿರಬೇಕು, ಪ್ರತಿಯೋಗಿಯ ಸ್ಮರಣೆ ಇದ್ದರೆ ಸಾಕು ಎಂದು ಭಾವ.)

ಪ್ರಕೃತದಲ್ಲಿ ('ನಾಹಂ ಯಜ್ಞದತ್ತಃ' ಎಂಬುದಾಗಿ ತೋರುವ ಜೀವ-ಜೀವಭೇದವಿಷಯದಲ್ಲಿ) ಧರ್ಮಿಯಾದ ತಾನಂತೂ (ಸ್ವಾತ್ಮಾ) ಪ್ರತ್ಯಕ್ಷಸಿದ್ಧನಾಗಿದ್ದಾನೆ. 'ಅಹಂ' 'ಅಹಂ' ಎಂಬುದಾಗಿ ಅನುಭವ ಬರುವುದರಿಂದ ಧರ್ಮಿಪ್ರತ್ಯಕ್ಷ ಇದೆ ಎಂದು ತಿಳಿಯುತ್ತದೆ.

ಇನ್ನು ಪ್ರತಿಯೋಗಿಸ್ಮರಣೆ (ಪ್ರತಿಯೋಗಿಗಳಾದ ಇತರ ಜೀವರ ಸ್ಮರಣೆ) ಇರಬೇಕು. ಪ್ರಕೃತ ಅದೂ ಇದೆ. ಪ್ರತಿಯೋಗಿಸ್ಮೃತಿಹೇತುವಾದ ಅನುಭವವು ಅನುಮಾನದಿಂದ ಉಂಟಾಗುತ್ತದೆ.

ಅದು ಹೇಗೆಂದರೆ - ಪರಶರೀರವಂತೂ ಪ್ರತ್ಯಕ್ಷಸಿದ್ಧವಾಗಿದೆ. (ಯಜ್ಞದತ್ತಾದಿಗಳ ದೇಹವು ಕಣ್ಣಿಗೆ ಕಾಣುತ್ತದೆ.) ಅಂತಹ ಪ್ರತ್ಯಕ್ಷಸಿದ್ಧವಾದ ಪರಶರೀರಕ್ಕೆ ಚೇಷ್ಟಾದಿಲಿಂಗದಿಂದ ಸ್ವಶರೀರದಂತೆ ಸಾತ್ಮತ್ವವನ್ನು ಅನುಮಾನದಿಂದ ಸಾಧಿಸಬಹುದಾಗಿದೆ.

**''ಪರಶರೀರಂ ಸಾತ್ಮಕಂ ಚೇಷ್ಟಾವತ್ತ್ವಾತ್ ಸ್ವಶರೀರವತ್''**

ನಮ್ಮ ಶರೀರವು ಚೇಷ್ಟಾ ಉಳ್ಳದ್ದಾದ್ದರಿಂದ ಹೇಗೆ ಸಾತ್ಮಕವಾಗಿದೆಯೋ (ದೇವದತ್ತ ಎಂಬ ಆತ್ಮನಿಂದ ಸಹಿತವಾಗಿದೆಯೋ) ಅದೇ ರೀತಿ ಪರಶರೀರವೂ

---

131 ಭೇದಪ್ರತ್ಯಕ್ಷವನ್ನು ಕುರಿತು ಧರ್ಮಿಪ್ರತ್ಯಕ್ಷವು ಮಾತ್ರ ತಂತ್ರವಾಗಿದೆ. ಹೊರತು ಪ್ರತಿಯೋಗಿಪ್ರತ್ಯಕ್ಷವು ತಂತ್ರವಾಗಿಲ್ಲ. (ಭೇದವು ಪ್ರತ್ಯಕ್ಷವಾಗಬೇಕಾದರೆ ಧರ್ಮಿಯು ಪ್ರತ್ಯಕ್ಷವಾಗಿರಬೇಕೇ ಹೊರತು ಪ್ರತಿಯೋಗಿಯೂ ಪ್ರತ್ಯಕ್ಷವಾಗಿರಬೇಕಾಗಿಲ್ಲ.) ಹಾಗೆ ಒಂದುವೇಳೆ ಪ್ರತಿಯೋಗಿಯೂ ಪ್ರತ್ಯಕ್ಷವಾಗಿರಬೇಕು ಎನ್ನುವುದಾದರೆ,

'ಸ್ತಂಭಃ ಪಿಶಾಚೋ ನ ' ಎಂಬುದಾಗಿ ಸ್ತಂಭದಲ್ಲಿ ತೋರುವ ಪಿಶಾಚಪ್ರತಿಯೋಗಿಕವಾದ ಭೇದವು ಪ್ರತ್ಯಕ್ಷವಾಗದೇಹೋಗಬೇಕಾಗುತ್ತದೆ. (ಧರ್ಮಿಯಾದ ಸ್ತಂಭವು ಪ್ರತ್ಯಕ್ಷವಾಗಿದ್ದರೂ ಪ್ರತಿಯೋಗಿಯಾದ ಪಿಶಾಚವು ಪ್ರತ್ಯಕ್ಷವಾಗದ ಕಾರಣ ಸ್ತಂಭದಲ್ಲಿ ತೋರುವ ಪಿಶಾಚಭೇದವು ಪ್ರತ್ಯಕ್ಷವಾಗದೇಹೋಗಬೇಕಾಗುತ್ತದೆ.)

ಪ್ರಕೃತದಲ್ಲಿ ಪ್ರತಿಯೋಗಿಯಾದ ಪಿಶಾಚವು ಪ್ರತ್ಯಕ್ಷವಾಗದೇ ಹೋದರೂ 'ಸ್ತಂಭಃ ಪಿಶಾಚೋ ನ' ಎಂಬುದಾಗಿ ಸ್ತಂಭದಲ್ಲಿ ಪಿಶಾಚಭೇದ ತೋರುತ್ತದೆ ಎಂದಮೇಲೆ, ''ಭೇದಪ್ರತ್ಯಕ್ಷವನ್ನು ಕುರಿತು ಧರ್ಮಿಪ್ರತ್ಯಕ್ಷವು ಮಾತ್ರ ತಂತ್ರವಾಗಿದೆ. ಹೊರತು ಪ್ರತಿಯೋಗಿಪ್ರತ್ಯಕ್ಷ ತಂತ್ರವಲ್ಲ, ಪ್ರತಿಯೋಗಿಸ್ಮರಣೆ ಇದ್ದರೆ ಸಾಕು'' ಎಂಬ ಅಂಶ ಸಿದ್ಧವಾಗುತ್ತದೆ ಎಂದು ಭಾವ.

(ಯಜ್ಞದತ್ತಾದಿಗಳ ದೇಹವೂ) ಚೇಷ್ಟಾ ಉಳ್ಳದ್ದಾದ್ದರಿಂದ ಸಾತ್ಮಕವಾಗಿದೆ. (ಯಜ್ಞದತ್ತಾದಿರೂಪ ಆತ್ಮನಿಂದ ಸಹಿತವಾಗಿದೆ.)

ಈ ರೀತಿಯಾಗಿ ಚೇಷ್ಟಾದಿಲಿಂಗದಿಂದ ಪರಶರೀರಗಳಲ್ಲಿಯೂ ಯಜ್ಞದತ್ತಾದಿರೂಪ ಆತ್ಮರು ಇದ್ದಾರೆ ಎಂದು ಸಾಧಿಸಬಹುದಾಗಿದೆ.

ಹೀಗೆ ಅನುಮಾನ ಮಾಡುವುದು ಸರಿಯಲ್ಲ. ಏಕೆಂದರೆ - ರಥಾದಿಗಳಲ್ಲಿ ಪರಿಸ್ಪಂದರೂಪಚೇಷ್ಟಾವತ್ತ್ವಹೇತು ಇದ್ದರೂ ಅಲ್ಲಿ ಸಾತ್ಮಕತ್ವ ಸಾಧ್ಯ ಇಲ್ಲದ ಕಾರಣ ವ್ಯಭಿಚಾರ ಬರುತ್ತದೆ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ ಚೇಷ್ಟಾ ಎಂದರೆ ಕೇವಲ ಕ್ರಿಯಾ ಎಂದು ಅರ್ಥವಲ್ಲ. ಕಿಂತು -

''ಚೇಷ್ಟಾ ನಾಮ [132] ಹಿತಾಹಿತಪ್ರಾಪ್ತಿಪರಿಹಾರೇಚ್ಛಾಪೂರ್ವಕೋ ವ್ಯಾಪಾರಃ[133] ।''

ಚೇಷ್ಟಾ ಎಂದರೆ = ಹಿತಪ್ರಾಪ್ತೀಚ್ಛಾ-ಅಹಿತಪರಿಹಾರೇಚ್ಛಾಪೂರ್ವಕವಾದ (ಹಿತವಾದದ್ದನ್ನು ಪಡೆಯಬೇಕು, ಅಹಿತವಾದದ್ದನ್ನು ಬಿಡಬೇಕು ಎಂಬ ಇಚ್ಛಾಪೂರ್ವಕವಾದ) ವ್ಯಾಪಾರ ಎಂದು ಪ್ರಕೃತ ವಿವಕ್ಷಿತವಾದ ಅರ್ಥ. ಜಡವಾದ ರಥಾದಿಗಳಲ್ಲಿ ಚೇತನಾಧೀನವಾದ ಪರಿಸ್ಪಂದಾದಿರೂಪಕ್ರಿಯಾ ಬರುವುದಾದರೂ ಹಿತಪ್ರಾಪ್ತೀಚ್ಛಾ-ಅಹಿತಪರಿಹಾರೇಚ್ಛಾಪೂರ್ವಕವಾದ ವ್ಯಾಪಾರ ಬರುವುದಿಲ್ಲ-

---

132 ಹಿತವಾಗಲಿ, ಅಹಿತವೂ ದೂರವಾಗಲಿ ಎಂಬ ಇಚ್ಛಾಪೂರ್ವಕವಾದ ಪ್ರಯತ್ನವೇ ಚೇಷ್ಟಾ.

133 ವ್ಯಾಪಾರ ಎಂದರೆ ಪ್ರಯತ್ನ ಎಂದು ಅರ್ಥ. ಪ್ರಯತ್ನವು ಆತ್ಮನ ಧರ್ಮವಾಗಿದೆ. ಹಾಗಾಗಿ ಹಿತಾಹಿತಪ್ರಾಪ್ತಿಪರಿಹಾರೇಚ್ಛಾಪೂರ್ವಕಪ್ರಯತ್ನವತ್ತ್ವ ಎಂಬ ಚೇಷ್ಟಾವತ್ತ್ವವು ಪರಾತ್ಮರಲ್ಲಿ ಬರಬಹುದೇ ಹೊರತು ಜಡವಾದ ಪರಶರೀರದಲ್ಲಿ ಬರುವುದಿಲ್ಲ. ಆದ್ದರಿಂದ ಪಕ್ಷವಾದ ಪರಶರೀರದಲ್ಲಿ ಚೇಷ್ಟಾವತ್ತ್ವಹೇತುವು ಇಲ್ಲವಾದ್ದರಿಂದ ಅಸಿದ್ಧಿದೋಷ ಬರುತ್ತದೆ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ ಪ್ರಕೃತದಲ್ಲಿ ಪ್ರಯತ್ನವತ್ತ್ವ ಎಂದರೆ ಪ್ರಯತ್ನಾಯತನತ್ವ (ಪ್ರಯತ್ನಾವಚ್ಛೇದಕತ್ವ) ಎಂದು ಅರ್ಥ ವಿವಕ್ಷಿಸಲಾಗಿದೆ. ಆತ್ಮನಿಗೆ ಶರೀರ ಇಲ್ಲದೇ ಹೋದರೆ ಪ್ರಯತ್ನ ಕೂಡುವುದಿಲ್ಲ. ಹೀಗಾಗಿ ಆತ್ಮನು ಶರೀರವನ್ನು ಆಶ್ರಯಿಸಿ (ಶರೀರಾವಚ್ಛೇದೇನ) ಪ್ರಯತ್ನ ಉಳ್ಳವನಾಗಬೇಕು. ಆದ್ದರಿಂದ ಪ್ರಯತ್ನಾವಚ್ಛೇದಕತ್ವ ರೂಪವಾದ ಪ್ರಯತ್ನವತ್ತ್ವವು (ಚೇಷ್ಟಾವತ್ತ್ವವು) ಜಡವಾದ ಪರಶರೀರದಲ್ಲಿ ಬರುವುದರಿಂದ ಅಸಿದ್ಧಿದೋಷ ಬರುವುದಿಲ್ಲ ಎಂದು ಅಭಿಪ್ರಾಯ.

ವಾದ್ದರಿಂದ, ಅಲ್ಲಿ ಸಾತ್ಮಕತ್ವಸಾಧ್ಯವೂ ಇಲ್ಲ ಚೇಷ್ಟಾವತ್ವಹೇತುವೂ ಇಲ್ಲ ಹೀಗಾಗಿ ವ್ಯಭಿಚಾರ ಬರುವುದಿಲ್ಲ ಎಂದು ಭಾವ.

ಹೌದು, ಪರಚಿತ್ತವೃತ್ತಿಯಾದ ಇಚ್ಛಾದಿಗಳು ಅಪ್ರತ್ಯಕ್ಷವಾದ್ದರಿಂದ ಪರಶರೀರಾವಚ್ಛೇದೇನ ಪರಾತ್ಮರು ಮಾಡುವ ವ್ಯಾಪಾರದಲ್ಲಿ ಹಿತಾಹಿತಪ್ರಾಪ್ತಿ-ಪರಿಹಾರೇಚ್ಛಾಪೂರ್ವಕತ್ವವನ್ನು ನಿಶ್ಚಯವಾಗಿ ತಿಳಿಯಲು ಆಗುವುದಿಲ್ಲವಾದ್ದರಿಂದ ಹಿತಾಹಿತಪ್ರಾಪ್ತಿಪರಿಹಾರೇಚ್ಛಾಪೂರ್ವಕಪ್ರಯತ್ನವತ್ವ ಹೇತುವು ಸಂದಿಗ್ಧಾಸಿದ್ಧ-ವಾಗುತ್ತದೆಯಲ್ಲ ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ - ಪರಶರೀರಾವಚ್ಛೇದೇನ ಪರಾತ್ಮರು ಮಾಡುವ ವ್ಯಾಪಾರವು ಹಿತಾಹಿತಪ್ರಾಪ್ತಿ-ಪರಿಹಾರಾನುಗುಣವಾಗಿದೆ (ಪರಿಹಾರೇಚ್ಛಾಪೂರ್ವಕವಾಗಿದೆ) ಎಂಬುದನ್ನು ಸ್ವಾತ್ಮದೃಷ್ಟಾಂತದಿಂದಲೇನೇ (ಸ್ವಾತ್ಮಾವಚ್ಛೇದಕೀಭೂತ ಶರೀರದೃಷ್ಟಾಂತದಿಂದಲೇ) ತಿಳಿಯಬಹುದಾಗಿದೆ.

**ಪರಶರೀರಂ, ಹಿತಾಹಿತಪ್ರಾಪ್ತಿಪರಿಹಾರೇಚ್ಛಾಪೂರ್ವಕವ್ಯಾಪಾರವತ್ ಭವಿತುಂ ಅರ್ಹತಿ, ಪರಿಸ್ಪಂದಾಪರಪರ್ಯಾಯಚೇಷ್ಟಾವಿಶೇಷವತ್ತ್ವಾತ್, ಮಚ್ಛರೀರವತ್ ॥**

ಎಂಬ ಅನುಮಾನದಿಂದ ಪರಶರೀರದಲ್ಲಿ ಹಿತಾಹಿತಪ್ರಾಪ್ತಿಪರಿಹಾರೇಚ್ಛಾ-ಪೂರ್ವಕ ವ್ಯಾಪಾರವತ್ವವನ್ನು ನಿಶ್ಚಯಾತ್ಮಕವಾಗಿ ಸಾಧಿಸಲು ಬರುವುದರಿಂದ ಪೂರ್ವಾನುಮಾನದಲ್ಲಿ ಸಂದಿಗ್ಧಾಸಿದ್ಧಿದೋಷ ಬರುವುದಿಲ್ಲ.

ಅಂದಮೇಲೆ ಧರ್ಮಿಯಾದ ತಾನು ಪ್ರತ್ಯಕ್ಷಸಿದ್ಧನಾಗಿದ್ದಾನೆ. ಚೇಷ್ಟಾದಿಲಿಂಗದಿಂದ ಪರಶರೀರಕ್ಕೆ ಸಾತ್ಮತ್ವವನ್ನು ಸಾಧಿಸುವುದರಿಂದ ಪ್ರತಿಯೋಗಿಯಾದ ಪರಾತ್ಮರ ಅನುಭವ ಉಂಟಾಗಿ ಅದರಿಂದ ಪರಾತ್ಮರ ಸ್ಮರಣೆಯೂ ಇದೆ. ಹೀಗೆ ಧರ್ಮಿಪ್ರತ್ಯಕ್ಷ-ಪ್ರತಿಯೋಗಿಸ್ಮರಣೆ ಎರಡೂ ಇರುವುದರಿಂದ ಸ್ತಂಭದಲ್ಲಿ ಪಿಶಾಚಭೇದವು ಪ್ರತ್ಯಕ್ಷವಾಗುವಂತೆ ಸ್ವಾತ್ಮನಲ್ಲಿ ಪರಾತ್ಮರ ಭೇದವು ಪ್ರತ್ಯಕ್ಷವಾಗುತ್ತದೆ.

ಸ್ವಾತ್ಮನಿಗೆ ಪರಾತ್ಮರಿಂದ ಭೇದವು ಪ್ರತ್ಯಕ್ಷವಾಗಿಯೇ ತೋರುತ್ತದೆ ಎನ್ನುವುದು ಇದೊಂದು ಕೇವಲ [134] ಸಂಭಾವನಾ ಮಾತ್ರ ಎಂದಲ್ಲ. ಕಿಂತು ''ನಾಹಂ ಯಜ್ಞದತ್ತಃ'' ''ನಾಹಂ ಚೈತ್ರಃ'' ''ನಾಹಂ ಮೈತ್ರಃ'' ಇತ್ಯಾದಿಯಾಗಿ ಸ್ವಾತ್ಮನಿಗೆ ಪರಾತ್ಮರಿಂದ ಭೇದವು ಪ್ರತ್ಯಕ್ಷವಾಗಿಯೇ ತೋರುವುದು ಎಲ್ಲರ ಅನುಭವಸಿದ್ಧವೂ ಆಗಿದೆ.

ಪರಿಸ್ಪಂದರೂಪಚೇಷ್ಟಾವಿಶೇಷದಿಂದ ಅನುಮಿತವಾದ ಹಿತಾಹಿತಪ್ರಾಪ್ತಿ-ಪರಿಹಾರೇಚ್ಛಾಪೂರ್ವಕವ್ಯಾಪಾರರೂಪ ಪ್ರಯತ್ನವಿಶೇಷಾವಚ್ಛೇದಕ ಶರೀರ ಉಳ್ಳ ಪರಾತ್ಮರ ಸ್ಮರಣೆ (ಪ್ರತಿಯೋಗಿಸ್ಮರಣೆ) ಇರುತ್ತಿರಲು, ಹಿತಾಹಿತಪ್ರಾಪ್ತಿ-ಪರಿಹಾರೇಚ್ಛಾಪೂರ್ವಕವ್ಯಾಪಾರರೂಪ ಪ್ರಯತ್ನಾವಚ್ಛೇದಕಶರೀರರಹಿತನಾದ ತನ್ನನ್ನು ಪ್ರತ್ಯಕ್ಷವಾಗಿಯೇ ಅನುಭವಿಸುವವನಾಗಿ, ಪರಾತ್ಮರಿಂದ ತನಗೆ ಭೇದವನ್ನು ಅನುಭವಿಸುವುದಿಲ್ಲ ಎಂದು ಹೇಳಲು ಬರುವುದಿಲ್ಲ. ''ನಾಹಂ ಯಜ್ಞದತ್ತಃ'' ''ನಾಹಂ ಚೈತ್ರಃ'' ''ನಾಹಂ ಮೈತ್ರಃ'' ಇತ್ಯಾದಿಯಾಗಿ ಸ್ವಧರ್ಮಿಕ-ಪರಾತ್ಮ-ಪ್ರತಿಯೋಗಿಕಭೇದವನ್ನು ಪ್ರತ್ಯಕ್ಷವಾಗಿಯೇ ಅನುಭವಿಸುತ್ತಾನೆ. ಹೀಗಾಗಿ ಜೀವ-ಜೀವರ ಭೇದವು ಪ್ರತ್ಯಕ್ಷಸಿದ್ಧವಾಗಿದೆ ಎಂದು ಸಿದ್ಧವಾಗುತ್ತದೆ. ಸ್ವಧರ್ಮಿಕ-ಪರಪ್ರತಿಯೋಗಿಕಭೇದವು ಪ್ರತ್ಯಕ್ಷಾಪ್ರತ್ಯಕ್ಷಧರ್ಮವಾದ್ದರಿಂದ ಅಪ್ರತ್ಯಕ್ಷವಾಗಿದೆ ಎಂಬುದಾಗಿ ನೀವು ಹೇಳಿದ್ದು ಅನುಭವಬಾಧಿತವಾಗಿದೆ ಎಂದು ತಿಳಿಯಬೇಕು.

**ಟೀಕಾ :- ಸ್ಯಾದೇತತ್, ತಥಾಪಿ ತಸ್ಯ ಭೇದಸ್ಯ ಸ್ವಾಭಾವಿಕತ್ವಂ ಕುತಃ ? ಇತಿ ಚೇತ್ । ಮೈವಮ್ । ಸ್ವಾಭಾವಿಕತ್ವಂ ಹಿ ಯದಾ ಸತ್ಯತ್ವಂ ಸ್ಯಾತ್ ತದಾ ಪ್ರಮಾಣಸಿದ್ಧತ್ವಾದೇವ ತತ್ ಸಿದ್ಧ್ಯತಿ । ಪ್ರಾಮಾಣ್ಯಂ ಚ ಪ್ರತ್ಯಕ್ಷಸ್ಯ ಅನ್ಯತ್ರೋಪಪಾದಿತಮ್ । ಸತ್ಯೋಪಾಧಿಕೃತತ್ವಂ ತು ಪೂರ್ವಮೇವ ನಿರಸ್ತಮಿತಿ ನ ಪುನಃ ಪ್ರಯತಿತವ್ಯಮ್ ।**

**ಅನುವಾದ :-** ಜೀವ-ಜೀವರ ಭೇದವು ಪ್ರತ್ಯಕ್ಷಸಿದ್ಧವಾಗಿದೆ ಎಂದು ಹೇಳಿದ್ದು ಸರಿ. ಆದರೂ ಸಹ ಆ ಜೀವ-ಜೀವರ ಭೇದವು ಸ್ವಾಭಾವಿಕವೆಂದೇ ಏಕೆ ಆಗಬೇಕು ? ಎಂದು ಶಂಕೆ ಬಂದರೆ, ಅದು ಸರಿಯಲ್ಲ.

---

134 ಸಂಭಾವನಾ ಎಂದರೆ - ಉತ್ಕಟಕೋಟಿಕಃ ಸಂಶಯಃ ಸಂಭಾವನಾ । ಉತ್ಕಟವಾದ ಕೋಟಿ ಉಳ್ಳ ಸಂಶಯ. ಇತರ ಸಂಶಯಗಳಲ್ಲಿ ಎರಡೂ ಕೋಟಿಗಳ ಮೇಲೆ ಅರ್ಧ ಅರ್ಧಭಾಗ ಭಾರ ಇರುತ್ತದೆ. ಆದರೆ ಒಂದು ಕೋಟಿಯ ಮೇಲೆ ಹೆಚ್ಚು ಭಾರ ಇದ್ದರೆ ಅದು ಸಂಭಾವನಾ. ಉದಾ- ಪುರುಷತ್ವಧರ್ಮಸಹಚರಿತವಾದ ಅನೇಕಧರ್ಮಗಳ ಉಪಲಬ್ಧಿಯು ಧರ್ಮಿಯಲ್ಲಿ ಆದಾಗ ಆ ಪುರುಷತ್ವ ಎಂಬ ಕೋಟಿಯು ಉತ್ಕಟವಾಗುತ್ತದೆ. ಹಾಗಾಗಿ ಇದು ಸ್ಥಾಣುವೋ ? ಪುರುಷನೋ ? ಎಂದು ಸಂಶಯ ಬರುವುದಿಲ್ಲ. ಕಿಂತು ಪ್ರಾಯಶಃ ಇದು ಪುರುಷ ಆಗಿರಬೇಕು ಎಂದು ಸಂಶಯ ಬರುತ್ತದೆ. ಇದು ಸಂಭಾವನಾ.

ಭೇದಕ್ಕೆ ಸ್ವಾಭಾವಿಕತ್ವ ಏಕೆ ? ಎಂದು ಕೇಳುತ್ತಿರುವ ನಿಮ್ಮ ಪ್ರಕಾರ ಸ್ವಾಭಾವಿಕತ್ವ ಎಂದರೆ ಏನು ? ಸತ್ಯತ್ವ ಎಂದು ಹೇಳುತ್ತೀರೋ ? ಅಥವಾ ಸತ್ಯೋಪಾಧಿಕೃತತ್ವ ಎಂದು ಹೇಳುತ್ತೀರೋ ?

ಸ್ವಾಭಾವಿಕತ್ವ ಎಂದರೆ ಸತ್ಯತ್ವ ಎಂದು ವಿವಕ್ಷಿಸುವುದಾದರೆ, ಜೀವ-ಜೀವರ ಭೇದವು ಹಿಂದೆ ಹೇಳಿದ ಪ್ರಕಾರ ಅನುಭವರೂಪಪ್ರತ್ಯಕ್ಷಪ್ರಮಾಣ-ಸಿದ್ಧವಾದ್ದರಿಂದಲೇನೇ ಸತ್ಯವಾಗಿದೆ ಎಂದು ಸಿದ್ಧವಾಗುತ್ತದೆ. ಜೀವ-ಜೀವರ ಭೇದವು ಪ್ರತ್ಯಕ್ಷದಿಂದ ಗೃಹೀತವಾಗುತ್ತಿದೆ. ಅಂತಹ ಭೇದವನ್ನು ತಿಳಿಸುವ ಪ್ರತ್ಯಕ್ಷಪ್ರಮಾಣಕ್ಕೆ ಬಾಧಕಜ್ಞಾನ ಬರುವುದಿಲ್ಲವಾದ್ದರಿಂದ (ಭೇದವು ಅಬಾಧಿತಪ್ರತ್ಯಕ್ಷಪ್ರಮಾಣಸಿದ್ಧವಾದ್ದರಿಂದ) ಭೇದಕ್ಕೆ ಸತ್ಯತ್ವವೇ ಸಿದ್ಧಿಸುತ್ತದೆ ಎಂದು ಅಭಿಪ್ರಾಯ.

ಪ್ರತ್ಯಕ್ಷವು ಅತತ್ತ್ವಾವೇದಕವಾದ್ದರಿಂದ ಅಪ್ರಮಾಣವಾಗಿದೆ. ಹಾಗಾಗಿ ಅಂತಹ ಅಪ್ರಮಾಣಭೂತವಾದ ಪ್ರತ್ಯಕ್ಷದಿಂದ ಸಿದ್ಧವಾದ್ದರಿಂದ ಭೇದವು ಅಸತ್ಯವೇ ಆಗಿದೆ ಎಂಬುದಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ -

**''ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ ।''**

ಎಂದು ಅನುವ್ಯಾಖ್ಯಾನಾದಿಗಳಲ್ಲಿ ಪ್ರತ್ಯಕ್ಷವು ತತ್ತ್ವಾವೇದಕವೇ ಆಗಿದೆ. ಅಂತೆಯೇ ಪ್ರಮಾಣವೂ ಆಗಿದೆ ಎಂಬುದಾಗಿ ಉಪಪಾದನೆ ಮಾಡಿರುವುದರಿಂದ, ಪ್ರಮಾಣಭೂತ ಪ್ರತ್ಯಕ್ಷಸಿದ್ಧವಾದ ಕಾರಣ ಭೇದವು ಸತ್ಯವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಇನ್ನು ಸ್ವಾಭಾವಿಕತ್ವ ಎಂದರೆ ಸತ್ಯೋಪಾಧಿಕೃತತ್ವ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ - ಸತ್ಯೋಪಾಧಿಕೃತಸತ್ಯಭೇದಪಕ್ಷವನ್ನು

**''... ... .... ... .. ಭೇದಶ್ಚೋಪಾಧಿತಃ ಕುತಃ ।**
**ವಿದ್ಯಮಾನಸ್ಯ ಭೇದಸ್ಯ ಜ್ಞಾಪಕೋ ನೈವ ಕಾರಕಃ ॥''**

ಇತ್ಯಾದಿಯಾಗಿ ಈ ಹಿಂದೆಯೇ ನಿರಾಕರಣೆ ಮಾಡಿದ್ದರಿಂದ, ಸತ್ಯೋಪಾಧಿಕೃತತ್ವವನ್ನು ನಿರಾಕರಣೆ ಮಾಡಲು ಪುನಃ ಪ್ರಯತ್ನ ಮಾಡಬೇಕಿಲ್ಲ.

ಆದ್ದರಿಂದ ಜೀವ-ಜೀವರ ಭೇದವು ಅನುಭವರೂಪಪ್ರತ್ಯಕ್ಷಸಿದ್ಧವಾಗಿದೆ. ಅಂತೆಯೇ ಸತ್ಯವೂ ಆಗಿದೆ ಎಂದು ಸಿದ್ಧವಾಗುತ್ತದೆ.

**ಟೀಕಾ :- ಅನೇನ ಜೀವಭೇದಸ್ಯ ವಿರುದ್ಧಧರ್ಮಸಂಸರ್ಗೇಣಾನುಮಾನೇನಾಪಿ ಸಿದ್ಧಿರುಕ್ತಾ ಭವತಿ ।**

**ಅನುವಾದ :-** ಜೀವ-ಜೀವರ ಭೇದವು ಪ್ರತ್ಯಕ್ಷಸಿದ್ಧವಾಗಿದೆ ಎಂಬುದಾಗಿ ಉಪಪಾದನೆ ಮಾಡುವ -

**''ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ ।''**

ಎಂಬ ಮೂಲವಾಕ್ಯದಿಂದ ''ಜೀವ-ಜೀವರ ಭೇದವು ಕೇವಲ ಪ್ರತ್ಯಕ್ಷದಿಂದ ಸಿದ್ಧವಾಗಿದೆ ಎಂದಷ್ಟೇ ಅಲ್ಲ. ಕಿಂತು ವಿರುದ್ಧಧರ್ಮಸಂಸರ್ಗರೂಪವಾದ ಅನುಮಾನದಿಂದಲೂ ಸಿದ್ಧವಾಗಿದೆ'' ಎಂದು ಸೂಚಿಸುತ್ತಿದ್ದಾರೆ ಆಚಾರ್ಯರು.

ಅಂದರೆ -

''ಪ್ರಯತ್ನವಿಶೇಷವತಃ ಪರಾತ್ಮನಃ ಸ್ಮೃತೌ ಸತ್ಯಾಂ ತಥಾವಿಧಪ್ರಯತ್ನ ವಿರಹಿಣಂ ಸ್ವಾತ್ಮಾನಂ ಅನುಭವನ್'' ಎಂಬುದಾಗಿ ಸ್ವಾತ್ಮ-ಪರಾತ್ಮರಲ್ಲಿ ಪ್ರಯತ್ನವಿಶೇಷವತ್ತ್ವ - ತದ್ರಹಿತತ್ವ ರೂಪವಾದ ವಿರುದ್ಧಧರ್ಮಸಂಸರ್ಗವನ್ನು ಉಪಪಾದನೆ ಮಾಡಿದ್ದರಿಂದ, ಅಂತಹ ವಿರುದ್ಧಧರ್ಮಸಂಸರ್ಗರೂಪ ಅನುಮಾನದಿಂದಲೂ ಜೀವ-ಜೀವಭೇದವು ಸಿದ್ಧಿಸುತ್ತದೆ ಎಂದು ಅಭಿಪ್ರಾಯ.

ಹಾಗಾದರೆ ಜೀವ-ಜೀವಭೇದಸಾಧಕವಾದ ಅನುಮಾನದ ಆಕಾರ ಇಷ್ಟಾಗುತ್ತದೆ-

**ದೇವದತ್ತಾತ್ಮಾ, ಯಜ್ಞದತ್ತಾದೀತರಾತ್ಮಭ್ಯೋ ಭಿನ್ನಃ, ನಿರುಕ್ತಚೇಷ್ಟಾರೂಪ ಪ್ರಯತ್ನವಿಶೇಷವತ್ತ್ವತದಭಾವರೂಪವಿರುದ್ಧಧರ್ಮಾಧಿಕರಣತ್ವಾತ್ ।**

**ಯತ್ ಯದ್ವಿರುದ್ಧಧರ್ಮಾಧಿಕರಣಂ ತತ್ತತೋ ಭಿನ್ನಮ್ । ಯಥಾ ಶೀತಸ್ಪರ್ಶಾಧಿ ಕರಣಂ ಜಲಂ ಉಷ್ಣಸ್ಪರ್ಶಾಧಿಕರಣಾತ್ ಅನಲಾತ್ ।**

ಅನುಮಾನದ ಅಭಿಪ್ರಾಯ :- ದೇವದತ್ತನು ಯಜ್ಞದತ್ತಾದಿ ಇತರ ಆತ್ಮರಿಂದ ಭಿನ್ನನಾಗಿದ್ದಾನೆ. ಹಿಂದೆ ಹೇಳಿದ ಚೇಷ್ಟಾರೂಪ ಪ್ರಯತ್ನವಿಶೇಷವತ್ತ್ವ - ತದಭಾವ ಎಂಬ ವಿರುದ್ಧಧರ್ಮಗಳಿಗೆ ಅಧಿಕರಣನಾದ್ದರಿಂದ.

ಯಾವುದು ಯಾವುದಕ್ಕೆ ವಿರುದ್ಧವಾದ ಧರ್ಮಕ್ಕೆ ಅಧಿಕರಣವಾಗಿರುವುದೋ ಅದು ಅದರಿಂದ ಭಿನ್ನವಾಗಿರುತ್ತದೆ. ಉದಾಹರಣೆಗೆ - ಜಲವು ಶೀತಸ್ಪರ್ಶಕ್ಕೆ ಅಧಿ

ಕರಣವಾಗಿದೆ. ಅಂತೆಯೇ ಶೀತಸ್ಪರ್ಶಕ್ಕೆ ವಿರುದ್ಧವಾದ ಉಷ್ಣಸ್ಪರ್ಶಕ್ಕೆ ಅಧಿಕರಣವಾದ ಅಗ್ನಿಯಿಂದ ಭಿನ್ನವಾಗಿದೆ.

ಪ್ರಕೃತ ದೇವದತ್ತನಲ್ಲಿ ಚೇಷ್ಟಾರೂಪಪ್ರಯತ್ನವಿಶೇಷವತ್ತ್ವ ಇದೆ. ಯಜ್ಞದತ್ತಾದಿಗಳಲ್ಲಿ ತದಭಾವವಿದೆ. (ತದ್ವಿರುದ್ಧಧರ್ಮವಿದೆ.) ಹೀಗೆ ವಿರುದ್ಧಧರ್ಮಗಳಿಗೆ ಅಧಿಕರಣರಾದ್ದರಿಂದ ದೇವದತ್ತನು ಯಜ್ಞದತ್ತಾದಿಗಳಿಂದ ಭಿನ್ನನಾಗಿದ್ದಾನೆ ಎಂದು ಅನುಮಾನದ ಅಭಿಪ್ರಾಯ.

ಹೀಗೆ ಜೀವ-ಜೀವರ ಭೇದವು ಕೇವಲ ಪ್ರತ್ಯಕ್ಷದಿಂದಷ್ಟೇ ಸಿದ್ಧವಾಗಿಲ್ಲ. ಕಿಂತು ವಿರುದ್ಧಧರ್ಮಸಂಸರ್ಗರೂಪ ಅನುಮಾನದಿಂದಲೂ ಸಿದ್ಧವಾಗಿದೆ ಎಂದು ತಾತ್ಪರ್ಯ.

**ಟೀಕಾ :- ಏವಂ ಜೀವಾನಾಂ ಪರಸ್ಪರಭೇದಸ್ಯ ಪ್ರತ್ಯಕ್ಷತ್ವೇ ಅಸಂಭವಂ ಪರಿಹೃತ್ಯ ಪ್ರತ್ಯಕ್ಷತಾ ಚೋಪಪಾದಿತಾ । ಇದಾನೀಂ ಜೀವೇಶ್ವರಭೇದಸ್ಯ ಪ್ರತ್ಯಕ್ಷತಾಮುಪಪಾದಯತಿ-**

**ಮೂಲ :- ಅಜ್ಞತಾ ಚಾಲ್ಪಶಕ್ತಿತ್ವಂ ದುಃಖಿತ್ವಂ ಸ್ವಲ್ಪಕರ್ತೃತಾ ।**
**ಸರ್ವಜ್ಞತ್ವಾದೀಶಗುಣವಿರುದ್ಧಾ ಹ್ಯನುಭೂತಿಗಾಃ ॥**

**ಜೀವನಿಷ್ಠತಯೇತಿ ಪೂರಣೀಯಮ್ । ಹಿಶಬ್ದೋ ಯಸ್ಮಾದಿತ್ಯರ್ಥೇ । ತಸ್ಮಾದೀಶಾದಪಿ ಸ್ವಾತ್ಮನೋಽನ್ಯತ್ವಂ ಸರ್ವೈರನುಭೂಯತ ಏವೇತಿ ಪೂರ್ವೋಕ್ತಾನುವೃತ್ತ್ಯಾ ಅನ್ವಯಃ । ನ ಹೀಶಧರ್ಮವಿರುದ್ಧಧರ್ಮವಂತ-ಮಾತ್ಮಾನಂ ಪ್ರತ್ಯಕ್ಷತಃ ಪಶ್ಯನ್ ತತೋಽನ್ಯತ್ವಂ ನ ಪಶ್ಯತೀತಿ ಯುಜ್ಯತೇ । ಅತಿಸ್ಫುಟತಾಂ ಭೇದಪ್ರತ್ಯಯಸ್ಯೋಪಪಾದಯಿತುಂ ವಿರುದ್ಧಧರ್ಮಬಾಹುಲ್ಯೋಪ-ಪಾದನಮ್ ।**

**ಅನೇನ ಜೀವೇಶ್ವರಭೇದಸ್ಯ ಅನುಮಾನಸಿದ್ಧತಾ ಚೋಪಪಾದಿತಾ ಭವತಿ ।**

**ಅನುವಾದ :-** ಈ ರೀತಿಯಾಗಿ ಜೀವರ ಪರಸ್ಪರಭೇದವು ಪ್ರತ್ಯಕ್ಷವಾಗಿದೆ ಎನ್ನುವುದರ ಮೇಲೆ ಅಸಂಭಾವನಾಶಂಕೆ ಬಂದಾಗ, ಅನುಭವರೂಪ ನಿಶ್ಚಾಯಕಪ್ರಮಾಣವನ್ನು ಹೇಳುವ ಮೂಲಕ ಆ ಅಸಂಭಾವನಾಶಂಕೆಯನ್ನು ಪರಿಹರಿಸಿ, ಜೀವ-ಜೀವರ ಭೇದವು ಪ್ರತ್ಯಕ್ಷವಾಗಿದೆ ಎಂದು ಉಪಪಾದನೆ

ಮಾಡಲಾಯಿತು. ಪ್ರಕೃತದಲ್ಲಿ ಜೀವ-ಈಶ್ವರಭೇದವು ಪ್ರತ್ಯಕ್ಷವಾಗಿದೆ ಎನ್ನುವುದನ್ನು ಉಪಪಾದನೆ ಮಾಡುತ್ತಾರೆ -

**ಮೂಲ :- ಅಜ್ಞತಾ ಚಾಲ್ಪಶಕ್ತಿತ್ವಂ ದುಃಖಿತ್ವಂ ಸ್ವಲ್ಪಕರ್ತೃತಾ ।**
**ಸರ್ವಜ್ಞತ್ವಾದೀಶಗುಣವಿರುದ್ಧಾ ಹ್ಯನುಭೂತಿಗಾಃ ॥**

**(ಮೂಲಾರ್ಥ :- ಈಶ್ವರನ ಸರ್ವಜ್ಞತ್ವಾದಿಗುಣಗಳಿಗೆ ವಿರುದ್ಧವಾದ ಅಜ್ಞತ್ವ-ಅಲ್ಪಶಕ್ತಿತ್ವ-ದುಃಖಿತ್ವ-ಸ್ವಲ್ಪಕರ್ತೃತ್ವರೂಪಗುಣಗಳು ಜೀವನಿಷ್ಠವಾಗಿ ಎಲ್ಲರ ಅನುಭವಕ್ಕೆ ವಿಷಯವಾಗಿದೆ.)**

ಮೂಲದಲ್ಲಿ 'ಅನುಭೂತಿಗಾಃ' ಎನ್ನುವುದರ ಮೊದಲು 'ಜೀವನಿಷ್ಠತಯಾ' ಎಂಬುದನ್ನು ಶೇಷ ಮಾಡಿಕೊಳ್ಳಬೇಕು. ಮೂಲದಲ್ಲಿ 'ಹಿ' ಎಂಬ ಪದವು 'ಯಸ್ಮಾತ್' ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

'ತಸ್ಮಾತ್ ಈಶಾದಪಿ ಸ್ವಾತ್ಮನೋಽನ್ಯತ್ವಂ ಸರ್ವೈರನುಭೂಯತ ಏವ' ಎಂಬುದಾಗಿ ಹಿಂದೆ ಹೇಳಿದ್ದನ್ನು ಅನುವರ್ತನ ಮಾಡಿಕೊಂಡು ಅನ್ವಯ ಮಾಡಿಕೊಳ್ಳಬೇಕು. ಅಂದರೆ ಹಿ=ಯಾವ ಕಾರಣ ಈಶ್ವರನ ಸರ್ವಜ್ಞತ್ವಾದಿಗುಣಗಳಿಗೆ ವಿರುದ್ಧವಾದ ಅಜ್ಞತ್ವ- ಅಲ್ಪಶಕ್ತಿತ್ವ-ದುಃಖಿತ್ವ-ಸ್ವಲ್ಪಕರ್ತೃತ್ವರೂಪಗುಣಗಳು ಜೀವನಿಷ್ಠವಾಗಿ ಅನುಭವಕ್ಕೆ ಬರುತ್ತವೆಯೋ ಆ ಕಾರಣ ಈಶ್ವರನಿಂದಲೂ ತಮಗೆ ಭೇದವು ಎಲ್ಲರಿಂದಲೂ ಅನುಭೂತವಾಗಿಯೇ ಆಗುತ್ತದೆ ಎಂಬುದಾಗಿ ಪೂರ್ಣ ಅನ್ವಯ ಮಾಡಿದಂತಾಗುತ್ತದೆ.

ಈಶ್ವರನ ಧರ್ಮಗಳಿಗೆ ವಿರುದ್ಧವಾದ ಧರ್ಮಗಳುಳ್ಳವನನ್ನಾಗಿ ತನ್ನನ್ನು ಪ್ರತ್ಯಕ್ಷವಾಗಿ ಕಾಣುವ ಜೀವನು ಆ ಈಶ್ವರನಿಂದ ತನಗೆ ಭೇದವನ್ನು ತಿಳಿಯುವುದಿಲ್ಲ ಎನ್ನಲು ಬರುವುದಿಲ್ಲ. ಈಶ್ವರನಿಂದ ತನಗೆ ಭೇದವನ್ನು ತಿಳಿದೇ ತಿಳಿಯುತ್ತಾನೆ ಎಂದು ಭಾವ. ಭೇದಪ್ರತ್ಯಕ್ಷವು ಅತಿಸ್ಫುಟವಾಗಿದೆ ಎನ್ನುವುದನ್ನು ಉಪಪಾದನೆ ಮಾಡುವುದಕ್ಕಾಗಿ ವಿರುದ್ಧವಾದ ಅನೇಕಧರ್ಮಗಳನ್ನು ಆಚಾರ್ಯರು ಉದಾಹರಿಸಿದ್ದಾರೆ.

**ಇಲ್ಲಿ ಇಷ್ಟು ಅಭಿಪ್ರಾಯ :-** ಭೇದಪ್ರತ್ಯಕ್ಷವಾಗಬೇಕಾದರೆ ಧರ್ಮಿಪ್ರತ್ಯಕ್ಷವಿರಬೇಕು. ಪ್ರತಿಯೋಗಿಸ್ಮರಣೆ ಇದ್ದರೆ ಸಾಕು ಎಂದು ಹಿಂದೆ ಉಪಪಾದನೆ ಮಾಡಲಾಗಿದೆ. ಪ್ರಕೃತ ಜೀವ-ಈಶ್ವರರ ಭೇದವಿಷಯದಲ್ಲಿ ಧರ್ಮಿಯಾದ ಜೀವನ

ಪ್ರತ್ಯಕ್ಷವಿದೆ. ಇನ್ನು ಪ್ರತಿಯೋಗಿಯಾದ ಈಶ್ವರನ ಜ್ಞಾನ ಮಾಡಿಕೊಳ್ಳುವಾಗ ಈಶ್ವರನು ಸರ್ವಜ್ಞನಾಗಿದ್ದಾನೆ, ಸರ್ವಶಕ್ತನಾಗಿದ್ದಾನೆ, ದುಃಖರಹಿತನಾಗಿದ್ದಾನೆ, ಸರ್ವಕರ್ತೃವಾಗಿದ್ದಾನೆ ಎಂದೇ ತಿಳಿದಿದ್ದಾನೆ. ತಾನು ಅಜ್ಞ-ಅಲ್ಪಶಕ್ತ-ದುಃಖೀ-ಸ್ವಲ್ಪಕರ್ತಾ ಎಂಬುದಾಗಿಯೂ ಅನುಭವಿಸುತ್ತಾನೆ. ಹೀಗೆ ಈಶ್ವರನ ಸರ್ವಜ್ಞತ್ವಾದಿ ಧರ್ಮಗಳಿಗೆ ವಿರುದ್ಧವಾದ ಅಜ್ಞತ್ವಾದಿ ಧರ್ಮಗಳನ್ನು ಅನುಭವಿಸುವ ಜೀವನು ''ಅಲ್ಪಜ್ಞನಾದ ತಾನು ಸರ್ವಜ್ಞನಾದ ಈಶ್ವರನಿಂದ ಭಿನ್ನ'' ಎಂಬುದಾಗಿ ತನ್ನಲ್ಲಿ ಈಶ್ವರಭೇದವನ್ನು ಪ್ರತ್ಯಕ್ಷವಾಗಿಯೇ ತಿಳಿಯುತ್ತಾನೆ. ಇದು ಎಲ್ಲರ ಅನುಭವಸಿದ್ಧವೂ ಆಗಿದೆ. ಆದ್ದರಿಂದ ಜೀವ-ಜೀವರ ಭೇದದಂತೆ ಜೀವ-ಈಶ್ವರಭೇದವೂ ಪ್ರತ್ಯಕ್ಷಸಿದ್ಧವಾಗಿದೆ ಎನ್ನುವುದು ಇಲ್ಲಿನ ಸಾರಾಂಶ.

ಇಲ್ಲಿ ಜೀವ-ಈಶ್ವರರ ಭೇದವು ಪ್ರತ್ಯಕ್ಷಸಿದ್ಧವಾಗಿದೆ ಎಂದು ಉಪಪಾದನೆ ಮಾಡುವ -

**''ಅಜ್ಞತಾ ಚಾಲ್ಪಶಕ್ತಿತ್ವಂ ....''**

ಎಂಬ ಮೂಲವಾಕ್ಯದಿಂದ ''ಜೀವ-ಈಶ್ವರರ ಭೇದವು ಕೇವಲ ಪ್ರತ್ಯಕ್ಷಸಿದ್ಧವಷ್ಟೇ ಆಗಿಲ್ಲ. ಕಿಂತು ಅನುಮಾನಸಿದ್ಧವೂ ಆಗಿದೆ'' ಎಂಬುದಾಗಿ ಉಪಪಾದನೆ ಮಾಡುತ್ತಿದ್ದಾರೆ ಆಚಾರ್ಯರು.

ಹಾಗಾದರೆ ಜೀವ-ಈಶ್ವರಭೇದಸಾಧಕವಾದ ಅನುಮಾನವನ್ನು ಈ ರೀತಿಯಾಗಿ ಮಾಡಿದಂತಾಗುತ್ತದೆ -

**ಜೀವಃ, ಈಶ್ವರಾದ್ಭಿನ್ನೋ ಭವಿತುಮರ್ಹತಿ, ಈಶ್ವರೀಯಧರ್ಮವಿರುದ್ಧಧರ್ಮಾಧಿಕರಣತ್ವಾತ್ । ಯತ್ ಯದ್ವಿರುದ್ಧಧರ್ಮಾಧಿಕರಣಂ ತತ್ ತತೋ ಭಿನ್ನಮ್ । ಜಲಾನಲವತ್ ॥**

ಅನುಮಾನದ ಅಭಿಪ್ರಾಯ ಃ- ಜೀವನು, ಈಶ್ವರನಿಂಡ ಭಿನ್ನನಾಗಿದ್ದಾನೆ, ಈಶ್ವರನ ಧರ್ಮಗಳಿಗೆ ವಿರುದ್ಧವಾದ ಧರ್ಮಗಳಿಗೆ ಅಧಿಕರಣನಾದ್ದರಿಂದ.

ಯಾವುದು ಯಾವುದರ ವಿರುದ್ಧಧರ್ಮಗಳಿಗೆ ಅಧಿಕರಣವಾಗಿರುವುದೋ ಅದು ಅದರಿಂದ ಭಿನ್ನವಾಗಿರುತ್ತದೆ. ಉದಾಹರಣೆಗೆ - ಅಗ್ನಿಯು ಜಲದ ಶೀತಸ್ಪರ್ಶಗುಣಕ್ಕೆ ವಿರುದ್ಧವಾದ ಉಷ್ಣಸ್ಪರ್ಶಗುಣಕ್ಕೆ ಅಧಿಕರಣವಾದ್ದರಿಂದ ಜಲದಿಂದ ಭಿನ್ನವಾಗಿದೆ.

ಹೀಗೆ ಜೀವ-ಈಶ್ವರಭೇದವು ಪ್ರತ್ಯಕ್ಷಸಿದ್ಧವಾದಂತೆ ವಿರುದ್ಧಧರ್ಮಾಧಿಕರಣತ್ವ ರೂಪವಾದ ಅನುಮಾನದಿಂದಲೂ ಸಿದ್ಧವಾಗಿದೆ ಎಂದು ಅಭಿಪ್ರಾಯ.

**ಟೀಕಾ :- ಸ್ಯಾದೇತತ್, ಯದಿ ಸಾರ್ವಜ್ಞ್ಯಾದಿಗುಣವತ್ತಯಾ ಈಶ್ವರಃ ಸಿದ್ಧಃ ಸ್ಯಾತ್ । ತದೇವ ಕುತಃ ? ಇತ್ಯತ ಆಹ -**

**ಮೂಲ :- ಸಾರ್ವಜ್ಞ್ಯಾದಿಗುಣಾ ವಿಷ್ಣೋಃ ಶ್ರುತಿಷು ಪ್ರತಿಪಾದಿತಾಃ।**

**'ಯಃ ಸರ್ವಜ್ಞಃ ಸ ಸರ್ವವಿತ್' 'ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ' 'ಯ ಆತ್ಮಾಽಪಹತಪಾಪ್ಮಾ' 'ಸ ಹಿ ಸರ್ವಸ್ಯ ಕರ್ತಾ' ಇತ್ಯಾದ್ಯಾಸ್ವಿತಿ ಶೇಷಃ ।**

**ಅನುವಾದ :-** ಹಿಂದೆ ಹೇಳಿದ ಪ್ರಕಾರ ಜೀವ-ಈಶ್ವರರ ಭೇದವಿಷಯದಲ್ಲಿ ಪ್ರತ್ಯಕ್ಷ-ಅನುಮಾನಗಳು ಪ್ರಮಾಣವಾಗುತ್ತಿದ್ದವು. ಯಾವಾಗ ? ಒಂದುವೇಳೆ ಈಶ್ವರನು ಸಾರ್ವಜ್ಞ್ಯಾದಿಗುಣಗಳುಳ್ಳವನಾಗಿದ್ದಾನೆ ಎಂಬುದಾಗಿ ಸಿದ್ಧನಾಗಿದ್ದರೆ. ಆದರೆ 'ಈಶ್ವರನು ಸಾರ್ವಜ್ಞ್ಯಾದಿಗುಣಗಳುಳ್ಳವನಾಗಿದ್ದಾನೆ' ಎನ್ನುವುದೇ ಯಾವ ಪ್ರಮಾಣದಿಂದ ಸಿದ್ಧವಾಗಿದೆ ? ಎಂದು ಶಂಕೆ ಬಂದರೆ, ಅದಕ್ಕಾಗಿ ಆಚಾರ್ಯರು ಹೇಳಿದರು -

**ಮೂಲ :- ಸಾರ್ವಜ್ಞ್ಯಾದಿಗುಣಾ ವಿಷ್ಣೋಃ ಶ್ರುತಿಷು ಪ್ರತಿಪಾದಿತಾಃ ।**

**ಮೂಲಾರ್ಥ :- 'ಯಃ ಸರ್ವಜ್ಞಃ ಸ ಸರ್ವವಿತ್' ಮೊದಲಾದ ಶ್ರುತಿಗಳಲ್ಲಿ ವಿಷ್ಣುವಿನ ಸಾರ್ವಜ್ಞ್ಯ ಮೊದಲಾದ ಗುಣಗಳು ಪ್ರತಿಪಾದಿತವಾಗಿವೆ.**

'ಯಃ ಸರ್ವಜ್ಞಃ ಸ ಸರ್ವವಿತ್' 'ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ' 'ಯ ಆತ್ಮಾಽಪಹತಪಾಪ್ಮಾ' 'ಸ ಹಿ ಸರ್ವಸ್ಯ ಕರ್ತಾ' ಇತ್ಯಾದಿಶ್ರುತಿಗಳಲ್ಲಿ ಎಂದು ಶೇಷ ಮಾಡಿಕೊಳ್ಳಬೇಕು.

ಮೂಲದಲ್ಲಿ ''ಸಾರ್ವಜ್ಞ್ಯಾದಿಗುಣಾ ವಿಷ್ಣೋಃ'' ಎನ್ನುವಲ್ಲಿ ಆದಿಪದದಿಂದ ಪೂರ್ಣಶಕ್ತಿತ್ವ-ನಿರ್ದುಃಖತ್ವ-ಸರ್ವಕರ್ತೃತ್ವಾದಿಗುಣಗಳನ್ನು ತೆಗೆದುಕೊಳ್ಳಬೇಕು.

ಈಶ್ವರನು ಸಾರ್ವಜ್ಞ್ಯಾದಿಗುಣಗಳುಳ್ಳವನಾಗಿದ್ದಾನೆ ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗಿದೆ ? ಎಂದು ಶಂಕೆ ಬಂದರೆ, ಈಶ್ವರನ ಸಾರ್ವಜ್ಞ್ಯಾದಿ ಗುಣಗಳು ಶ್ರುತಿಗಳಲ್ಲಿ ಪ್ರತಿಪಾದಿತವಾಗಿವೆ ಎಂದು ಉತ್ತರ ಹೇಳುತ್ತಿದ್ದಾರೆ.

ಅವುಗಳಲ್ಲಿ -

ಈಶ್ವರನು ಸರ್ವಜ್ಞನಾಗಿದ್ದಾನೆ ಎಂಬ ವಿಷಯದಲ್ಲಿ '**ಯಃ ಸರ್ವಜ್ಞಃ ಸ ಸರ್ವವಿತ್**' ಎಂಬ ಶ್ರುತಿಯು ಪ್ರಮಾಣವಾಗಿದೆ.

ಈಶ್ವರನು ಪೂರ್ಣಶಕ್ತಿ ಉಳ್ಳವನಾಗಿದ್ದಾನೆ ಎಂಬ ವಿಷಯದಲ್ಲಿ '**ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ**' ಎಂಬ ಶ್ರುತಿಯು ಪ್ರಮಾಣವಾಗಿದೆ.

ಈಶ್ವರನು ನಿರ್ದುಃಖನಾಗಿದ್ದಾನೆ' ಎಂಬ ವಿಷಯದಲ್ಲಿ '**ಯ ಆತ್ಮಾಽಪಹತಪಾಪ್ಮಾ**'[135] ಎಂಬ ಶ್ರುತಿಯು ಪ್ರಮಾಣವಾಗಿದೆ.

ಈಶ್ವರನು ಸರ್ವಕರ್ತೃವಾಗಿದ್ದಾನೆ ಎಂಬ ವಿಷಯದಲ್ಲಿ '**ಸ ಹಿ ಸರ್ವಸ್ಯ ಕರ್ತಾ**' ಎಂಬ ಶ್ರುತಿಯು ಪ್ರಮಾಣವಾಗಿದೆ ಎಂಬುದಾಗಿ ಕ್ರಮ ತಿಳಿಯಬೇಕು.

**ಅವತಾರಿಕೆ :-** 'ಭೇದ ಪ್ರತ್ಯಕ್ಷವಾಗಬೇಕಾದರೆ ಪ್ರತಿಯೋಗಿಪ್ರತೀತಿ ಇದ್ದರೆ ಸಾಕು' ಎಂಬ ನಮ್ಮ ಅಭಿಪ್ರಾಯದ ಮೇಲೆ ಪೃಥಕ್ತ್ವ-ಅನ್ಯತ್ವ-ಭೇದ ಈ ಮೂರೂ ಬೇರೆ ಬೇರೆ ಎಂದು ಹೇಳುವ ತಾರ್ಕಿಕರು ಶಂಕಿಸುತ್ತಾರೆ -

**ಟೀಕಾ :- ನನು ಭೇದೋ ನಾಮ ವಸ್ತುಸ್ವರೂಪಮೇವ । ಅತಸ್ತದ್ದರ್ಶನಮೇವ ಭೇದದರ್ಶನಮಿತಿ ಕಿಂ ಪ್ರತಿಯೋಗಿಪ್ರತೀತ್ಯನುಸರಣೇನ ? ಕಿಂ ಚ ತದುಪಪಾದನಾಯ ವಿರುದ್ಧಧರ್ಮೋಪನ್ಯಾಸೇನ ? ಮೈವಮ್ । ನ ನಿರ್ವಿಶೇಷವಸ್ತುಮಾತ್ರಂ ಭೇದಃ । ತಥಾ ಸತಿ ವಸ್ತುಮಾತ್ರಸ್ಯ ಪರೇಣಾಪ್ಯಂಗೀಕೃತತ್ವಾತ್ ವಿವಾದಾನುಪಪತ್ತೇಃ ।**

**ಕಿಂ ನಾಮ ಅನ್ಯೋನ್ಯಾಭಾವ ಏವ । ಸ ಚ ರೂಪಾದಿವತ್ ವಸ್ತುನಾ ಸವಿಶೇಷಾಭಿನ್ನ ಇತ್ಯೇವ ಸ್ವರೂಪಂ ಭೇದ ಇತ್ಯಸ್ಯಾರ್ಥಃ ।**

---

135 ಯದ್ಯಪಿ ಈ ಶ್ರುತಿಯು 'ಅಪಹತಪಾಪ್ಮಾ' ಎಂಬುದಾಗಿ ಈಶ್ವರನಿಗೆ ಪಾಪವಿಲ್ಲ ಎಂದು ಹೇಳುತ್ತಿದೆ. ಹೊರತು ದುಃಖವಿಲ್ಲ ಎಂಬುದಾಗಿ ನೇರವಾಗಿ ಹೇಳುತ್ತಿಲ್ಲ. ಆದರೆ ದುಃಖಾದಿಗಳು ಪಾಪದ ಕಾರ್ಯವಾದ್ದರಿಂದ, ಕಾರಣವಾದ ಪಾಪಗಳು ಇಲ್ಲ ಎಂದು ಶ್ರುತಿ ಹೇಳಿದರೆ ಕಾರ್ಯವಾದ ದುಃಖಾದಿಗಳೂ ಇಲ್ಲ ಎಂದು ಸ್ವತಃ ಸಿದ್ಧವಾಗುತ್ತದೆ. ಈ ದೃಷ್ಟಿಯಿಂದ ಈಶ್ವರನು ನಿರ್ದುಃಖನಾಗಿದ್ದಾನೆ ಎಂಬ ವಿಷಯದಲ್ಲಿ 'ಯ ಆತ್ಮಾಽಪಹತಪಾಪ್ಮಾ' ಎಂಬ ಶ್ರುತಿಯನ್ನು ಟೀಕಾಕೃತ್ಪಾದರು ಉದಾಹರಿಸಿದ್ದಾರೆ ಎಂದು ಅಭಿಪ್ರಾಯ ತಿಳಿಯಬೇಕು.

**ಅನ್ಯೋನ್ಯಾಭಾವಶ್ಚ ಪ್ರತಿಯೋಗಿನಿರೂಪ್ಯ ಇತ್ಯುಪಪನ್ನಮೇವ ತತ್ಪ್ರತೀತ್ಯನುಸರಣಮ್ । ಸಾದೃಶ್ಯಾದಿನಾ ಸನ್ನಪ್ಯನ್ಯೋನ್ಯಾಭಾವೋ ನೋಪಲಭ್ಯತ ಇತಿ ವಿರುದ್ಧಧರ್ಮೋಪನ್ಯಾಸೋಽಪ್ಯುಪಪದ್ಯತೇ । ಅತ ಏವ ಭೇದ ಇತಿ ಪ್ರಸ್ತುತೇಽಪಿ ಅನ್ಯತ್ವಂ ಇತ್ಯುಕ್ತಮ್ ।**

**ಅನುವಾದ :-** ನಿಮ್ಮ ಸಿದ್ಧಾಂತದಲ್ಲಿ (ದ್ವೈತವೇದಾಂತದಲ್ಲಿ) ಭೇದ ಎಂದರೆ ಅದು ವಸ್ತುವಿನ ಸ್ವರೂಪವೇ ಆಗಿದೆ. (ಧರ್ಮಿಯಿಂದ ಅಭಿನ್ನವಾಗಿದೆ.) ಹಾಗಾಗಿ ವಸ್ತುಪ್ರತೀತಿಯೇ ಭೇದಪ್ರತೀತಿ ಆಗಿದೆ. ಆ ವಸ್ತುಪ್ರತೀತಿ ಬರುವುದಕ್ಕೆ ಪ್ರತಿಯೋಗಿಪ್ರತೀತಿಯ ಉಪಯೋಗ ಇಲ್ಲ. (ಘಟಪಟಾದಿ ವಸ್ತು ತೋರುವುದಕ್ಕೆ ಪ್ರತಿಯೋಗಿಪ್ರತೀತಿ ಬೇಕಾಗಿಲ್ಲ.) ಅಂದಮೇಲೆ ಭೇದಜ್ಞಾನಕ್ಕಾಗಿ ಪ್ರತಿಯೋಗಿಪ್ರತೀತಿಯನ್ನು ಅನುಸರಣೆ ಮಾಡಿದ್ದು (ಭೇದ ಪ್ರತ್ಯಕ್ಷವಾಗುವುದಕ್ಕೆ ಪ್ರತಿಯೋಗಿಸ್ಮರಣೆ ಬೇಕು ಎಂಬುದಾಗಿ ಹೇಳಿದ್ದು) ವ್ಯರ್ಥವೇ ಆಗಿದೆ.

ಮತ್ತು ವಸ್ತುಜ್ಞಾನವೇ ಭೇದಜ್ಞಾನ ಎಂದಮೇಲೆ (ವಸ್ತುಜ್ಞಾನವಾಗುವುದರಿಂದಲೇ ಭೇದಜ್ಞಾನವಾಗುವುದರಿಂದ, ವಸ್ತುಜ್ಞಾನವಾಗುವುದಕ್ಕೆ ವಿರುದ್ಧಧರ್ಮಾದಿಗಳ ಉಪಯೋಗ ಇಲ್ಲವಾದ್ದರಿಂದ) ಪ್ರತಿಯೋಗಿಪ್ರತೀತಿಗಾಗಿ ಚೇಷ್ಟಾಲಿಂಗವನ್ನು ಉಪನ್ಯಾಸ ಮಾಡಿದ್ದು, ಭೇದವನ್ನು ಉಪಪಾದನೆ ಮಾಡುವುದಕ್ಕಾಗಿ ಸಾರ್ವಜ್ಞ್ಯಾದಿರೂಪ ವಿರುದ್ಧಧರ್ಮಗಳನ್ನು ಉಪನ್ಯಾಸ ಮಾಡಿದ್ದೂ ವ್ಯರ್ಥವೇ ಆಗಿದೆ ಎಂಬುದಾಗಿ ತಾರ್ಕಿಕರು ಆಶಂಕಿಸುತ್ತಾರೆ.

ಅದು ಸರಿಯಲ್ಲ. ಭೇದವು ವಸ್ತುಸ್ವರೂಪವಾಗಿದೆ ನಿಜ. ಆದರೆ ವಸ್ತುಸ್ವರೂಪವಾಗಿದೆ ಎಂದರೆ ವಸ್ತುವಿನಿಂದ ನಿರ್ವಿಶೇಷಾಭಿನ್ನವಾಗಿದೆ ಎಂದು ಅರ್ಥವಲ್ಲ. ಹಾಗೆ ಒಂದುವೇಳೆ ಭೇದವು ವಸ್ತುವಿನಿಂದ ನಿರ್ವಿಶೇಷಾಭಿನ್ನವಾದದ್ದೇ ಆದರೆ, ವಸ್ತುವನ್ನು ಪರರೂ ಅಂಗೀಕರಿಸಿದ್ದರಿಂದ ಭೇದವನ್ನೂ ಅಂಗೀಕರಿಸಿದಂತಾಗಿ ಭೇದವಿಷಯದಲ್ಲಿ ವಿಪ್ರತಿಪತ್ತಿಯೇ ಇಲ್ಲದೇ ಹೋಗಬೇಕಾಗುತ್ತದೆ. ಈಗ ಭೇದವಿಷಯದಲ್ಲಿ ವಿಪ್ರತಿಪತ್ತಿ ಇದೆ ಎಂದಮೇಲೆ ಭೇದವು ವಸ್ತುವಿನಿಂದ ನಿರ್ವಿಶೇಷಾಭಿನ್ನ ಅಲ್ಲ ಎಂದು ತಿಳಿಯುತ್ತದೆ.

ಹಾಗಾದರೆ ಭೇದವು ವಸ್ತುವಿನ ಸ್ವರೂಪವೇ ಆಗಿಲ್ಲ (ನಿರ್ವಿಶೇಷಾಭಿನ್ನ ಅಲ್ಲ) ಎನ್ನುವುದಾದರೆ, ಭೇದ ಎಂದರೆ ಏನು ? (ಯಾವ ಪದಾರ್ಥ ?) ಭೇದವು

ವಸ್ತುಸ್ವರೂಪವಾಗಿದೆ ಎಂಬ ಮಾತಿಗೆ ಅರ್ಥವೇನು ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಉತ್ತರಿಸುತ್ತಾರೆ-

ಭೇದ ಎಂದರೆ ಅನ್ಯೋನ್ಯಾಭಾವವೇ[136] ಆಗಿದೆ. ಆ ಅನ್ಯೋನ್ಯಾಭಾವವು ರೂಪಾದಿಗಳಂತೆ ವಸ್ತುವಿನಿಂದ ಸವಿಶೇಷಾಭಿನ್ನವಾಗಿದೆ. (ಯಾವದ್ವಸ್ತುಭಾವಿಯಾದ ರೂಪ-ಪರಿಮಾಣಾದಿಗಳು ಧರ್ಮಿಯಿಂದ ಸವಿಶೇಷಾಭಿನ್ನವಾದಂತೆ ಅನ್ಯೋನ್ಯಾಭಾವವೂ ಧರ್ಮಿಯಿಂದ ಸವಿಶೇಷಾಭಿನ್ನವಾಗಿದೆ ಎಂದು ಅರ್ಥ.) ಹಾಗಾಗಿ 'ಭೇದವು ಧರ್ಮಿಸ್ವರೂಪವಾಗಿದೆ' ಎಂಬ ಮಾತಿಗೆ 'ಭೇದವು ಧರ್ಮಿಯಿಂದ ಸವಿಶೇಷಾಭಿನ್ನವಾಗಿದೆ' ಎಂದೇ ಅರ್ಥವಾಗಿದೆ.

ಅನ್ಯೋನ್ಯಾಭಾವವು ಧರ್ಮಿಯಿಂದ ಸವಿಶೇಷಾಭಿನ್ನವಾಗಿದೆ ಎಂದು ಅಂಗೀಕರಿಸಿದ್ದರಿಂದ, ಭೇದಪ್ರತ್ಯಕ್ಷಕ್ಕಾಗಿ ಪ್ರತಿಯೋಗಿಪ್ರತೀತಿಯನ್ನು ಅನುಸರಣೆ ಮಾಡಿದ್ದು ಯುಕ್ತವೇ ಆಗಿದೆ. ಏಕೆಂದರೆ-ಅನ್ಯೋನ್ಯಾಭಾವವು ಪ್ರತಿಯೋಗಿನಿರೂಪ್ಯವಾಗಿದೆ.

**''ಸದ್ಭ್ಯಾಂ ಅಧಿಕರಣಪ್ರತಿಯೋಗಿಭ್ಯಾಂ ಅಭಾವೋ ನಿರೂಪ್ಯತೇ''**

ಎಂಬ ನಿಯಮವಿರುವುದರಿಂದ, ಅನ್ಯೋನ್ಯಾಭಾವಕ್ಕೆ ವಸ್ತುವಿನಿಂದ ಸವಿಶೇಷಾಭೇದವನ್ನು ಅಂಗೀಕರಿಸಿದ್ದರಿಂದ, ವಿಶೇಷವು ಭೇದಕಾರ್ಯಕಾರಿಯಾಗಿರುವುದರಿಂದ (ಭೇದವು ಮಾಡುವ ಕಾರ್ಯಗಳನ್ನು ತತ್ಪ್ರತಿನಿಧಿಯಾಗಿ ವಿಶೇಷವು ಮಾಡುವುದರಿಂದ), ವಸ್ತುಪ್ರತೀತಿಯು ಪ್ರತಿಯೋಗಿಪ್ರತೀತಿ-ಸಾಪೇಕ್ಷವಾಗದೇ ಹೋದರೂ ಭೇದಪ್ರತೀತಿಯು ಪ್ರತಿಯೋಗಿಪ್ರತೀತಿಸಾಪೇಕ್ಷ-ವಾಗಬಹುದಾಗಿದೆ. ಆದ್ದರಿಂದ ಭೇದಪ್ರತೀತಿಗಾಗಿ ಪ್ರತಿಯೋಗಿಪ್ರತೀತ್ಯನುಸರಣ ಮಾಡಿದ್ದು ಯುಕ್ತವೇ ಆಗಿದೆ.

ಮತ್ತು ಭೇದವನ್ನು ಉಪಪಾದನೆ ಮಾಡುವುದಕ್ಕಾಗಿ ವಿರುದ್ಧಧರ್ಮಗಳನ್ನು ಉಪನ್ಯಾಸ ಮಾಡಿದ್ದೂ ಯುಕ್ತವೇ ಆಗಿದೆ. ಏಕೆಂದರೆ :- ಗೋ-ಗವಯಗಳಲ್ಲಿ,

136 ಹೊರತು ಅನ್ಯೋನ್ಯಾಭಾವದಿಂದ ಅತಿರಿಕ್ತವಾದ ಭೇದ ಎಂಬ ಪದಾರ್ಥ ಇಲ್ಲ. ಅದನ್ನು ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ -

ಪೃಥಕ್ತ್ವಾನ್ಯತ್ವಭೇದಾಸ್ತು ಪರ್ಯಾಯೇಣೈವ ಲೌಕಿಕೈಃ ।
ವ್ಯವಹ್ರಿಯಂತೇ ಸತತಂ ಲೋಕವೇದಾನುಸಾರತಃ ॥ ಇತ್ಯಾದಿಯಾಗಿ.

ದ್ರವೀಭೂತವಾದ ಘೃತ-ತೈಲಗಳಲ್ಲಿ, ದೂರಸ್ಥವಾದ ಚೂತ-ಪನಸಗಳಲ್ಲಿ ಅನ್ಯೋನ್ಯಾಭಾವವು ಇದ್ದರೂ ಸಹ ಸಾದೃಶ್ಯ-ದೂರಸ್ಥತ್ವಾದಿರೂಪವಾದ ದೋಷದಿಂದಾಗಿ ಉಪಲಬ್ಧವಾಗುವುದಿಲ್ಲ. ಆದ್ದರಿಂದ ಅನ್ಯೋನ್ಯಾಭಾವಕ್ಕೆ ವಸ್ತುವಿನಿಂದ ಸವಿಶೇಷಾಭೇದವನ್ನು ಅಂಗೀಕರಿಸಿದ್ದರಿಂದ, ವಿಶೇಷವು ಭೇದಕಾರ್ಯಕಾರಿಯಾಗಿರುವುದರಿಂದ, ವಸ್ತುಪ್ರತೀತಿಯು ವಿರುದ್ಧಧರ್ಮಸಾಪೇಕ್ಷ-ವಾಗದಿದ್ದರೂ ಭೇದಪ್ರತೀತಿಯು ವಿರುದ್ಧಧರ್ಮಸಾಪೇಕ್ಷವಾಗಿದ್ದರಿಂದ, ಭೇದವನ್ನು ಉಪಪಾದನೆ ಮಾಡುವುದಕ್ಕಾಗಿ ವಿರುದ್ಧಧರ್ಮಗಳನ್ನು ಉಪನ್ಯಾಸ ಮಾಡಿದ್ದು ಯುಕ್ತವೇ ಆಗಿದೆ ಎಂದು ಅಭಿಪ್ರಾಯ.

'ಭೇದ ಎಂದರೆ ಅನ್ಯೋನ್ಯಾಭಾವವೇ ಆಗಿದೆ. ಅನ್ಯೋನ್ಯಾಭಾವದಿಂದ ಅತಿರಿಕ್ತವಾದ ಭೇದ ಎಂಬ ವಸ್ತು ಇಲ್ಲ' ಎಂಬ ವಿಷಯಕ್ಕೆ ಆಚಾರ್ಯರ ಮಾತಿನ ಗಮಕವನ್ನು ತೋರಿಸುತ್ತಾರೆ -

ಯಾವ ಕಾರಣ ಭೇದ ಎಂದರೆ ಅನ್ಯೋನ್ಯಾಭಾವವೇ ಆಗಿದೆ ಹೊರತು ಅತಿರಿಕ್ತವಾದ ವಸ್ತುವಾಗಿಲ್ಲವೋ ಆ ಕಾರಣಕ್ಕಾಗಿಯೇ.

**'ಆತ್ಮಸ್ವಭಾವಭೇದಸ್ಯ'**

ಎಂಬುದಾಗಿ ಭೇದಶಬ್ದವು ಪ್ರಸಕ್ತವಾದ್ದರಿಂದ, ಅದಕ್ಕೆ ಅನುಗುಣವಾಗಿ ''ಚೇಷ್ಟಾಲಿಂಗೇನ ಸಾತ್ಮತ್ವೇ'' ಎಂಬ ಶ್ಲೋಕದಲ್ಲಿ

**'ಭಿನ್ನತ್ವಂ ಸ್ವಾತ್ಮನಃ ತಸ್ಮಾತ್'**

ಎಂದೇ (ವಾಕ್ಯ) ಹೇಳಬೇಕಿತ್ತು. ಆದರೆ ಹಾಗೆ ಹೇಳದೇ

**'ಅನ್ಯತ್ವಂ ಸ್ವಾತ್ಮನಃ ತಸ್ಮಾತ್'**

ಎಂಬುದಾಗಿ ಯಾವಾಗ ಹೇಳಿದರೋ ಆಗಲೇ ತಿಳಿದುಬರುತ್ತದೆ - ಭೇದ ಎಂದರೆ ಅನ್ಯೋನ್ಯಾಭಾವವೇ ಆಗಿದೆ ಎಂದರ್ಥ ಎಂದು.

**ಟೀಕಾ :- ಭವೇದೇವಂ, ಯದಿ ಸಾರ್ವಜ್ಞ್ಯಾದಿಕಮೀಶ್ವರಸ್ಯ ಸತ್ಯಂ ಸ್ಯಾತ್ । ನ ಚೈತದಸ್ತಿ । ತತ್ರ ಪ್ರಮಾಣಾಭಾವಾತ್ । 'ಯಃ ಸರ್ವಜ್ಞಃ' ಇತ್ಯಾದಿಶ್ರುತಯಸ್ತು ಸಾರ್ವಜ್ಞ್ಯಾದಿಕಮೇವ ಪ್ರತಿಪಾದಯಂತಿ । ನ ಪುನಸ್ತಸ್ಯ ಸತ್ಯತಾಮ್ ।**

**ತಥಾऽಶ್ರವಣಾತ್ । ಮೃಷಾ ವಿರುದ್ಧಧರ್ಮಾಧಿಕರಣತಯಾ ತಾತ್ವಿಕಭೇದ-ಪ್ರತೀತ್ಯುಪಪಾದನಮಯುಕ್ತಮ್ । ಅತಿಪ್ರಸಂಗಾದಿತಿ । ಅತ ಆಹ -**

**ಮೂಲ :- ಸತ್ಯಃ ಸೋ ಅಸ್ಯ ಮಹಿಮೇತ್ಯಾದಿವಾಕ್ಯಾನ್ಮೃಷಾ ನ ಚ ।**

**ಸಾರ್ವಜ್ಞ್ಯಾದಿಗುಣಾ ವಿಷ್ಣೋರಿತಿ ವರ್ತತೇ । ಯದ್ಯಪಿ 'ಯಃ ಸರ್ವಜ್ಞಃ' ಇತ್ಯಾದಿಶ್ರುತಯಃ ಸಾರ್ವಜ್ಞ್ಯಾದಿಕಮೇವ ಪ್ರತಿಪಾದಯಂತಿ ತಥಾಪಿ ಸಃ ವೇದೋದಿತಃ, ಅಸ್ಯ ಮಹಿಮಾ ಸರ್ವಜ್ಞತ್ವಾದಿಃ, ಸತ್ಯ ಏವ ಇತಿ ವಾಕ್ಯಾಂತರಾತ್ ಸತ್ಯತಾವಗಮಾತ್ ನ ಸಾರ್ವಜ್ಞ್ಯಾದಿಕಂ ಮೃಷಾ ಇತಿ ।**

**ಅನುವಾದ :-** ಶ್ರುತಿಪ್ರತಿಪಾದ್ಯವಾದ ಸಾರ್ವಜ್ಞ್ಯಾದಿವಿರುದ್ಧಧರ್ಮಾಧಿಕರಣತ್ವದಿಂದ ಜೀವ-ಈಶ್ವರರಲ್ಲಿ ಭೇದವನ್ನು ಸಾಧಿಸುವುದು ಯುಕ್ತವಾಗುತ್ತಿತ್ತು. ಯಾವಾಗ ? ಒಂದುವೇಳೆ ಈಶ್ವರನ ಸರ್ವಜ್ಞತ್ವಾದಿಗುಣಗಳು ಸತ್ಯವಾಗಿದ್ದರೆ. ಆದರೆ ಈಶ್ವರನ ಸರ್ವಜ್ಞತ್ವಾದಿಗುಣಗಳು ಸತ್ಯವಾಗಿಲ್ಲ. ಏಕೆ ? ಈಶ್ವರನಲ್ಲಿ ಸತ್ಯವಾದ ಸರ್ವಜ್ಞತ್ವಾದಿಗುಣಗಳಿವೆ ಎಂಬ ವಿಷಯದಲ್ಲಿ ಪ್ರಮಾಣ ಯಾವುದೂ ಇಲ್ಲವಾದ್ದರಿಂದ.

'ಸರ್ವಜ್ಞತ್ವಾದಿಗುಣಗಳು ಸತ್ಯ' ಎಂಬ ವಿಷಯದಲ್ಲಿ 'ಯಃ ಸರ್ವಜ್ಞಃ ಸ ಸರ್ವವಿತ್' ಇತ್ಯಾದಿಶ್ರುತಿಗಳೇ ಪ್ರಮಾಣವಾಗಿಲ್ಲವೆಯಲ್ಲ ? ಎಂದರೆ, ಅದು ಸರಿಯಲ್ಲ. ಕಾರಣ 'ಯಃ ಸರ್ವಜ್ಞಃ ಸ ಸರ್ವವಿತ್' ಇತ್ಯಾದಿಶ್ರುತಿಗಳು 'ಈಶ್ವರನು ಸರ್ವಜ್ಞನಾಗಿದ್ದಾನೆ' ಎಂಬುದಾಗಿ ಈಶ್ವರನಿಗೆ ಸರ್ವಜ್ಞತ್ವಾದಿಗುಣಗಳನ್ನಷ್ಟೇ ಪ್ರತಿಪಾದಿಸುತ್ತಿವೆ. ಹೊರತು ಆ ಸರ್ವಜ್ಞತ್ವಾದಿಗುಣಗಳಿಗೆ ಸತ್ಯತ್ವವನ್ನು ಹೇಳುತ್ತಿಲ್ಲ. (ಸತ್ಯವಾದ ಸರ್ವಜ್ಞತ್ವಾದಿಗಳು ಇವೆ ಎಂದು ಹೇಳುತ್ತಿಲ್ಲ.) ಹಾಗೆ ಶ್ರುತಿಯಲ್ಲಿ ಶಬ್ದಗಳು ಶ್ರುತವಾಗುತ್ತಿಲ್ಲ.

ಶ್ರುತಿಗಳು ಈಶ್ವರನ ಸರ್ವಜ್ಞತ್ವಾದಿಗುಣಗಳಿಗೆ ಸತ್ಯತ್ವವನ್ನು ಹೇಳುತ್ತಿಲ್ಲ. ಹಾಗಾಗಿ ಈಶ್ವರನ ಸರ್ವಜ್ಞತ್ವಾದಿಗಳು ಸತ್ಯವಾಗುವುದು ಬೇಡ. ಕಿಂತು ಮೃಷಾ (ಮಿಥ್ಯಾ) ಎಂದೇ ಆಗಲಿ. ಅಂತಹ ಮೃಷಾಭೂತ ಸರ್ವಜ್ಞತ್ವಾದಿವಿರುದ್ಧಧರ್ಮಾಧಿಕರಣತ್ವದಿಂದಲೇ ಜೀವ-ಈಶ್ವರರಲ್ಲಿ ಭೇದವನ್ನು ಸಾಧಿಸುತ್ತೇವೆ ಎಂದರೆ, ಅದು ಸರಿಯಲ್ಲ.

ಮಿಥ್ಯಾಭೂತ ವಿರುದ್ಧಧರ್ಮಾಧಿಕರಣತ್ವದಿಂದಲೂ ಜೀವ-ಈಶ್ವರರಲ್ಲಿ ಭೇದಸಾಧನ ಮಾಡುವುದು ಕೂಡುತ್ತಿತ್ತು. ಯಾವಾಗ ? ಒಂದುವೇಳೆ ಸಾಧ್ಯಮಾನವಾದ ಜೀವ-ಈಶ್ವರಭೇದವೂ ಅತಾತ್ವಿಕವಾಗಿದ್ದರೆ. ಆದರೆ ಆ ಭೇದ ಅತಾತ್ವಿಕವಾಗಿಲ್ಲ. ನೀವು ಅದನ್ನು ತಾತ್ವಿಕ ಎಂದು ಅಂಗೀಕರಿಸಿದ್ದೀರಿ. ಆದ್ದರಿಂದ ಅತಾತ್ವಿಕವಿರುದ್ಧಧರ್ಮಾಧಿಕರಣತ್ವದಿಂದ ಅತಾತ್ವಿಕಭೇದಸಾಧನ ಮಾಡಬಹುದೇ ಹೊರತು ತಾತ್ವಿಕಭೇದಸಾಧನ ಮಾಡಲು ಬರುವುದಿಲ್ಲ. ಹಾಗೆ ಅತಾತ್ವಿಕವಿರುದ್ಧಧರ್ಮಾಧಿಕರಣತ್ವದಿಂದ ತಾತ್ವಿಕಭೇದವನ್ನು ಸಾಧಿಸುವುದಾದರೆ ಅತಿಪ್ರಸಂಗ[137] ಬರಬೇಕಾಗುತ್ತದೆ.

ಆದ್ದರಿಂದ ಈಶ್ವರನ ಸರ್ವಜ್ಞತ್ವಾದಿಗಳು ಶ್ರುತಿಪ್ರತಿಪಾದ್ಯವಾದರೂ ಸತ್ಯವಾಗಿಲ್ಲ ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲ :- ಸತ್ಯಃ ಸೋ ಅಸ್ಯ ಮಹಿಮೇತ್ಯಾದಿವಾಕ್ಯಾನ್ಮೃಷಾ ನ ಚ ।**

**ಮೂಲಾರ್ಥ :- ಸತ್ಯಃ ಸೋ ಅಸ್ಯ ಮಹಿಮಾ (ಶ್ರುತಿಪ್ರತಿಪಾದ್ಯವಾದ ಈಶ್ವರನ ಸರ್ವಜ್ಞತ್ವಾದಿಗಳು ಸತ್ಯವೇ ಆಗಿವೆ) ಎಂಬ ವಾಕ್ಯದಿಂದ ಸರ್ವಜ್ಞತ್ವಾದಿಗಳಿಗೆ ಸತ್ಯತ್ವ ತಿಳಿದು ಬರುವುದರಿಂದ ಈಶ್ವರನ ಸರ್ವಜ್ಞತ್ವಾದಿಗಳು ಮೃಷಾ (ಮಿಥ್ಯಾ) ಅಲ್ಲ. ಸತ್ಯವೇ ಆಗಿದೆ.**

'ವಿಷ್ಣುವಿನ ಸರ್ವಜ್ಞತ್ವಾದಿಗುಣಗಳು' ಎಂದು ಮೂಲದಲ್ಲಿ ಹಚ್ಚಿಕೊಳ್ಳಬೇಕು.

ಯದ್ಯಪಿ 'ಯಃ ಸರ್ವಜ್ಞಃ ಸ ಸರ್ವವಿತ್' ಇತ್ಯಾದಿಶ್ರುತಿಗಳು ಈಶ್ವರನಿಗೆ ಸರ್ವಜ್ಞತ್ವಾದಿಗುಣಗಳನ್ನಷ್ಟೇ ಪ್ರತಿಪಾದಿಸುತ್ತವೆ. ಹೊರತು ಆ ಸರ್ವಜ್ಞತ್ವಾದಿ ಗುಣಗಳಿಗೆ ಸತ್ಯತ್ವವನ್ನು ಪ್ರತಿಪಾದಿಸುತ್ತಿಲ್ಲ. ತಥಾಪಿ (ಆದರೂ ಸಹ) ''ಸತ್ಯಃ ಸೋ ಅಸ್ಯ ಮಹಿಮಾ'' ಸಃ = ಶ್ರುತಿಪ್ರತಿಪಾದ್ಯವಾದ ಅಸ್ಯ ಮಾಹಿಮಾ = ಈಶ್ವರನ ಸರ್ವಜ್ಞತ್ವಾದಿಗುಣಗಳು ಸತ್ಯಃ = ಸತ್ಯವೇ ಆಗಿದೆ ಎಂಬ ಬೇರೆ ವಾಕ್ಯದಿಂದ ಸರ್ವಜ್ಞತ್ವಾದಿಗುಣಗಳಿಗೆ ಸತ್ಯತ್ವವು ತಿಳಿದುಬರುವುದರಿಂದ ಈಶ್ವರನ

---

137 ಶುಕ್ತಿಯಲ್ಲಿ ಶುಕ್ತಿತ್ವಕ್ಕೆ ವಿರುದ್ಧವಾದ ರಜತತ್ವವು ಅತಾತ್ವಿಕವಾದದ್ದು (ಆರೋಪಿತ-ವಾದದ್ದು) ಇದೆ. ಹಾಗಾಗಿ ಅಂತಹ ಅತಾತ್ವಿಕರಜತತ್ವರೂಪವಿರುದ್ಧಧರ್ಮಾಧಿಕರಣತ್ವದಿಂದ ಶುಕ್ತಿಯಲ್ಲಿಯೂ ಶುಕ್ತಿಯಿಂದ ಭೇದ ಬರಬೇಕಾದ ಅತಿಪ್ರಸಂಗ ಬರುತ್ತದೆ ಎಂದು ಭಾವ.

ಸರ್ವಜ್ಞತ್ವಾದಿಗುಣಗಳು ಮಿಥ್ಯಾ ಅಲ್ಲ. (ಸತ್ಯವೇ ಆಗಿದೆ.) ಅಂತಹ ಸತ್ಯಭೂತವಿರುದ್ಧಧರ್ಮಾಧಿಕರಣತ್ವದಿಂದ ಜೀವ-ಈಶ್ವರರಲ್ಲಿ ಭೇದಸಾಧನೆ ಮಾಡಿದ್ದು ಯುಕ್ತವೇ ಆಗಿದೆ ಎಂದು ಅಭಿಪ್ರಾಯ.

**ಟೀಕಾ :- ಅಂಗೀಕೃತ್ಯ ಚೇದಮುದಿತಮ್ । ವಸ್ತುತಸ್ತು ವಸ್ತುವಿಷಯಕಮೇವ ಜ್ಞಾನಂ ತತ್ಸತ್ಯತ್ವೇ ಪ್ರಮಾಣಮ್ । ನ ಪುನಸ್ತತ್ರ ಪ್ರಮಾಣಾಂತರಾಪೇಕ್ಷಾ । ಪ್ರಾಮಾಣ್ಯಸ್ವತಸ್ತ್ವಸ್ಯ ಸಿದ್ಧತ್ವಾತ್ । ಅತೋ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿರೇವ ತತ್ಸತ್ಯತಾಂ ಪ್ರತಿಪಾದಯತೀತ್ಯನುಪಪನ್ನ ಏವಾಕ್ಷೇಪಃ । ಏವಂ ಸತಿ ಶುಕ್ತಿರಜತಾದಿಸತ್ಯತಾಽಪಿ ಸ್ಯಾದಿತಿ ಚೇನ್ನ । ಔತ್ಸರ್ಗಿಕಪ್ರಾಮಾಣ್ಯಸ್ಯ ಕರಣದೋಷೈಃ ಬಾಧಕಪ್ರಮಾಣೈರಪನಯನೇನ ತನ್ಮಿಥ್ಯಾತ್ವಸ್ಯ ಸ್ಥಿತತ್ವಾತ್ । ನ ಚೈವಮೇವಾಸ್ತು ಪ್ರಕೃತೇಽಪೀತಿ ವಾಚ್ಯಮ್ । ಕರಣದೋಷಬಾಧಕಪ್ರಮಾಣಾಭಾವಾದಿತ್ಯಾಹ -**

**ಮೂಲ :- ನ ಚ ವೇದೋಕ್ತಮಿಥ್ಯಾತ್ವೇ ಮಾನಂ ....... ।**

**ಅತ್ರ ನ ಚ ತನ್ಮಿಥ್ಯಾತ್ವೇ ಮಾನಂ ಇತಿ ವಕ್ತವ್ಯೇ ವೇದೋಕ್ತೇತಿ ಕರಣದೋಷಾಭಾವೋಪಪಾದನಾರ್ಥಮುಕ್ತಮ್ । ಅಪೌರುಷೇಯತಯಾ ವೇದೇ ದೋಷಾಭಾವೇಽಪಿ ಪ್ರತಿಪತ್ತುರೇವ ದೋಷಃ ಸಂಭವತೀತಿ ಚೇನ್ನ । ತಸ್ಯಾಪಿ ಬಾಧಕಪ್ರಮಾಣೋನ್ನೇಯತ್ವೇನ ತದಭಾವೇ ಅಭಾವನಿಶ್ಚಯಾತ್ ।**

**ಅನುವಾದ :-** 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಗಳು ಈಶ್ವರನ ಸರ್ವಜ್ಞತ್ವಾದಿಗುಣಗಳನ್ನು ಮಾತ್ರವೇ ಪ್ರತಿಪಾದಿಸುತ್ತವೆ ಹೊರತು ಅವುಗಳ ಸತ್ಯತ್ವವನ್ನು ಪ್ರತಿಪಾದಿಸುವುದಿಲ್ಲ ಎಂಬುದಾಗಿ ಶಂಕಿಸಿದ್ದನ್ನು 'ಭವೇದೇವಂ' ಇತ್ಯಾದಿಯಾಗಿ ಅಂಗೀಕರಿಸಿ, 'ಸತ್ಯಃ ಸೋ ಅಸ್ಯ ಮಾಹಿಮಾ' ಎಂಬ ಬೇರೆ ವಾಕ್ಯದಿಂದ ಸರ್ವಜ್ಞತ್ವಾದಿಗಳಿಗೆ ಸತ್ಯತ್ವವು ಸಿದ್ಧಿಸುತ್ತದೆ ಎಂಬುದಾಗಿ ಏನು ಉತ್ತರವನ್ನು ಹೇಳಿದರೋ ಅದು ಅಂಗೀಕೃತ್ಯವಾದವಾಗಿದೆ. (ಪರಾಭಿಪ್ರಾಯವನ್ನು ಅಂಗೀಕರಿಸಿ ಉತ್ತರಿಸಲಾಗಿದೆ.)

ವಾಸ್ತವಿಕವಾಗಿ ಹೇಳುವುದಾದರೆ, ವಸ್ತುವಿಷಯಕವಾದ ಜ್ಞಾನವೇ ಆ ವಸ್ತುವಿನ ಸತ್ಯತ್ವದ ವಿಷಯದಲ್ಲಿ ಪ್ರಮಾಣವಾಗುತ್ತದೆ. ಹೊರತು ವಸ್ತುವಿನ ಸತ್ಯತ್ವವಿಷಯದಲ್ಲಿ

ಇತರ ಪ್ರಮಾಣದ ಅಪೇಕ್ಷೆ ಇಲ್ಲ. ಯಾವ ರೀತಿಯಾಗಿ 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿಸ್ಥಳಗಳಲ್ಲಿ 'ಸತ್ಯ' ಪದ ಇಲ್ಲದಿದ್ದರೂ ಸಹ ಸ್ವತಃಪ್ರಮಾಣವಾದ ಶ್ರುತಿಯಿಂದಲೇ ವಿಜ್ಞಾನಾನಂದಾತ್ಮಕತ್ವವು ಪಾರಮಾರ್ಥಿಕಸತ್ಯ ಎಂದು ಸಿದ್ಧವಾಗುತ್ತದೆಯೋ, ಅದೇ ರೀತಿಯಾಗಿ ಪ್ರಕೃತದಲ್ಲಿಯೂ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಗಳಲ್ಲಿಯೂ 'ಸತ್ಯ' ಪದ ಇಲ್ಲದಿದ್ದರೂ ಸಹ ಸರ್ವಜ್ಞತ್ವಾದಿಗಳು ಪಾರಮಾರ್ಥಿಕಸತ್ಯವೆಂದೇ ಸಿದ್ಧವಾಗುತ್ತದೆ.

ಯಾಕೆಂದರೆ - ಉತ್ಪತ್ತಿವಿಷಯದಲ್ಲಿ ಹಾಗೂ ಜ್ಞಪ್ತಿವಿಷಯದಲ್ಲಿ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸಿದ್ದೇವೆ.

1) ಪ್ರಾಮಾಣ್ಯಕ್ಕೆ ಉತ್ಪತ್ತೌ ಸ್ವತಸ್ತ್ವ ಎಂದರೆ - ಜ್ಞಾನಜನಕಮಾತ್ರಜನ್ಯತ್ವ ಆಗಿದೆ. ಅಂದರೆ ಜ್ಞಾನವು ಯಾವುದರಿಂದ ಹುಟ್ಟುತ್ತದೆಯೋ ಅದರಿಂದಲೇ ಅದರಲ್ಲಿ ಪ್ರಾಮಾಣ್ಯವೂ ಹುಟ್ಟುತ್ತದೆ.

2) ಪ್ರಾಮಾಣ್ಯಕ್ಕೆ ಜ್ಞಪ್ತೌ ಸ್ವತಸ್ತ್ವ ಎಂದರೆ - ಜ್ಞಾನಗ್ರಾಹಕಮಾತ್ರಗ್ರಾಹ್ಯತ್ವ ಆಗಿದೆ. ಅಂದರೆ ಜ್ಞಾನವು ಯಾವುದರಿಂದ ಗ್ರಾಹ್ಯವಾಗುತ್ತದೆಯೋ ತದ್ಗತಪ್ರಾಮಾಣ್ಯವೂ ಅದರಿಂದಲೇ ಗ್ರಾಹ್ಯವಾಗುತ್ತದೆ.

ಆದ್ದರಿಂದ ಹೀಗೆ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸುವುದರಿಂದ, 'ಯಥಾವಸ್ಥಿತಾರ್ಥಜ್ಞೇಯವಿಷಯೀಕಾರಿತ್ವ'ರೂಪವಾದ ಪ್ರಾಮಾಣ್ಯವು ಅರ್ಥಸತ್ತಾಘಟಿತವಾದ್ದರಿಂದ (ವಸ್ತು ಸತ್ಯವಾದರೆ ಮಾತ್ರ ತದ್ವಿಷಯಕಜ್ಞಾನವು ಪ್ರಮಾಣವಾಗುವುದರಿಂದ) ವಸ್ತುವಿಷಯಕವಾದ ಜ್ಞಾನವೇ ಆ ವಸ್ತುವಿನ ಸತ್ಯತ್ವವಿಷಯದಲ್ಲಿ ಪ್ರಮಾಣವಾಗುತ್ತದೆ. ಹಾಗಾಗಿ ಪ್ರಕೃತದಲ್ಲಿ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಯೇ ಆ ಸರ್ವಜ್ಞತ್ವಾದಿಗಳಿಗೆ ಸತ್ಯತ್ವವನ್ನು ಪ್ರತಿಪಾದಿಸುವುದರಿಂದ ನಿಮ್ಮ ಆಕ್ಷೇಪವು (ಯಃ ಸರ್ವಜ್ಞಃ ಇತ್ಯಾದಿಶ್ರುತಿಯು ಸರ್ವಜ್ಞತ್ವಾದಿಗಳನ್ನು ಹೇಳುತ್ತದೆಯೇ ಹೊರತು ಅವುಗಳ ಸತ್ಯತ್ವವನ್ನು ಹೇಳುವುದಿಲ್ಲ ಎಂಬ ನಿಮ್ಮ ಆಕ್ಷೇಪವು) ಅನುಪಪನ್ನವೇ ಆಗಿದೆ.

ಒಂದುವೇಳೆ ಪ್ರಾಮಾಣ್ಯಕ್ಕೆ ಸ್ವತಸ್ತ್ವ ಇರುವುದರಿಂದ ವಸ್ತುವಿಷಯಕವಾದ ಜ್ಞಾನವೇ ಅದರ ಸತ್ಯತ್ವವಿಷಯದಲ್ಲಿ ಪ್ರಮಾಣವಾಗುತ್ತದೆ ಎನ್ನುವುದಾದರೆ, ಹಾಗಾದರೆ 'ಇದಂ ರಜತಂ' ಎಂಬ ಜ್ಞಾನಪ್ರಾಮಾಣ್ಯಕ್ಕೂ (ಜ್ಞಾನಜನಕಜನ್ಯವಾಗುವ

ಕಾರಣ) ಸ್ವತಸ್ತ್ವ ಬರುವುದರಿಂದ ಅದೂ ಅರ್ಥಸತ್ತಾಘಟಿತವಾದ್ದರಿಂದ ಶುಕ್ತಿರಜತಕ್ಕೂ ಸತ್ಯತ್ವ ಬರಬೇಕಾಗುತ್ತದೆಯಲ್ಲವೇ ? ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಸವ್ಯಭಿಚಾರನಿಯಮವು ಉತ್ಸರ್ಗ ಎನಿಸುತ್ತದೆ. ಪ್ರಕೃತದಲ್ಲಿ -

1) ಹುಟ್ಟುವ ಜ್ಞಾನವು ಪ್ರಮಾಣಭೂತವಾಗಿಯೇ ಹುಟ್ಟುತ್ತದೆ ಎನ್ನುವುದು ಉತ್ಸರ್ಗ. ಹಾಗಾಗಿ ಕರಣದೋಷರೂಪವಾದ ಅಪವಾದದಿಂದಾಗಿ ಅಪ್ರಾಮಾಣ್ಯವೂ ಹುಟ್ಟುತ್ತದೆ.

2) ಮತ್ತು ಜ್ಞಾನಗ್ರಾಹಕವಾದದ್ದರಿಂದ ಪ್ರಾಮಾಣ್ಯವು ಮಾತ್ರ ಗ್ರಾಹ್ಯವಾಗುತ್ತದೆ ಎನ್ನುವುದೂ ಉತ್ಸರ್ಗ. ಹಾಗಾಗಿ ಬಾಧಕಜ್ಞಾನರೂಪವಾದ ಅಪವಾದದಿಂದಾಗಿ ಅಪ್ರಾಮಾಣ್ಯವೂ ಗ್ರಾಹ್ಯವಾಗುತ್ತದೆ ಎನ್ನುವುದೂ ಉತ್ಸರ್ಗ. ಹಾಗಾಗಿ ಬಾಧಕಜ್ಞಾನ ರೂಪವಾದ ಅಪವಾದದಿಂದಾಗಿ ಅಪ್ರಾಮಾಣ್ಯವೂ ಗ್ರಾಹ್ಯವಾಗುತ್ತದೆ.

ಆದ್ದರಿಂದ ಕಾಚಾದಿರೂಪವಾದ ಇಂದ್ರಿಯದೋಷದಿಂದಾಗಿ ಶುಕ್ತಿರಜತಾದಿ-ಜ್ಞಾನದಲ್ಲಿ ಅಪ್ರಾಮಾಣ್ಯವೇ ಹುಟ್ಟುತ್ತದೆ. 'ನೇದಂ ರಜತಂ' ಎಂಬ ಉತ್ತರಕಾಲೀನ ಬಾಧಕಜ್ಞಾನದಿಂದಾಗಿ ಅಲ್ಲ ಅಪ್ರಾಮಾಣ್ಯವೇ ಗ್ರಾಹ್ಯವಾಗುತ್ತದೆ. ಅಪ್ರಾಮಾಣ್ಯವು ಅರ್ಥಅಸತ್ವಘಟಿತವಾದ್ದರಿಂದ (ವಸ್ತು ಅಸತ್ ಆದರೇನೇ ಅದರ ಜ್ಞಾನವು ಅಪ್ರಮಾಣವಾಗುವುದರಿಂದ) ಶುಕ್ತಿರಜತವಿಷಯಕವಾದ ಜ್ಞಾನವು ಶುಕ್ತಿರಜತದ ಸತ್ಯತ್ವವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಹಾಗಾಗಿ ಶುಕ್ತಿರಜತಜ್ಞಾನದಿಂದ ಶುಕ್ತಿರಜತಕ್ಕೆ ಸತ್ಯತ್ವವು ಸಿದ್ಧಿಸುವುದಿಲ್ಲ ಎಂದು ಅಭಿಪ್ರಾಯ.

ಹಾಗಾದರೆ ಪ್ರಕೃತದಲ್ಲಿಯೂ ಶುಕ್ತಿರಜತಾದಿಜ್ಞಾನದಂತೆಯೇ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಯಿಂದ ಹುಟ್ಟುವ ಜ್ಞಾನವೂ ಅಪ್ರಮಾಣವಾಗಿಯೇ ಹುಟ್ಟಲಿ. ಅಪ್ರಮಾಣವಾಗಿಯೇ ಗ್ರಾಹ್ಯವೂ ಆಗಲಿ. ಅಂದಮೇಲೆ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಯು ಸರ್ವಜ್ಞತ್ವಾದಿಗಳಿಗೆ ಸತ್ಯತ್ವವನ್ನು ಪ್ರತಿಪಾದಿಸುವುದಿಲ್ಲ ಎಂಬುದಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ ಶುಕ್ತಿರಜತಜ್ಞಾನವಿಷಯದಲ್ಲಿ ಪ್ರಾಮಾಣ್ಯದ ಉತ್ಪತ್ತಿಗೆ ಅಪವಾದಕವಾದ ಕರಣದೋಷ ಹಾಗೂ ಪ್ರಾಮಾಣ್ಯಜ್ಞಪ್ತಿಗೆ ಅಪವಾದಕವಾದ ಬಾಧಕಜ್ಞಾನ ಇರುವಂತೆ, ಪ್ರಕೃತದಲ್ಲಿ

ಕರಣದೋಷವಾಗಲೀ, ಬಾಧಕಜ್ಞಾನವಾಗಲೀ ಇಲ್ಲ ಎಂಬುದಾಗಿ ಆಚಾರ್ಯರು ಹೇಳುತ್ತಾರೆ -

**ಮೂಲ :- ನ ಚ ವೇದೋಕ್ತಮಿಥ್ಯಾತ್ವೇ ಮಾನಂ ......**

ಮೂಲಾರ್ಥ :- 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಪ್ರತಿಪಾದ್ಯವಾದ **ಸರ್ವಜ್ಞತ್ವಾದಿಗಳು ಮಿಥ್ಯೆಯಾಗಿವೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ.**

ಇಲ್ಲಿ 'ನ ಚ ತನ್ಮಿಥ್ಯಾತ್ವೇ ಮಾನಂ' (ಆ ಸರ್ವಜ್ಞತ್ವಾದಿಗಳು ಮಿಥ್ಯೆಯಾಗಿವೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ) ಎಂದಷ್ಟೇ ಹೇಳಬೇಕಿತ್ತು. ಆದರೆ 'ನ ಚ **ವೇದೋಕ್ತ**ಮಿಥ್ಯಾತ್ವೇ' ಎಂದು ಏಕೆ ಹೇಳಿದರು ? (ವೇದೋಕ್ತ ಎಂಬ ಪದವನ್ನು ಏಕೆ ಬಳಸಿದರು ?) ಎಂದರೆ, ಕರಣದೋಷ ಇಲ್ಲ ಎಂಬುದನ್ನು ಉಪಪಾದನೆ ಮಾಡುವುದಕ್ಕಾಗಿ ('ನಿತ್ಯಾ ವೇದಾಃ ಸಮಸ್ತಾಶ್ಚ' ಇತ್ಯಾದಿಪ್ರಮಾಣದಿಂದ ವೇದಕ್ಕೆ ಅಪೌರುಷೇಯತ್ವವು ಪ್ರಮಿತವಾಗಿದ್ದರಿಂದ ಅಪೌರುಷೇಯವಾದ ಕಾರಣ ಕರಣದೋಷನಿಬಂಧನದೋಷ ಇಲ್ಲ ಎಂಬುದನ್ನು ಉಪಪಾದನೆ ಮಾಡುವುದಕ್ಕಾಗಿ) ವೇದೋಕ್ತ ಎಂದು ಹೇಳಿದ್ದಾರೆ. ಹಾಗಾದರೆ ಕರಣದೋಷ ಇದ್ದಿದ್ದರೆ ವೇದಜನ್ಯಜ್ಞಾನವು ಅಪ್ರಮಾಣವಾಗುತ್ತಿತ್ತು. ಪ್ರಕೃತ ಅಪೌರುಷೇಯವಾದ ವೇದದ ವಿಷಯದಲ್ಲಿ ಕರಣದೋಷ ಇಲ್ಲವಾದ್ದರಿಂದ ವೇದಜನ್ಯಜ್ಞಾನ ಅಪ್ರಮಾಣವಲ್ಲ ಎಂದು ಅಭಿಪ್ರಾಯ.

ಅಪೌರುಷೇಯವಾದ್ದರಿಂದ ವೇದದಲ್ಲಿ ದೋಷ ಇಲ್ಲದೇ ಹೋದರೂ ಸಹ ವೇದಪ್ರತಿಪತ್ತೃವಾದ ವ್ಯಕ್ತಿಗೆ ಪದ-ವಾಕ್ಯಗಳಲ್ಲಿ ಶಕ್ತಿತಾತ್ಪರ್ಯಾಪರಿಜ್ಞಾನರೂಪವಾದ ದೋಷವು ಸಂಭಾವಿತವಾಗಿದೆ. ಹಾಗಾಗಿ ಪ್ರತಿಪತ್ತೃವಿನ ದೋಷದಿಂದಾಗಿ ವೇದಜನ್ಯಜ್ಞಾನದಲ್ಲಿ ಅಪ್ರಾಮಾಣ್ಯ ತಿಳಿಯಬಹುದಲ್ಲ ಎಂದು ಶಂಕೆ ಬಂದರೆ, ಅದೂ ಸರಿಯಲ್ಲ.

ಏಕೆಂದರೆ ಶಕ್ತಿತಾತ್ಪರ್ಯಾಪರಿಜ್ಞಾನರೂಪವಾದ ದೋಷವೂ ಸಹ ಬಾಧಕಜ್ಞಾನದಿಂದ ತಿಳಿಯಬಹುದಾದದ್ದಾಗಿದೆ. (ಬಾಧಕಜ್ಞಾನ ಬರುತ್ತಿದ್ದರೆ ಅದರಿಂದ ದೋಷವಿದೆ ಎಂಬುದಾಗಿ ತಿಳಿಯಬಹುದು/ನಿಶ್ಚಯಿಸಬಹುದು.) ಪ್ರಕೃತದಲ್ಲಿ ವೇದವಿಷಯದಲ್ಲಿಯಾದರೋ ಬಾಧಕಜ್ಞಾನ ಇಲ್ಲವಾದ್ದರಿಂದ ಪ್ರತಿಪತ್ತೃವಿನ ದೋಷವಿಲ್ಲ ಎಂದು ನಿಶ್ಚಯವಾಗುತ್ತದೆ.

ಆದ್ದರಿಂದ ಶುಕ್ತಿರಜತವಿಷಯದಲ್ಲಿ ಕರಣದೋಷ-ಬಾಧಕಜ್ಞಾನ ಇರುವಂತೆ ವೇದವಿಷಯದಲ್ಲಿ ಕರಣದೋಷ-ಬಾಧಕಜ್ಞಾನಗಳು ಇಲ್ಲವಾದ್ದರಿಂದ ವೇದಜನ್ಯಜ್ಞಾನವು ಪ್ರಮಾಣವೇ ಆಗಿದೆ, ಪ್ರಮಾಣವಾಗಿಯೇ ಗ್ರಾಹ್ಯವಾಗಿದೆ. ಅಂದಮೇಲೆ ವೇದೋಕ್ತವಾದ ಸರ್ವಜ್ಞತ್ವಾದಿಗಳು ಮಿಥ್ಯೆ ಅಲ್ಲ. ಸರ್ವಜ್ಞತ್ವಾದಿಗಳ ಸತ್ಯತ್ವವಿಷಯದಲ್ಲಿ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಜನ್ಯವಾದ ಜ್ಞಾನವೇ ಪ್ರಮಾಣವಾಗಿದೆ. (ಸರ್ವಜ್ಞತ್ವಾದಿಗಳನ್ನು ತಿಳಿಸುವ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಯೇ ಸರ್ವಜ್ಞತ್ವಾದಿಗಳಿಗೆ ಸತ್ಯತ್ವವನ್ನೂ ಪ್ರತಿಪಾದಿಸುತ್ತದೆ) ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** 'ನ ಚ ವೇದೋಕ್ತಮಿಥ್ಯಾತ್ವೇ ಮಾನಂ' (ವೇದಪ್ರತಿಪಾದ್ಯವಾದ ಸರ್ವಜ್ಞತ್ವಾದಿಗಳು ಮಿಥ್ಯೆಯಾಗಿವೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ) ಎಂಬುದಾಗಿ ನಾವು ಹೇಳಿದ್ದರ ಮೇಲೆ ಅದ್ವೈತಿಗಳು ಶಂಕಿಸುತ್ತಾರೆ -

**ಟೀಕಾ :- ನನು 'ನೇಹ ನಾನಾಽಸ್ತಿ ಕಿಂಚನ' ಇತ್ಯಾದಿಶ್ರುತ್ಯಾ 'ವಿಮತೋ ವಿಶಿಷ್ಟಾಕಾರೋ ಮಿಥ್ಯಾ ವಿಶಿಷ್ಟಾಕಾರತ್ವಾತ್ ನೀಲಂ ನಭ ಇತಿ ವಿಶಿಷ್ಟಾಕಾರವತ್' ಇತ್ಯಾದ್ಯನುಮಾನೇನ ಚ ಸಾರ್ವಜ್ಞ್ಯಾದೇಃ ಮಿಥ್ಯಾತ್ವಪ್ರತೀತೇಃ ಕಥಂ ತತ್ರ ಪ್ರಮಾಣಾಭಾವಃ ? ಅತೋ ವ್ಯಾವಹಾರಿಕಸಾರ್ವಜ್ಞ್ಯಾದಿವಿಷಯಾಃ 'ಯಃ ಸರ್ವಜ್ಞಃ' ಇತ್ಯಾದಿಶ್ರುತಯ ಇತ್ಯತ ಆಹ -**

**ಮೂಲ :- ..... ತನ್ಮಾನತಾಽಪಿ ನ ।**

**'ನೇಹ ನಾನಾ' ಇತ್ಯಾದಿಶ್ರುತೇಃ ತತ್ರ ಸಾರ್ವಜ್ಞ್ಯಾದಿಮಿಥ್ಯಾತ್ವೇ ಮಾನತಾಽಪಿ ನಾಸ್ತಿ । ತಥೋಪಪಾದಿತಮನ್ಯತ್ರ । ಏವಂ ತಸ್ಯ ಅನುಮಾನಸ್ಯಾಪಿ ಮಾನತಾ ನಾಸ್ತಿ । ಧರ್ಮಿಗ್ರಾಹಕಪ್ರಮಾಣವಿರೋಧಾದಿತಿ ವ್ಯಾಖ್ಯೇಯಮ್ ।**

**ನ ಮಾನಮಿತ್ಯುಕ್ತಮ್ । ಯತ್ ಉಚ್ಯತೇ ತಸ್ಯಾಪಿ ಮಾನತಾ ನಾಸ್ತೀತಿ ಅಪಿಶಬ್ದಸಂಬಂಧಃ ।**

**ಅನುವಾದ :-** ''ನೇಹ ನಾನಾಽಸ್ತಿ ಕಿಂಚನ'' ಇತ್ಯಾದಿಶ್ರುತಿಗಳು (ಇಹ=ಬ್ರಹ್ಮನಲ್ಲಿ ಕಿಂಚನ = ಗುಣಕರ್ಮಾದಿಗಳು, ನಾನಾ = ಭಿನ್ನವಾದ ಪ್ರಪಂಚವು ನಾಸ್ತಿ = ಇಲ್ಲ) ಎಂಬುದಾಗಿ ಸರ್ವಜ್ಞತ್ವಾದಿಗಳಿಗೆ ಮಿಥ್ಯಾತ್ವವನ್ನು ಹೇಳುತ್ತಿರುವುದರಿಂದ ಹಾಗೂ

''ವಿಮತಃ ವಿಶಿಷ್ಟಾಕಾರಃ ಮಿಥ್ಯಾ ವಿಶಿಷ್ಟಾಕಾರತ್ವಾತ್ ನೀಲಂ ನಭ ಇತಿ ವಿಶಿಷ್ಟಾಕಾರವತ್''

(ವಿಷ್ಣುಸಂಬಂಧಿಯಾದ ವಿಶಿಷ್ಟಾಕಾರವು=ಯಃ ಸರ್ವಜ್ಞಃ ಇತ್ಯಾದಿಶ್ರುತ್ಯುಕ್ತವಾದ ವಿಶಿಷ್ಟಾಕಾರವು ಅಂದರೆ ಸರ್ವಜ್ಞತ್ವವಿಶಿಷ್ಟವಾದ ವಿಷ್ಣುಸ್ವರೂಪವು, ಮಿಥ್ಯೆಯಾಗಿದೆ, ವಿಶಿಷ್ಟಾಕಾರವಾದ್ದರಿಂದ, ನೀಲಂ ನಭಃ ಎಂಬ ವಿಶಿಷ್ಟಾಕಾರದಂತೆ. ನೀರೂಪವಾದ ಆಕಾಶದಲ್ಲಿ ನೀಲರೂಪ ಇಲ್ಲ. ಆದ್ದರಿಂದ ನೀಲಂ ನಭಃ ಎಂಬುದಾಗಿ ತೋರುವ ನೀಲರೂಪವಿಶಿಷ್ಟವಾದ ಆಕಾಶಸ್ವರೂಪವು ಹೇಗೆ ಮಿಥ್ಯೆಯಾಗಿದೆಯೋ ಅದರಂತೆ ಎಂದು ಅನುಮಾನದ ಭಾವ.)

ಇತ್ಯಾದಿ ಅನುಮಾನಗಳೂ ಸರ್ವಜ್ಞತ್ವಾದಿಗಳಿಗೆ ಮಿಥ್ಯಾತ್ವವನ್ನು ಹೇಳುತ್ತಿರುವುದರಿಂದ ''ವೇದೋಕ್ತವಾದ ಸರ್ವಜ್ಞತ್ವಾದಿಗಳ ಮಿಥ್ಯಾತ್ವವಿಷಯದಲ್ಲಿ ಯಾವ ಪ್ರಮಾಣವಿಲ್ಲ'' ಎಂದು ಹೇಗೆ ಹೇಳುತ್ತೀರಿ ?

ಹಾಗಾದರೆ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಗಳಿಗೆ ಗತಿ ಏನು ? ಎಂದರೆ, 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಗಳು ವ್ಯಾವಹಾರಿಕವಾದ (ಬ್ರಹ್ಮಜ್ಞಾನಬಾಧ್ಯವಾದ್ದರಿಂದ ಮಿಥ್ಯಾಭೂತವಾದ) ಸರ್ವಜ್ಞತ್ವಾದಿಗಳನ್ನು ತಿಳಿಸುತ್ತವೆ ಎಂಬುದಾಗಿ ಅದ್ವೈತಿಗಳು ಆಕ್ಷೇಪ ಮಾಡಿದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲ :- .... ತನ್ಮಾನತಾಽಪಿ ನ ।**

**ಮೂಲಾರ್ಥ :- 'ನೇಹ ನಾನಾ' ಇತ್ಯಾದಿಶ್ರುತಿಗಳಿಗೆ ಹಾಗೂ 'ವಿಮತೋ ವಿಶಿಷ್ಟಾಕಾರಃ' ಇತ್ಯಾದಿ ಅನುಮಾನಗಳಿಗೆ ವೇದೋಕ್ತಸರ್ವಜ್ಞತ್ವಾದಿಗಳ ಮಿಥ್ಯಾತ್ವವಿಷಯದಲ್ಲಿ ಪ್ರಾಮಾಣ್ಯವೂ ಇಲ್ಲ.**

'ನೇಹ ನಾನಾಽಸ್ತಿ ಕಿಂಚನ' ಇತ್ಯಾದಿಶ್ರುತಿಗಳು ವೇದೋಕ್ತವಾದ ಸರ್ವಜ್ಞತ್ವಾದಿಗಳು ಮಿಥ್ಯೆಯಾಗಿವೆ ಎಂಬ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಹೇಗೆ ಪ್ರಮಾಣವಾಗುವುದಿಲ್ಲ ಎಂಬುದನ್ನು

**'ಮಿಥ್ಯಾತ್ವಂ ಯದಿ ದುಃಖಾದೇಸ್ತದ್ವಾಕ್ಯಸ್ಯಾಗ್ರತೋ ಭವೇತ್ ।'**

ಇತ್ಯಾದಿಯಾಗಿ ಅನ್ಯತ್ರ = ಅನುವ್ಯಾಖ್ಯಾನದಲ್ಲಿ ಉಪಪಾದನೆ ಮಾಡಲಾಗಿದೆ.

ಅದೇ ರೀತಿಯಾಗಿ ಸರ್ವಜ್ಞತ್ವಾದಿಗಳ ಮಿಥ್ಯಾತ್ವವಿಷಯದಲ್ಲಿ ಉದಾಹೃತವಾದ 'ವಿಮತೋ ವಿಶಿಷ್ಟಾಕಾರಃ ...' ಎಂಬ ಅನುಮಾನವೂ ಪ್ರಮಾಣವಾಗುವುದಿಲ್ಲ. ಏಕೆಂದರೆ ಸರ್ವಜ್ಞತ್ವಾದಿವಿಶಿಷ್ಟಾಕಾರವು ಸಿದ್ಧವಾಗಿದೆಯೋ ? ಇಲ್ಲವೋ ?

ಸಿದ್ಧವಾಗಿಲ್ಲ ಎಂದರೆ ಪಕ್ಷವೇ ಅಸಿದ್ಧವಾದ್ದರಿಂದ ಆಶ್ರಯಾಸಿದ್ಧಿ ಬರುತ್ತದೆ. ಸಿದ್ಧವಾಗಿದೆ ಎನ್ನುವುದಾದರೆ ಶ್ರುತಿಯಿಂದಲೇ ಸರ್ವಜ್ಞತ್ವಾದಿವಿಶಿಷ್ಟಾಕಾರವು ಸಿದ್ಧವಾಗಿದೆ ಎನ್ನಬೇಕು. ಹಾಗೆ ಸರ್ವಜ್ಞತ್ವಾದಿವಿಶಿಷ್ಟಾಕಾರವು ಶ್ರುತಿಯಿಂದ ಸಿದ್ಧವಾಗುವಾಗ ಸತ್ಯವಾಗಿಯೇ ಸಿದ್ಧವಾಗಿದೆಯಾದ್ದರಿಂದ ಅಂತಹ ಸತ್ಯಭೂತವಾದ ಸರ್ವಜ್ಞತ್ವಾದಿವಿಶಿಷ್ಟಾಕಾರವನ್ನು ಪಕ್ಷ ಮಾಡಿಕೊಂಡು ಮಿಥ್ಯಾತ್ವಸಾಧನೆ ಮಾಡುವುದಾದರೆ ಧರ್ಮಿಗ್ರಾಹಕಪ್ರಮಾಣವಿರೋಧ ಬರುತ್ತದೆ. ಆದ್ದರಿಂದ ಅನುಮಾನವೂ ಪ್ರಮಾಣವಾಗುವುದಿಲ್ಲ ಎಂದು ಭಾವ.

ಇಲ್ಲಿ ಶ್ರುತಿಗೆ ಪ್ರತೀತಾರ್ಥದಲ್ಲಿ ಪ್ರಾಮಾಣ್ಯ ಇಲ್ಲ. ಅನುಮಾನಕ್ಕೆ ಸರ್ವಥಾ ಪ್ರಾಮಾಣ್ಯ ಇಲ್ಲ ಎಂಬುದಾಗಿ ವಿವೇಕ (ವ್ಯತ್ಯಾಸ) ತಿಳಿಯುವುದು.

ಮೂಲದಲ್ಲಿ 'ಅಪಿ' ಶಬ್ದಕ್ಕೆ ಎಲ್ಲಿ ಅನ್ವಯ ? ಎಂದು ಶಂಕೆ ಬಂದರೆ, ಅದನ್ನು ತೋರಿಸುತ್ತಾರೆ - 'ನ ಮಾನಮಿತ್ಯುಕ್ತಮ್' ಇತ್ಯಾದಿಯಾಗಿ. ಅಂದರೆ -

**'ನ ವೇದೋಕ್ತಮಿಥ್ಯಾತ್ವೇ ಮಾನಮ್ ।'**

'ವೇದೋಕ್ತ ಸರ್ವಜ್ಞತ್ವಾದಿಗಳ ಮಿಥ್ಯಾತ್ವವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ' ಎಂದು ಹೇಳಿದೆವು. ಇದರ ಮೇಲೆ ವೇದೋಕ್ತಮಿಥ್ಯಾತ್ವವಿಷಯದಲ್ಲಿ 'ನೇಹ ನಾನಾ' ಎಂಬ ಶ್ರುತಿ ಹಾಗೂ 'ವಿಮತೋ ವಿಶಿಷ್ಟಾಕಾರಃ' ಎಂಬ ಅನುಮಾನವು ಪ್ರಮಾಣವಾಗಿದೆ ಎಂಬುದಾಗಿ ನೀವು ಏನು ಹೇಳುತ್ತೀರಿ ಆ ಶ್ರುತಿ-ಅನುಮಾನಗಳಿಗೂ ಪ್ರಾಮಾಣ್ಯ ಇಲ್ಲ ಎಂಬುದಾಗಿ 'ಅಪಿ'ಶಬ್ದದ ಸಂಬಂಧ ತಿಳಿಯಬೇಕು ಎಂದು ಅಭಿಪ್ರಾಯ.

**ಟೀಕಾ :- ತದೇವಂ ಅದ್ವೈತಮತೇ ಅಜ್ಞಾನಾಸಂಭವೋಽಭಿಹಿತಃ । ತತಃ ಕಿಂ ? ಇತ್ಯತ ಆಹ -**

**ಮೂಲ :- ಅತೋಽಜ್ಞಾಸಂಭವಾದೇವ ನಾಧಿಕಾರ್ಯೈಕ್ಯವಾದಿನಾಮ್ ।**

**ಅಜ್ಞೋ ಹಿ ಶಾಸ್ತ್ರೇಽಧಿಕ್ರಿಯತೇ । ಉಕ್ತವಿಧಯಾ ಅಜ್ಞಾನಾನುಪಪತ್ತ್ಯಾ ಅಜ್ಞೋ ನ ಸಂಭವತಿ । ತತಶ್ಚ ಐಕ್ಯವಾದಿನಾಂ ಮತೇ ಶಾಸ್ತ್ರಸ್ಯ ಅಧಿಕಾರೀ ನ ಸಂಭವತಿ ।**

**ಅನುವಾದ :-** ಈ ಹಿಂದೆ -

**'ಅಜ್ಞತಾಽಖಿಲಸಂವೇತ್ತುಃ ಘಟತೇ ನ ಕುತಶ್ಚನ ।'**

ಇತ್ಯಾದಿಯಾಗಿ ಅಜ್ಞಾನವು ಕೂಡಬೇಕಾದರೆ ಆಶ್ರಯ-ವಿಷಯಗಳು ಇರಬೇಕು. ಆದರೆ ಅದ್ವೈತಮತದಲ್ಲಿ ವ್ಯಾಪಕವಾದ ಆಶ್ರಯ-ವಿಷಯಗಳು ಅನುಪಪನ್ನವಾದ್ದರಿಂದ ವ್ಯಾಪ್ಯವಾದ ಅಜ್ಞಾನವೂ ಕೂಡುವುದಿಲ್ಲ ಎಂಬುದಾಗಿ ಅದ್ವೈತಮತದಲ್ಲಿ ಅಜ್ಞಾನಾಸಂಭವವನ್ನು ಹೇಳಲಾಯಿತು.

ಆಗಲಿ ಮುಂದೇನು ? ಎಂದರೆ, ಆಚಾರ್ಯರು ಮುಂದುವರೆಸುತ್ತಾರೆ -

**ಮೂಲ :- ಅತೋಽಜ್ಞಾಸಂಭವಾದೇವ ನಾಧಿಕಾರ್ಯೈಕ್ಯವಾದಿನಾಮ್ ।**

**ಮೂಲಾರ್ಥ :- ಅಜ್ಞಾನ ಕೂಡದ ಕಾರಣ ಅಜ್ಞಾನಿ ಕೂಡುವುದಿಲ್ಲ. ಅಜ್ಞಾನಿಯು ಕೂಡದ ಕಾರಣ ಐಕ್ಯವಾದಿಗಳ ಮತದಲ್ಲಿ ಅಧಿಕಾರಿಯು ಕೂಡುವುದಿಲ್ಲ.**

ಅಜ್ಞಾನಿಯಾದವನು ಶಾಸ್ತ್ರದಲ್ಲಿ ಅಧಿಕಾರಿಯಾಗುತ್ತಾನೆ. ಹಿಂದೆ ಹೇಳಿದ ಪ್ರಕಾರ ಅಜ್ಞಾನವು ಕೂಡದ ಕಾರಣ ಅಜ್ಞಾನಿಯಾದವನೂ ಕೂಡುವುದಿಲ್ಲ. ಆದ್ದರಿಂದ ಐಕ್ಯವಾದಿಗಳ ಮತದಲ್ಲಿ ಶಾಸ್ತ್ರಕ್ಕೆ ಅಧಿಕಾರಿಯು ಸಂಭವಿಸುವುದಿಲ್ಲ.

**ಮೂಲ :- ಅತೋ ನಾಜ್ಞಾತಮಿತಿ ಚ ವಿಷಯೋ ವಿಷಯಾಂತರೇ ।**

**ಟೀಕಾ :- ಅತಃ ಅಜ್ಞಾನಾಸಂಭವಾತ್ ಅಜ್ಞಾತಂ ವಸ್ತು ನ ಸಂಭವತಿ ಇತಿ ಹೇತೋಃ ಐಕ್ಯವಾದಿನಾಂ ಮತೇ ಶಾಸ್ತ್ರಸ್ಯ ವಿಷಯಶ್ಚ ನ ಸಂಭವತಿ । ಕಿಂತು ? ವಿಷಯಾಂತರೇ ದೇಶಾಂತರೇ ಭೇದವಾದೇ ಅಧಿಕಾರ್ಯಾದಿಕಂ ಸಂಭವತೀತಿ ಉಕ್ತೋಚ್ಯಮಾನವಕ್ಷ್ಯಮಾಣಶೇಷತಯಾ ವ್ಯಾಖ್ಯೇಯಮ್ । ಅಜ್ಞಾತೋ ಹಿ ಶಾಸ್ತ್ರಸ್ಯ ವಿಷಯೋ ಭವತಿ ಶಾಸ್ತ್ರಸ್ಯ ಪರಾರ್ಥತ್ವಾತ್ ।**

**ಅನುವಾದ :-** ಶಾಸ್ತ್ರವು ಪರಾರ್ಥವಾದ್ದರಿಂದ (ಪರ = ಜಿಜ್ಞಾಸುವಾದವನು, ಅವನಿಗಾಗಿ ಪ್ರವೃತ್ತವಾದ್ದರಿಂದ) ಅಜ್ಞಾತವಾದ ವಸ್ತು ಶಾಸ್ತ್ರಕ್ಕೆ ವಿಷಯವಾಗುತ್ತದೆ. (ವಸ್ತು ಅಜ್ಞಾತವಾದಾಗ ಮಾತ್ರ ಆದರ ಬಗ್ಗೆ ಅಧಿಕಾರಿಗೆ ಜಿಜ್ಞಾಸೆ ಮೂಡುತ್ತದೆ ಆದ್ದರಿಂದ ಅಜ್ಞಾತವಸ್ತು ಶಾಸ್ತ್ರಕ್ಕೆ ವಿಷಯವಾಗುತ್ತದೆ ಎಂದು ಭಾವ.)

ಪ್ರಕೃತ ಅದ್ವೈತಮತದಲ್ಲಿ ಅಜ್ಞಾನವು ಕೂಡುವುದಿಲ್ಲವಾದ್ದರಿಂದ ಅಜ್ಞಾತವಾದ ವಸ್ತು ಕೂಡುವುದಿಲ್ಲ. (ಅಜ್ಞಾನ ಇದ್ದರೆ ಅಜ್ಞಾನವಿಷಯವಾದದ್ದು ಇರುತ್ತದೆ. ಅಜ್ಞಾನವೇ ಇಲ್ಲ ಎಂದಮೇಲೆ ಅಜ್ಞಾನವಿಷಯವಾದದ್ದು ಇಲ್ಲ ಎಂದು ಭಾವ.) ಅಜ್ಞಾತವಾದ ವಸ್ತು ಕೂಡುವುದಿಲ್ಲವಾದ್ದರಿಂದ ಐಕ್ಯವಾದಿಗಳ ಮತದಲ್ಲಿ ಶಾಸ್ತ್ರಕ್ಕೆ ವಿಷಯವೂ ಸಂಭವಿಸುವುದಿಲ್ಲ.

ಕಿಂತು ವಿಷಯಾಂತರೇ=ದೇಶಾಂತರೇ ಅಂದರೆ ಭೇದವಾದದಲ್ಲಿ ಅಧಿಕಾರ್ಯಾದಿಗಳು ಸಂಭವಿಸುತ್ತವೆ ಎಂಬುದಾಗಿ ಉಕ್ತ-ಉಚ್ಯಮಾನ-ವಕ್ಷ್ಯಮಾಣ ವಾಕ್ಯಗಳಿಗೆ ಶೇಷವಾಗಿ ವ್ಯಾಖ್ಯಾನ ಮಾಡಿಕೊಳ್ಳಬೇಕು.

ಅಂದರೆ :-

**1) ಅತೋಽಜ್ಞಾಸಂಭವಾದೇವ ನಾಧಿಕಾರ್ಯೈಕ್ಯವಾದಿನಾಮ್ ।**

ಅಜ್ಞಾನಿಯು ಕೂಡದ ಕಾರಣ ಐಕ್ಯವಾದಿಗಳ ಮತದಲ್ಲಿ ಅಧಿಕಾರಿ ಕೂಡುವುದಿಲ್ಲ. ಕಿಂತು ವಿಷಯಾಂತರೇ = ಭೇದವಾದದಲ್ಲಿ ಅಧಿಕಾರಿಯು ಉಪಪನ್ನ ಎಂಬುದಾಗಿ ಪೂರ್ವವಾಕ್ಯದಲ್ಲಿ ಶೇಷ ಮಾಡಿಕೊಳ್ಳಬೇಕು. (''ವಿಷಯಾಂತರೇ'' ಎಂಬ ಪದವನ್ನು ಶೇಷವಾಗಿ ವ್ಯಾಖ್ಯಾನ ಮಾಡಿಕೊಳ್ಳಬೇಕು.)

**2) ಅತೋ ನಾಜ್ಞಾತಮಿತಿ ಚ ವಿಷಯೋ ವಿಷಯಾಂತರೇ ।**

ಅಜ್ಞಾನ ಕೂಡದ ಕಾರಣ ಐಕ್ಯವಾದಿಗಳ ಮತದಲ್ಲಿ ವಿಷಯವೂ ಕೂಡುವುದಿಲ್ಲ. ಕಿಂತು ವಿಷಯಾಂತರೇ = ಭೇದವಾದದಲ್ಲಿ ವಿಷಯವು ಉಪಪನ್ನವಾಗುತ್ತದೆ ಎಂಬುದಾಗಿ ಉಚ್ಯಮಾನವಾಕ್ಯದಲ್ಲಿ ಶೇಷ ಮಾಡಿಕೊಳ್ಳಬೇಕು. (''ವಿಷಯಾಂತರೇ'' ಎಂಬ ಪದವವನ್ನು ಶೇಷವಾಗಿ ವ್ಯಾಖ್ಯಾನ ಮಾಡಿಕೊಳ್ಳಬೇಕು.)

**3) ಅಜ್ಞಾಭಾವಾತ್ ಫಲಂ ಕಸ್ಯ ....**

ಅಜ್ಞಾನ ಕೂಡದ ಕಾರಣ (ಅಜ್ಞಾನಿಯಾದ ವ್ಯಕ್ತಿ ಕೂಡದ ಕಾರಣ) ಐಕ್ಯವಾದಿಗಳ ಮತದಲ್ಲಿ ಪ್ರಯೋಜನವೂ ಕೂಡುವುದಿಲ್ಲ. ಕಿಂತು ವಿಷಯಾಂತರೇ =ಭೇದವಾದದಲ್ಲಿ ಪ್ರಯೋಜನವು ಸಂಭವಿಸುತ್ತದೆ ಎಂಬುದಾಗಿ ವಕ್ಷ್ಯಮಾಣವಾಕ್ಯದಲ್ಲಿ ಹಾಗೂ

**4) ಯೋಗಃ ಶಶನೃಶೃಂಗಯೋಃ ।**

ಅಧಿಕಾರ್ಯಾದಿಗಳು ಇಲ್ಲದ ಕಾರಣ ಐಕ್ಯವಾದಿಗಳ ಮತದಲ್ಲಿ ಸಂಬಂಧವೂ ಸಂಭವಿಸುವುದಿಲ್ಲ. ಕಿಂತು ವಿಷಯಾಂತರೇ = ಭೇದವಾದದಲ್ಲಿ ಸಂಬಂಧವು ಸಂಭವಿಸುತ್ತದೆ ಎಂಬುದಾಗಿ ವಕ್ಷ್ಯಮಾಣವಾಕ್ಯದಲ್ಲಿ ''ವಿಷಯಾಂತರೇ'' ಎಂಬ ಪದವನ್ನು ಶೇಷವಾಗಿ ವ್ಯಾಖ್ಯಾನ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ.

**ಮೂಲ :- ಅಜ್ಞಾಭಾವಾತ್ ಫಲಂ ಕಸ್ಯ ..... ।**

**ಟೀಕಾ : - ಅಜ್ಞೇ ಹಿ ಸತಿ ಅಜ್ಞಾನನಿವೃತ್ತಿಲಕ್ಷಣಂ ಶಾಸ್ತ್ರಫಲಂ ತಸ್ಯ ಸಂಭವತಿ । ಉಕ್ತಪ್ರಕಾರೇಣ ಅಜ್ಞಾನಾನುಪಪತ್ತ್ಯಾ ಅಜ್ಞಾಭಾವಾತ್ ಫಲಂ ಕಸ್ಯ ಸ್ಯಾತ್ ? ನ ಕಸ್ಯಾಪೀತಿ ।**

**ಅನುವಾದ :-** ಅಜ್ಞಾನಿಯಾದ ವ್ಯಕ್ತಿಯು ಇದ್ದರೆ ಅವನಿಗೆ ಅಜ್ಞಾನಿವೃತ್ತಿ-ರೂಪವಾದ ಶಾಸ್ತ್ರಪ್ರಯೋಜನವು ಸಂಭವಿಸುತ್ತದೆ. (ಪ್ರತಿಯೋಗಿತದಭಾವಗಳಲ್ಲಿ ಸಾಮಾನಾಧಿಕರಣ್ಯನಿಯಮ ಇರುವುದರಿಂದ ಅಜ್ಞಾನವು ಯಾವನಲ್ಲಿ ಇರುವದೋ ಅವನಲ್ಲಿಯೇ ಅಜ್ಞಾನನಿವೃತ್ತಿಯೂ ಇರುತ್ತದೆ.) ಪ್ರಕೃತ ಅಜ್ಞಾನಿಯಾದ ವ್ಯಕ್ತಿಯೇ ಇಲ್ಲ ಎಂದಮೇಲೆ ಅಜ್ಞಾನನಿವೃತ್ತಿಯು (ಶಾಸ್ತ್ರಪ್ರಯೋಜನವು) ಯಾರಲ್ಲಿ ಇರಲು ಸಾಧ್ಯ ? ಅಜ್ಞಾನಿಯಾದ ವ್ಯಕ್ತಿಯನ್ನು ಬಿಟ್ಟು ಬೇರೆ ಯಾರಲ್ಲಿಯೂ ಇರಲು ಸಾಧ್ಯವಿಲ್ಲ.

ಆದ್ದರಿಂದ ಐಕ್ಯವಾದಿಗಳ ಮತದಲ್ಲಿ ಪ್ರಯೋಜನವೂ ಕೂಡುವುದಿಲ್ಲ ಎಂದು ಭಾವ.

**ಮೂಲ :- ಯೋಗಃ ಶಶನೃಶೃಂಗಯೋಃ ।**

**ಟೀಕಾ :- ಏವಂ ಅಧಿಕಾರಿವಿಷಯಪ್ರಯೋಜನಾನಾಂ ಅಸತ್ವಾತ್ ತತ್ಸಂಬಂಧಃ ಶಶನೃಶೃಂಗಯೋಃ ಸಂಬಂಧ ಇವಾನುಪಪನ್ನ ಏವ । ತಥಾ ಚ ಅದ್ವೈತಮತೇ ಶಾಸ್ತ್ರಸ್ಯ ಅನಾರಂಭಣೀಯತ್ವಂ ಸ್ಯಾದಿತಿ ।**

**ಅನುವಾದ :-** ಈ ರೀತಿಯಾಗಿ ಅದ್ವೈತಮತದಲ್ಲಿ ಅಧಿಕಾರಿ-ವಿಷಯ-ಪ್ರಯೋಜನಗಳು ಇಲ್ಲವಾದ್ದರಿಂದ (ಸಂಬಂಧಿಪದಾರ್ಥಗಳೇ ಇಲ್ಲವಾದ್ದರಿಂದ) ಅವುಗಳಲ್ಲಿ ಪರಸ್ಪರ ಸಂಬಂಧವು ಶಶಶೃಂಗ-ನೃಶೃಂಗಗಳಲ್ಲಿ ಸಂಬಂಧವು ಅನುಪಪನ್ನವಾದಂತೆ ಅನುಪಪನ್ನವೇ ಆಗಿದೆ.

ಆದ್ದರಿಂದ ಅದ್ವೈತಮತದಲ್ಲಿ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧ ಎಂಬ ಅನುಬಂಧಚತುಷ್ಟಯ ಇಲ್ಲವಾದ್ದರಿಂದ ಶಾಸ್ತ್ರವು ಅನಾರಂಭಣೀಯ-ವಾಗಬೇಕಾಗುತ್ತದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಈ ರೀತಿಯಾಗಿ ''ಅದ್ವೈತಮತದಲ್ಲಿ ಅಜ್ಞಾನವು ಅಸಂಭಾವಿತವಾದ್ದರಿಂದ ಅಧಿಕಾರ್ಯಾದಿ ಅನುಬಂಧಚತುಷ್ಟಯ ಇಲ್ಲ'' ಎಂಬುದಾಗಿ ನಾವು ಉಪಪಾದನೆ ಮಾಡಿದಾಗ, ''ನಮ್ಮ ಮತದಲ್ಲಿ ಅಜ್ಞಾನವು ಅಸಂಭಾವಿತವಲ್ಲ. ಕಿಂತು ಸಂಭಾವಿತವೇ ಆಗಿದೆ'' ಎಂಬುದಾಗಿ ಅದ್ವೈತಿಗಳು ಶಂಕಿಸುತ್ತಾರೆ -

**ಟೀಕಾ :- ನನ್ವಜ್ಞಾನಾಸಂಭವ ಏವ ಕಥಂ ? ಬ್ರಹ್ಮಣೋ ಜೀವಸ್ಯ ವಾ ಅಜ್ಞಾನೋಪಪತ್ತೇಃ । ನ ಚ ತತ್ರ ದೌರ್ಘಟ್ಯಮುಕ್ತಮಜ್ಞಾನಸ್ಯೇತಿ ವಾಚ್ಯಮ್ । ಯತೋಽಜ್ಞಾನಮಾರೋಪಿತಮೇವ । ಪರಮಾರ್ಥಸತೋ ಹಿ ದೌರ್ಘಟ್ಯಂ ಬಾಧಕಂ ನಾರೋಪಿತಸ್ಯ । ಪ್ರತ್ಯುತ ಭೂಷಣಮೇವ । ಅನ್ಯಥಾ ಆರೋಪಿತತ್ವಾನುಪಪತ್ತೇಃ । ತದುಕ್ತಂ -**

**ದುರ್ಘಟತ್ವಮವಿದ್ಯಾಯಾ ಭೂಷಣಂ ನ ತು ದೂಷಣಮ್ ।**
**ಕಥಂಚಿದ್ಘಟಮಾನತ್ವೇಽವಿದ್ಯಾತ್ವಂ ದುರ್ಘಟಂ ಭವೇತ್ । ಇತಿ ।**

**ತಥಾ ಚ ಕಥಮಧಿಕಾರ್ಯಭಾವಃ ? ಇತ್ಯಾಶಂಕಾಂ ಸಿಂಹಾವಲೋಕನನ್ಯಾಯೇನ ಪರಿಹರತಿ -**

**ಮೂಲ :- ದುರ್ಘಟತ್ವಂ ಭೂಷಣಂ ಚೇತ್ ಸ್ಯಾದವಿದ್ಯಾತ್ವಮಾತ್ಮನಃ ।**

**ಯದ್ಯವಿದ್ಯಾಯಾ ಅನುಪಪನ್ನತ್ವೈವ ಭೂಷಣಮಿತ್ಯಂಗೀಕ್ರಿಯತೇ ತದಾ ಆತ್ಮನೋಽವಿದ್ಯಾ ಇತ್ಯಪಿ ನಾಂಗೀಕರ್ತವ್ಯಂ ವಸ್ತುದ್ವಯಕಲ್ಪನೇ ಕಲ್ಪನಾಗೌರವಾತ್ । ಕಿಂ ನಾಮ ? ಆತ್ಮೈವ ಅವಿದ್ಯಾ ಇತ್ಯಂಗೀಕಾರ್ಯಮ್ । ತತಶ್ಚ ಆತ್ಮೈವ ಆತ್ಮಾವರಣಂ ಚೇತ್ ಸರ್ವದಾ ಆವೃತತ್ವಪ್ರಸಂಗೋ ಮೋಕ್ಷೇ ಚ ಆತ್ಮನಿವೃತ್ತಿರಿತ್ಯಾದ್ಯನುಪಪತ್ತಿಃ ಅವಿದ್ಯಾಯಾ ಭೂಷಣಂ ಇತ್ಯೇವ ಸಮಾಧಾನಂ ವಾಚ್ಯಂ ಸ್ಯಾತ್ । ತಸ್ಮಾದನುಪಪತ್ತಿರ್ವಾ ಪರಿಹರ್ತವ್ಯಾ , ಅಜ್ಞಾನಂ ವಾ ತ್ಯಾಜ್ಯಮ್।**

**ಅನುವಾದ :-** ಅಜ್ಞಾನವು (ಕೂಡುವುದಿಲ್ಲ) ಅಸಂಭಾವಿತವಾಗಿದೆ ಎಂದು ಹೇಗೆ ಹೇಳುತ್ತೀರಿ ? ಬ್ರಹ್ಮನಿಗಾಗಲೀ ಜೀವನಿಗಾಗಲೀ ಅಜ್ಞಾನವನ್ನು ಹೇಳಲು ಬರುತ್ತದೆ. (ಅಜ್ಞಾನಕ್ಕೆ ಆಶ್ರಯ ಬ್ರಹ್ಮನಾಗಲೀ ಜೀವನಾಗಲೀ ಆಗಬಹುದಾದ್ದರಿಂದ ಅಜ್ಞಾನವು ಉಪಪನ್ನವಾಗುತ್ತದೆ.)

ಹೌದು, ಅಜ್ಞಾನವು ಬ್ರಹ್ಮಾಶ್ರಿತವಾಗಿದೆ ಎಂಬ ಪಕ್ಷದಲ್ಲಿಯಾಗಲೀ ಅಥವಾ ಜೀವಾಶ್ರಿತವಾಗಿದೆ ಎಂಬ ಪಕ್ಷದಲ್ಲಿಯಾಗಲೀ

**'ಅಜ್ಞತಾಽಖಿಲಸಂವೇತ್ತುರ್ಘಟತೇ ನ ಕುತಶ್ಚನ ।'**

ಇತ್ಯಾದಿಯಾಗಿ ಅಜ್ಞಾನಕ್ಕೆ ದೌರ್ಘಟ್ಯವನ್ನು (ಅನುಪಪನ್ನತ್ವವನ್ನು) ಹೇಳಿದ್ದೇವೆಯಲ್ಲವೇ ? ಎಂದರೆ, ಅದು ಸರಿಯಲ್ಲ. ಏಕೆಂದರೆ - ಅಜ್ಞಾನವು ಆರೋಪಿತವೇ ಆಗಿದೆ. ಪರಮಾರ್ಥಸತ್ ಆದ ವಸ್ತುವಿಗೆ ದೌರ್ಘಟ್ಯವು ಬಾಧಕವಾಗುತ್ತದೆಯೇ ಹೊರತು ಆರೋಪಿತವಸ್ತುವಿಗೆ ದೌರ್ಘಟ್ಯವು ಬಾಧಕವಾಗುವುದಿಲ್ಲ. ಪ್ರತ್ಯುತ ಆರೋಪಿತವಸ್ತುವಿಗೆ ದೌರ್ಘಟ್ಯವು ಭೂಷಣವೇ ಆಗಿದೆ.

ಒಂದುವೇಳೆ ಆರೋಪಿತವಸ್ತುವಿಗೆ ದೌರ್ಘಟ್ಯವು ಬಾಧಕವಾಗುವುದಾದರೆ ಅದಕ್ಕೆ ಆರೋಪಿತತ್ವವೇ ಅನುಪಪನ್ನವಾಗಬೇಕಾಗುತ್ತದೆ. ಅದನ್ನೇ ಹಿರಿಯರು ಹೇಳಿದ್ದಾರೆ -

**ದುರ್ಘಟತ್ವಮವಿದ್ಯಾಯಾ ಭೂಷಣಂ ನ ತು ದೂಷಣಮ್ ।**
**ಕಥಂಚಿದ್ಘಟಮಾನತ್ವೇऽವಿದ್ಯಾತ್ವಂ ದುರ್ಘಟಂ ಭವೇತ್ ।**

ಅದರ ಅಭಿಪ್ರಾಯ :- ಅವಿದ್ಯೆಗೆ ದುರ್ಘಟತ್ವವು (ಆಶ್ರಯಾದಿಗಳನ್ನು ನಿರೂಪಿಸಲು ಬಾರದ ಕಾರಣ ಅನುಪಪನ್ನತ್ವವು) ಭೂಷಣವೇ ಆಗಿದೆ. ಹೊರತು ದೂಷಣವಾಗಿಲ್ಲ. ಅವಿದ್ಯೆಗೆ ಕಥಂಚಿತ್ ಘಟಮಾನತ್ವ ಇರುವುದಾದರೆ (ಆಶ್ರಯಾದಿಗಳನ್ನು ನಿರೂಪಿಸುವ ಮೂಲಕ ಉಪಪದ್ಯಮಾನತ್ವ ಹೇಳುವುದಾದರೆ) ಅವಿದ್ಯೆಗೆ ಅವಿದ್ಯಾತ್ವವೇ [138] ದುರ್ಘಟವಾಗಬೇಕಾಗುತ್ತದೆ ಎಂದು.

ಅಂದಮೇಲೆ ಅವಿದ್ಯೆಗೆ ದುರ್ಘಟತ್ವವು ಭೂಷಣವೇ ಆಗುವುದರಿಂದ, ನಮ್ಮ ಮತದಲ್ಲಿ ಅವಿದ್ಯೆಯು ಉಪಪನ್ನವೇ ಆಗುವುದರಿಂದ 'ಅದ್ವೈತಮತದಲ್ಲಿ ಅಧಿಕಾರಿ ಇಲ್ಲ' ಎಂದು ಹೇಗೆ ಹೇಳುತ್ತೀರಿ ? ಅರ್ಥಾತ್ ನಮ್ಮ ಮತದಲ್ಲಿ ಅಧಿಕಾರಿಯು ಉಪಪನ್ನನೇ ಆಗುತ್ತಾನೆ ಎಂಬುದಾಗಿ ಅದ್ವೈತಿಗಳು ಶಂಕಿಸಿದರೆ, ಈ ಶಂಕೆಯನ್ನು [139] ಸಿಂಹಾವಲೋಕನ ನ್ಯಾಯದಿಂದ ಆಚಾರ್ಯರು ಪರಿಹರಿಸುತ್ತಾರೆ -

---

138 ''ಅವಿದ್ಯಾಯಾ ಅವಿದ್ಯಾತ್ವಮಿದಮೇವ ಸ್ವಲಕ್ಷಣಮ್ । ಯನ್ಮಾನತಾऽಸಹಿಷ್ಣುತ್ವಮ್'' ಎಂಬುದಾಗಿ ಅವರೇ ಹೇಳುವಂತೆ, ಅವಿದ್ಯೆಗೆ ಅವಿದ್ಯಾತ್ವವೇ ಲಕ್ಷಣವಾಗಿದೆ. ಆ ಅವಿದ್ಯಾತ್ವ ಎಂದರೆ ಏನು ? ಮಾನತಾऽಸಹಿಷ್ಣುತ್ವವೇ = ಪ್ರಮಾಣಪ್ರವೃತ್ತ್ಯ-ಸಹಿಷ್ಣುತ್ವವೇ ಅವಿದ್ಯಾತ್ವ ಆಗಿದೆ. ಅಂದರೆ :- ಅವಿದ್ಯೆಯು ತನ್ನ ವಿಷಯದಲ್ಲಿ ಪ್ರಮಾಣವನ್ನು ಸಹನೆ ಮಾಡುವುದಿಲ್ಲ ಎಂದು ತಾತ್ಪರ್ಯ. ಉಪಲಕ್ಷಣಯಾ ಅವಿದ್ಯೆಯು ಆಶ್ರಯಾದಿವಿಚಾರವನ್ನೂ ಸಹನೆ ಮಾಡುವುದಿಲ್ಲ ಎಂದು ತಿಳಿಯಬೇಕು.

ಹೀಗೆ ಪ್ರಮಾಣಪ್ರವೃತ್ತ್ಯಸಹಿಷ್ಣುತ್ವ, ಆಶ್ರಯಾದಿವಿಚಾರಾಸಹಿಷ್ಣುತ್ವವೇ ಅವಿದ್ಯೆಯ ಲಕ್ಷಣವಾಗಿರುವುದರಿಂದ ಪ್ರಕೃತ ಅವಿದ್ಯೆಗೆ ಕಥಂಚಿತ್ ಘಟಮಾನತ್ವ ಹೇಳಿದರೆ (ಆಶ್ರಯಾದಿನಿರೂಪಣೆ ಮಾಡುವುದಾದರೆ) ಅವಿದ್ಯೆಗೆ ಅವಿದ್ಯಾತ್ವವೇ ಅನುಪಪನ್ನವಾಗಬೇಕಾಗುತ್ತದೆ ಎಂದು ಅಭಿಪ್ರಾಯ.

139 ಯದ್ಯಪಿ 'ಚಕ್ರಕಾಪತ್ತಿರಥವಾ' ಎಂಬ ವಾಕ್ಯದ ಅನಂತರ 'ಭೇದಶ್ಚೋಪಾದಿತಃ ಕುತಃ' ಎಂಬ ವಾಕ್ಯಕ್ಕಿಂತಲೂ ಪೂರ್ವದಲ್ಲಿಯೇ ಈ ಶಂಕೆಯನ್ನು ಪರಿಹರಿಸಬೇಕು. ತಥಾಪಿ ಯಾವ ರೀತಿಯಾಗಿ ಸಿಂಹವು ಮುಂದೆ ಮುಂದೆ ಸಾಗುತ್ತಾ ಬಹಳ ದೂರ ಹೋದಮೇಲೆ ಒಮ್ಮೆ ಹಿಂತಿರುಗಿ ನೋಡುವುದೋ ಅದರಂತೆ ಸಿಹಾವಲೋಕನ ನ್ಯಾಯದಿಂದ ಎಲ್ಲ ವಿಷಯಗಳನ್ನು ನಿರಾಕರಿಸುತ್ತಾ ಬಹಳ ದೂರ ಬಂದಿದ್ದರೂ ಒಮ್ಮೆ ಹಿಂತಿರುಗಿ ನೋಡುವ ಮೂಲಕ ಹಿಂದೆ ಸಂಭಾವಿತವಾದ ಈ ಶಂಕೆಯನ್ನು ಇಲ್ಲಿ ಪರಿಹರಿಸುತ್ತಿದ್ದಾರೆ ಎಂದು ಅಭಿಪ್ರಾಯ.

**ಮೂಲ :- ದುರ್ಘಟತ್ವಂ ಭೂಷಣಂ ಚೇತ್ ಸ್ಯಾದವಿದ್ಯಾತ್ವಮಾತ್ಮನಃ ।**

**ಮೂಲಾರ್ಥ :- ಅವಿದ್ಯೆಗೆ ದುರ್ಘಟತ್ವವು ಭೂಷಣವೇ ಆಗಿದೆ ಎನ್ನುವುದಾದರೆ, ಆತ್ಮನೇ ಅವಿದ್ಯಾ ಎಂಬುದಾಗಿ ಆತ್ಮನಿಗೇ ಅವಿದ್ಯಾತ್ವವನ್ನು ಹೇಳಿದಂತಾಗುತ್ತದೆ.**

ಒಂದುವೇಳೆ ಅವಿದ್ಯೆಗೆ ಅನುಪಪನ್ನತ್ವವೇ ಭೂಷಣ ಎಂದು ಅಂಗೀಕರಿಸುವುದಾದರೆ, ಆಗ 'ಆತ್ಮನಿಗೆ ಅವಿದ್ಯಾ' ಎಂಬುದಾಗಿಯೂ ಅಂಗೀಕರಿಸದೇ ಹೋಗಬೇಕಾಗುತ್ತದೆ. ಹಾಗೆ 'ಆತ್ಮನಿಗೆ ಅವಿದ್ಯಾ' ಎಂದು ಅಂಗೀಕರಿಸಿದರೆ ಆತ್ಮ+ಅವಿದ್ಯಾ ಎಂಬುದಾಗಿ ಎರಡು ವಸ್ತುಗಳನ್ನು ಅಂಗೀಕರಿಸಿದಂತಾಗುವುದರಿಂದ ಕಲ್ಪನಾಗೌರವದೋಷ ಬರಬೇಕಾಗುತ್ತದೆ. ಹಾಗಾದರೆ ಏನೆಂದು ಅಂಗೀಕರಿಸಬೇಕು ? ಎಂದರೆ, ಆತ್ಮನೇ ಅವಿದ್ಯಾ ಎಂದು [140] ಅಂಗೀಕರಿಸಬೇಕು.

ಹಾಗೆ ಆತ್ಮನೇ ಅವಿದ್ಯಾ ಎಂದು ಅಂಗೀಕರಿಸಿದರೆ, ಅವಿದ್ಯಾ ಆವರಣವಸ್ತುವಾಗಿರುವುದರಿಂದ ಆತ್ಮನಿಗೆ ಆತ್ಮನೇ ಆವರಣ ಎಂದು ಹೇಳಿದಂತಾಗುತ್ತದೆ. ಹಾಗೆ ಆತ್ಮನಿಗೆ ಆತ್ಮನೇ ಆವರಣವಾಗುವುದಾದರೆ, ಆವರಣನಾದ ಆತ್ಮನು ನಿತ್ಯನಾಗಿದ್ದರಿಂದ ಆತ್ಮನು ಸರ್ವದಾ ಆವೃತನಾಗಬೇಕಾದ ಪ್ರಸಂಗ ಮತ್ತು ಮೋಕ್ಷದಲ್ಲಿ [141] ಆತ್ಮನಿವೃತ್ತಿಪ್ರಸಂಗ ಇತ್ಯಾದಿ ಅನುಪಪತ್ತಿಯು

---

140 ಆತ್ಮನಿಗೆ ಅವಿದ್ಯಾ ಎಂದು ಹೇಳಿ (ಆತ್ಮ+ಅವಿದ್ಯಾ ಎಂಬುದಾಗಿ ಎರಡು ವಸ್ತುಗಳನ್ನು ಅಂಗೀಕರಿಸಿ) ಅವಿದ್ಯೆಯ ವಿಷಯದಲ್ಲಿ ಬಂದ ಅನುಪಪತ್ತಿಯು ಭೂಷಣವೇ ಆಗಿದೆ ಎಂಬುದಾಗಿ ಹೇಳುವ ಪಕ್ಷಕ್ಕಿಂತಲೂ, ಆತ್ಮನೇ ಅವಿದ್ಯಾ ಎಂದು ಹೇಳಿ ಅವಿದ್ಯೆಯ ವಿಷಯದಲ್ಲಿ ಬಂದ ಅನುಪಪತ್ತಿಯು ಭೂಷಣವೇ ಆಗಿದೆ ಎಂಬುದಾಗಿ ಹೇಳುವ ಪಕ್ಷವೇ ಸೂಕ್ತವಾಗುತ್ತದೆ. ಏಕೆಂದರೆ - ಅವಿದ್ಯೆಯ ವಿಷಯದಲ್ಲಿ ಬಂದ ಅನುಪಪತ್ತಿಯು ಭೂಷಣವೇ ಆಗಿದೆ ಎಂದು ಹೇಳುವುದು ಎರಡೂ ಪಕ್ಷಗಳಲ್ಲಿಯೂ ಸಮಾನವಾಗಿದ್ದರೂ ಸಹ, ಆತ್ಮನಿಗೆ ಅವಿದ್ಯಾ ಎಂಬ ಮೊದಲನೇ ಪಕ್ಷದಲ್ಲಿ ಆತ್ಮ+ಅವಿದ್ಯೆ ಎಂದು ಎರಡು ವಸ್ತುಗಳನ್ನು ಅಂಗೀಕರಿಸಿದಂತಾಗುವುದರಿಂದ ಕಲ್ಪನಾಗೌರವದೋಷ ಬರುತ್ತದೆ. ಆತ್ಮನೇ ಅವಿದ್ಯಾ ಎಂಬ ಎರಡನೇ ಪಕ್ಷದಲ್ಲಿ (ಕಲ್ಪನಾಗೌರವದೋಷ ಇಲ್ಲ) ಕಲ್ಪನಾಲಾಘವ ಇದೆ. ಆದ್ದರಿಂದ ಆತ್ಮನಿಗೆ ಅವಿದ್ಯಾ ಎಂದು ಹೇಳುವುದಕ್ಕಿಂತಲೂ ಆತ್ಮನೇ ಅವಿದ್ಯಾ ಎಂದು ಹೇಳುವುದೇ ಸೂಕ್ತವಾಗಿದೆ ಎಂದು ಅಭಿಪ್ರಾಯ.

ಬಂದೇ ಬರುತ್ತದೆ. ಈ ಅನುಪಪತ್ತಿಯು ಅವಿದ್ಯೆಗೆ ಭೂಷಣವೇ ಆಗಿದೆ ಎಂದು ಸಮಾಧಾನ ಹೇಳಬೇಕಾಗುತ್ತದೆ. ಆದ್ದರಿಂದ ಈ ವಿಧವಾದ ಅನುಪಪತ್ತಿಯನ್ನಾದರೂ ಪರಿಹರಿಸಿಕೊಳ್ಳಬೇಕು ಅಥವಾ ಆತ್ಮನಿಗೆ ಅಜ್ಞಾನವನ್ನಾದರೂ ಕೈ ಬಿಡಬೇಕು.

**ಟೀಕಾ :- ಸತ್ಯಾಂ ಪ್ರತೀತೌ ಇದಮುಚ್ಯತೇ । ನ ಚ ಆತ್ಮನೋಽವಿದ್ಯಾತ್ವಂ ಪ್ರತೀಯತ ಇತಿ ಚೇತ್ ಸಮಂ ಪ್ರಕೃತೇಽಪಿ । ನ ಹಿ ಸರ್ವಜ್ಞಸ್ಯ ಬ್ರಹ್ಮಣೋಽ-ಜ್ಞಾನಂ ಪ್ರತೀಯತೇ । ನಾಪಿ 'ಪರಮಾತ್ಮೈವೋಪಾಧ್ಯವಚ್ಛಿನ್ನೋಽಹಮಜ್ಞಃ' ಇತಿ ಪ್ರತೀತಿರಸ್ತಿ । ಯಥಾಸ್ವರೂಪಂ ಪ್ರತಿಭಾಸಾಭಾವಶ್ಚ ಆತ್ಮರೂಪಾವಿದ್ಯಯೈವ ಕಲ್ಪ್ಯತಾಂ ಲಾಘವಾದಿತ್ಯುಕ್ತಮೇವೇತಿ ।**

**ಅನುವಾದ :-** 'ಆತ್ಮನಿಗೆ ಅವಿದ್ಯಾ ಎಂದು ಹೇಳುವುದಕ್ಕಿಂತಲೂ ಕಲ್ಪನಾಲಾಘವ ಇರುವುದರಿಂದ ಆತ್ಮನೇ ಅವಿದ್ಯಾ ಎಂದು ಹೇಳಿರಿ' ಎಂಬುದಾಗಿ ನೀವು (ದ್ವೈತಿಗಳು) ನಮ್ಮ ಮೇಲೆ ಆಕ್ಷೇಪ ಮಾಡುವುದು ಸರಿಯಲ್ಲ. ಏಕೆಂದರೆ- 'ಅಹಂ ಅಜ್ಞಃ' ಎಂಬುದಾಗಿ ಆತ್ಮನಿಗೆ ಅಜ್ಞಾನವು ತೋರುವುದರಿಂದ ಆತ್ಮನಿಗೆ ಅವಿದ್ಯಾ ಎಂದು ಅಂಗೀಕರಿಸಿ, ಅವಿದ್ಯೆಗೆ ಅನುಪಪನ್ನತ್ವವು ಭೂಷಣವಾಗಿದೆ ಎಂದು ಹೇಳುತ್ತೇವೆ. ಆದರೆ 'ಅಹಂ ಅವಿದ್ಯಾ' ಎಂಬುದಾಗಿ ಆತ್ಮನಿಗೆ ಅವಿದ್ಯಾತ್ವವು ತೋರುವುದಿಲ್ಲವಾದ್ದರಿಂದ ಆತ್ಮನೇ ಅವಿದ್ಯಾ ಎಂದು ಅಂಗೀಕರಿಸಿ ಅವಿದ್ಯೆಗೆ ಅನುಪಪನ್ನತ್ವವು ಭೂಷಣವಾಗಿದೆ ಎಂಬುದಾಗಿ ಹೇಳುವುದಿಲ್ಲ.

ಈ ರೀತಿಯಾಗಿ ಅದ್ವೈತಿಗಳು ಆಕ್ಷೇಪಿಸಿದರೆ 'ಸಮಂ ಪ್ರಕೃತೇಽಪಿ' ಎನ್ನುತ್ತೇವೆ. ಆತ್ಮನಿಗೆ ಅವಿದ್ಯಾತ್ವಪ್ರತೀತಿಯು ಹೇಗೆ ಇಲ್ಲವೋ, ಅದರಂತೆ ಆತ್ಮನಿಗೆ ಅಜ್ಞಾನಪ್ರತೀತಿಯೂ ಇಲ್ಲ.

ಅಜ್ಞಾನದ ಪ್ರತೀತಿ ಇಲ್ಲ ಎಂದು ಹೇಗೆ ಹೇಳುತ್ತೀರಿ ? 'ಅಹಂ ಅಜ್ಞಃ' ಎಂಬ ಪ್ರತೀತಿಯು ಸರ್ವಸಿದ್ಧವಾಗಿದೆಯಲ್ಲ ? ಎಂದರೆ, ಅಜ್ಞಾನಪ್ರತೀತಿಯನ್ನು ಬ್ರಹ್ಮನಿಗೆ ಅಂಗೀಕರಿಸುತ್ತೀರೋ ? ಅಥವಾ ಜೀವನಿಗೆ ಅಂಗೀಕರಿಸುತ್ತೀರೋ ?

---

141 ಅವಿದ್ಯಾ(ಆವರಣೆ)ನಿವೃತ್ತಿಯೇ ಮೋಕ್ಷವಾಗಿದೆ. ಪ್ರಕೃತ ಆವರಣನಿವೃತ್ತಿಯನ್ನು ಅಂಗೀಕರಿಸಿದರೆ ಮೋಕ್ಷದಲ್ಲಿ ಆತ್ಮನಿವೃತ್ತಿಯನ್ನೇ ಅಂಗೀಕರಿಸಿದಂತಾಗುತ್ತದೆ ಎಂದು ಭಾವ.

ಬ್ರಹ್ಮನಿಗೆ ಅಜ್ಞಾನಪ್ರತೀತಿಯನ್ನು ಹೇಳಲು ಬರುವುದಿಲ್ಲ. ಕಾರಣ ಬ್ರಹ್ಮನು ಸರ್ವಜ್ಞನಾಗಿದ್ದಾನೆ. ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವು ಪ್ರತೀತವಾಗುವುದಿಲ್ಲ ('ಅಹಂ ಅಜ್ಞಃ' ಎಂಬ ಪ್ರತೀತಿಯು ಬ್ರಹ್ಮನಿಗೆ ಬರುವುದಿಲ್ಲ.)

'ಅಹಂ ಅಜ್ಞಃ' ಎಂಬ ಪ್ರತೀತಿಯಂತೂ ಇದೆ. ಅಹಮರ್ಥವನ್ನು ನಾವು ಸರ್ವಜ್ಞನಾದ ಬ್ರಹ್ಮನಿಂದ ಅಭಿನ್ನ ಎಂದೇ ಅಂಗೀಕರಿಸುತ್ತೇವೆ. ಆದ್ದರಿಂದ ಸರ್ವಜ್ಞನಾದ ಪರಮಾತ್ಮನಿಗೇ ಅಜ್ಞಾನದ ಪ್ರತೀತಿ ಇದ್ದಂತಾಯಿತಲ್ಲವೇ ? ಎಂದರೆ, ಇಲ್ಲಿ ಕೇವಲ ಅಹಮರ್ಥಕ್ಕೆ ಅಜ್ಞಾನ ತೋರುತ್ತದೆ ಎನ್ನುತ್ತೀರೋ ? ಅಥವಾ ಪರಮಾತ್ಮನಿಂದ ಅಭೇದವೂ ತೋರುತ್ತದೆ ಎನ್ನುತ್ತೀರೋ ?

ಕೇವಲ ಅಹಮರ್ಥಕ್ಕೆ ಅಜ್ಞಾನ ತೋರುತ್ತದೆ ಎನ್ನುವುದಾದರೆ ಅದು ನಮಗೂ ಸಮ್ಮತವೇ ಆಗಿದೆ. ಪರಮಾತ್ಮನಿಂದ ಅಭೇದವೂ ತೋರುತ್ತದೆ ಎಂಬ ಎರಡನೇ ಪಕ್ಷವನ್ನು 'ನಾಪಿ' ಎಂಬ ವಾಕ್ಯದಿಂದ ಖಂಡಿಸುತ್ತಾರೆ.

**'ಉಪಾಧ್ಯವಚ್ಛಿನ್ನಃ ಪರಮಾತ್ಮೈವ ಅಹಂ ಅಜ್ಞಃ'**

''ಉಪಾಧ್ಯವಚ್ಛಿನ್ನನಾದ (ಉಪಾಧಿಯಿಂದ ಕೂಡಿದ) ಪರಮಾತ್ಮನೇ ಆದ ನಾನು (ಪರಮಾತ್ಮನಿಂದ ಅಭಿನ್ನನಾದ ನಾನು) ಅಜ್ಞಾನಿಯಾಗಿದ್ದೇನೆ''

ಎಂಬುದಾಗಿ ಯಾರಿಗೂ ಪ್ರತೀತಿ ಬರುವುದಿಲ್ಲವಾದ್ದರಿಂದ ಎರಡನೇ ಪಕ್ಷವೂ ಸರಿಯಲ್ಲ ಎಂದು ಭಾವ.

ಜೀವನು ಜ್ಞಾನ-ಆನಂದಾದಿರೂಪಬ್ರಹ್ಮಾತ್ಮಕನಾಗಿದ್ದಾನೆ. ಅಂತಹ ಜೀವನಿಗೆ ತನ್ನ ಸ್ವರೂಪಪ್ರತಿಭಾಸ ಆಗುವುದಿಲ್ಲ. (ತನ್ನಲ್ಲಿರುವ ಜ್ಞಾನಾನಂದಾದಿರೂಪ ಬ್ರಹ್ಮಾತ್ಮಕತ್ವವು ತೋರುವುದಿಲ್ಲ.) ಅದು ಜೀವರಿಗೆ ಅನುಭವಸಿದ್ಧ. ಆದ್ದರಿಂದ ಜೀವನ ನಿಜಸ್ವರೂಪಕ್ಕೆ ಆವರಕವಾದ, ಆತ್ಮಾತಿರಿಕ್ತವಾದ ಅವಿದ್ಯೆಯು ಜೀವನಲ್ಲಿ ಇದೆ ಎಂದು ಅಂಗೀಕರಿಸಲೇಬೇಕಲ್ಲ ! ಎಂಬುದಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ಸ್ವರೂಪಪ್ರತಿಭಾಸ ಆಗದಿರುವುದು ಆತ್ಮಾತಿರಿಕ್ತವಾದ ಅವಿದ್ಯೆಯಿಂದ ಎಂದು ಅಂಗೀಕರಿಸಿದರೆ ಗೌರವ ಬರುವುದರಿಂದ, ಆತ್ಮಸ್ವರೂಪಅವಿದ್ಯೆಯಿಂದಲೇ ಸ್ವರೂಪಪ್ರತಿಭಾಸ ಆಗುವುದಿಲ್ಲ ಎಂದು ಹೇಳುವುದು ಸೂಕ್ತ ಎಂಬುದಾಗಿ ಇದಕ್ಕೆ ಈ ಹಿಂದೆಯೇ ಸಮಾಧಾನ ಹೇಳಿಯಾಗಿದೆ.

ಆದ್ದರಿಂದ ಆತ್ಮಾತಿರಿಕ್ತ ಅವಿದ್ಯೆಯನ್ನು ಅಂಗೀಕರಿಸಿ ಅವಿದ್ಯೆವಿಷಯದಲ್ಲಿ ಬಂದ ಅನುಪಪತ್ತಿಯನ್ನು ಭೂಷಣ ಎಂದು ಅಂಗೀಕರಿಸುವುದಕ್ಕಿಂತಲೂ, ಆತ್ಮನೇ ಅವಿದ್ಯೆ ಎಂದು ಅಂಗೀಕರಿಸಿ ಅವಿದ್ಯೆವಿಷಯದಲ್ಲಿ ಬಂದ ಅನುಪಪತ್ತಿಯನ್ನು ಭೂಷಣ ಎಂದು ಅಂಗೀಕರಿಸುವುದು ಸೂಕ್ತವಾಗಿದೆ. (ಲಾಘವರೂಪ ಗುಣವಿದೆ.) ಹಾಗೆ ಆತ್ಮನೇ ಅವಿದ್ಯೆ ಎಂದು ಹೇಳಿದರೆ, ಆತ್ಮನು ಸದಾ ಆವೃತನಾಗಬೇಕಾದ ಪ್ರಸಂಗ ಹಾಗೂ ಮೋಕ್ಷದಲ್ಲಿ ಆತ್ಮನಿವೃತ್ತಿಯಾಗಬೇಕಾದ ಪ್ರಸಂಗ ಇತ್ಯಾದಿ ಅನುಪಪತ್ತಿಯು ಅಪರಿಹಾರ್ಯವಾಗಿದೆ.

**ಟೀಕಾ :- ಕಿಂಚ ಅನುಪಪತ್ತಿರ್ಭೂಷಣಮಿತ್ಯಂಗೀಕುರ್ವತಾ ಅಧಿಗತವೇದಾಂತಸ್ಯಾಪ್ಯದ್ವೈತವಾದಿನೋ ನಿತ್ಯನಿರಯಪ್ರಾಪ್ತಿರಂಗೀಕರ್ತವ್ಯಾ । ಸರ್ವಜ್ಞಸ್ಯ ಅಜ್ಞಾನಾನುಪತ್ತೇರಿವ ಅಧಿಗತಮಹಾವಾಕ್ಯಸ್ಯ ನಿತ್ಯದುಃಖಾನುಪಪತ್ತೇರಪಿ ಭೂಷಣತ್ವಸಂಭವಾತ್ । ನಿರಯಾದೇರಪ್ಯವಿದ್ಯಾಮಯತ್ವಾತ್ ಇತ್ಯಾಹ -**

**ಮೂಲ :- ಅಂಧಂತಮೋಽಪ್ಯಲಂಕಾರೋ**
**ನಿತ್ಯದುಃಖಂ ಶಿರೋಮಣಿಃ ।**

**ಸ್ಯಾದಿತಿ ವರ್ತತೇ । ಅಧಿಗತಮಹಾವಾಕ್ಯಸ್ಯೇತಿ ಶೇಷಃ । ಅನೇನ ಪರಬ್ರಹ್ಮಣೋಽಜ್ಞಾನಮಂಗೀಕುರ್ವಾಣಾನಾಮಿದಂ ಫಲಂ ಭವತೀತಿ ಸೂಚಿತಂ ಭವತಿ।**

**ಅನುವಾದ :-** ಮತ್ತು , ಅನುಪಪತ್ತಿಯು ಭೂಷಣವಾಗಿದೆ ಎಂಬುದಾಗಿ ಅಂಗೀಕರಿಸುವ ನೀವು ವೇದಾಂತವನ್ನು ಚೆನ್ನಾಗಿ ತಿಳಿದಂತಹ ಅದ್ವೈತವಾದಿಗೂ ಸಹ ನಿತ್ಯನಿರಯಪ್ರಾಪ್ತಿಯನ್ನು ಅಂಗೀಕರಿಸಬೇಕಾಗುತ್ತದೆ.

ಸರ್ವಜ್ಞನಾದವನಿಗೆ ಅಜ್ಞಾನವು (ಯುಕ್ತಿವಿರುದ್ಧವಾಗುತ್ತದೆ) ಸಂಭವಿಸುವುದಿಲ್ಲ ಎಂಬುದಾಗಿ ಯುಕ್ತಿವಿರೋಧ ಹೇಳಿದಾಗ, ಆ ಅನುಪಪತ್ತಿಯು (ಯುಕ್ತಿವಿರೋಧವು) ಅಜ್ಞಾನಕ್ಕೆ ಭೂಷಣವಾಗಿದೆ ಎಂದು ಹೇಗೆ ಹೇಳುತ್ತೀರೋ, ಅದರಂತೆಯೇ 'ತತ್ತ್ವಮಸಿ' ಮೊದಲಾದ ಮಹಾವಾಕ್ಯಗಳನ್ನು ಚೆನ್ನಾಗಿ ತಿಳಿದಂತಹ ಅದ್ವೈತವಾದಿಗೂ ನಿತ್ಯನಿರಯವಾಗಬೇಕಾಗುತ್ತದೆ ಎಂದು ಹೇಳಿದಾಗ ನೀವು [142] ಶ್ರುತಿವಿರೋಧ ಹೇಳುವುದಾದರೆ ಈ ಅನುಪಪತ್ತಿಯೂ (ಶ್ರುತಿವಿರೋಧವೂ) ನಮಗೆ ಭೂಷಣವೇ ಆಗಿದೆ ಎಂದೇ ಹೇಳಬೇಕಾಗುತ್ತದೆ.

ಅಲ್ಲಿ ಅಜ್ಞಾನವು ಆರೋಪಿತವಾದ್ದರಿಂದ ಅದಕ್ಕೆ ದೌರ್ಘಟ್ಯವು ಭೂಷಣ ಎಂದು ಹೇಳಬಹುದು. ಪ್ರಕೃತ ನಿರಯಾದಿಗಳು ಹಾಗಾಗಿಲ್ಲವಲ್ಲ ? ಎಂದು ಹೇಳುವುದು ಸರಿಯಲ್ಲ. ಕಾರಣ-ಉಪಾದಾನ-ಉಪಾದೇಯಗಳಲ್ಲಿ ಅಭೇಧ ಇರುವುದರಿಂದ ಅವಿದ್ಯಾವಚ್ಛಿನ್ನವಾದ ನಿರಯಾದಿಗಳೂ ಆರೋಪಿತವಾದ್ದರಿಂದ ಅದರ ದೌರ್ಘಟ್ಯವೂ ಭೂಷಣವಾಗಬಹುದಾಗಿದೆ ಎಂಬುದಾಗಿ ಆಚಾರ್ಯರು ದೋಷ ಹೇಳುತ್ತಾರೆ -

**ಮೂಲ :- ಅಂಧಂತಮೋಽಪ್ಯಲಂಕಾರೋ ನಿತ್ಯದುಃಖಂ ಶಿರೋಮಣಿಃ ।**

ಮೂಲದಲ್ಲಿ 'ಸ್ಯಾತ್' ಎನ್ನುವುದು ಅನುವೃತ್ತವಾಗುತ್ತದೆ. 'ಶಿರೋಮಣಿಃ ಸ್ಯಾತ್' ಎಂದು ಅನ್ವಯ ಮಾಡಿಕೊಳ್ಳಬೇಕು. ಮತ್ತು ಯಾರಿಗೆ ಎಂದು ಮೂಲದಲ್ಲಿ ತಿಳಿಸಿಲ್ಲವಾದ್ದರಿಂದ 'ಅಧಿಗತಮಹಾವಾಕ್ಯಸ್ಯ' ಎಂದು ಶೇಷ ಮಾಡಿಕೊಳ್ಳಬೇಕು.

ಹಾಗಾದರೆ 'ತತ್ತ್ವಮಸಿ' ಮೊದಲಾದ ಮಹಾವಾಕ್ಯಗಳನ್ನು ಚೆನ್ನಾಗಿ (ಅಧ್ಯಯನ ಮಾಡಿದ) ತಿಳಿದುಕೊಂಡಂತಹ ಅದ್ವೈತವಾದಿಗೆ ನಿತ್ಯದುಃಖಸ್ವರೂಪವಾದ ಅಂಧಂತಮಸ್ಸು

''ಶಿರೋಮಣಿಃ = ಅಲಂಕಾರಃ''

ಶಿರೋರತ್ನಭೂತವಾದ ಅಲಂಕಾರವಾಗಲಿ ಎಂದು ಮೂಲಾರ್ಥ ತಿಳಿಯುವುದು.

ಈ ರೀತಿಯಾಗಿ ಅಂಧಂತಮಸ್ಸು ಅಲಂಕಾರವಾಗಲಿ ಎಂಬುದಾಗಿ ಹೇಳುವ ಮೂಲಕ ''ಯಾರು ಪರಬ್ರಹ್ಮನಿಗೆ ಅಜ್ಞಾನವನ್ನು ಅಂಗೀಕರಿಸುತ್ತಾರೆಯೋ ಅವರಿಗೆ ಇಂತಹ ನಿತ್ಯದುಃಖಸ್ವರೂಪವಾದ ಅಂಧಂತಮಸ್ಸು ಫಲವಾಗಿ ದೊರೆಯುತ್ತದೆ '' ಎಂದು ಸೂಚಿಸುತ್ತಿದ್ದಾರೆ ಆಚಾರ್ಯರು.

**ಟೀಕಾ :- 'ವೇದವೇದಾಂತಯೋಃ ಜೀವಬ್ರಹ್ಮಣೋರೇಕತ್ವೇ ತಾತ್ಪರ್ಯಂ' ಇತ್ಯಂಗೀಕಾರೇ ಅಧಿಕಾರ್ಯಾದ್ಯನುಪಪತ್ತ್ಯಾ ಅನಾರಂಭಣೀಯತ್ವಂ ಸ್ಯಾತ್ ।**

---

142 'ತತ್ವಮಸಿ' ಮೊದಲಾದ ಮಹಾವಾಕ್ಯಗಳನ್ನು ಚೆನ್ನಾಗಿ ತಿಳಿದಂತಹ ಅದ್ವೈತವಾದಿಗೆ ಮೋಕ್ಷವಾಗುತ್ತದೆ ಎಂಬುದಾಗಿ ಶ್ರುತಿಗಳು ಹೇಳುತ್ತಿರುವುದರಿಂದ ಪ್ರಕೃತ ಜ್ಞಾನಿಯಾದ ಅದ್ವೈತವಾದಿಗೆ ನಿತ್ಯನಿರಯವನ್ನು ಹೇಳಿದರೆ ಶ್ರುತಿವಿರೋಧ ಬರುತ್ತದೆ.

ಭೇದಪಕ್ಷೇ ತು ಅಧಿಕಾರ್ಯಾದಿಸಂಭವಾತ್ ಆರಂಭಣೀಯತ್ವೋಪಪತ್ತಿರಿತಿ ವಿಷಯಾಂತರೇ ಇತ್ಯನೇನೋಕ್ತಮ್ । ತದ್ವಿವೃಣೋತಿ[143] -

ಮೂಲ :- ಅತಃ ಪರೋ ಮಾತ್ರಯೇತಿ [144]ಪೂರ್ವಶ್ರುತಿನಿದರ್ಶಿತಃ ।
ಅನ್ಯಮೀಶಮಿತಿ ಶ್ರುತ್ಯಾ ಭಿನ್ನಜೀವದೃಶಂ ಗತಃ ।
ಭಿನ್ನತ್ವೇನಾತ್ಮಸಾದೃಶ್ಯದೋ ಯದೇತಿ ಶ್ರುತೇಃ ಸದಾ ॥

ಅತ ಇತಿ ಅದ್ವೈತಪಕ್ಷೇ ಅಧಿಕಾರ್ಯಾದ್ಯಸಂಭವಂ ಪರಾಮೃಶತಿ । ಅತ್ರ [145]ಆದ್ಯಾರ್ಧಶ್ಲೋಕೇನ ಪರಮೇಶ್ವರಃ ಶಾಸ್ತ್ರಸ್ಯ ವಿಷಯೋ ದರ್ಶಿತಃ । ಸ ಚ ಈಶ್ವರಪದಾದೇವ ವಿದಿತ ಇತಿ [146]ಕಥಂ ಶಾಸ್ತ್ರಸ್ಯ ವಿಷಯಃ ಸ್ಯಾತ್ ? ಇತ್ಯತ ಉಕ್ತಂ - [147]ಪರೋ ಮಾತ್ರಯೇತಿ । ಈಶ್ವರಸತ್ತಾಮಾತ್ರಸ್ಯ [148]ಕಥಂಚಿತ್ ಅಧಿಗತತ್ವೇಽಪಿ ತಸ್ಯ ಅಪರಿಮಿತಗುಣಾಕಾರತಯಾ ಶ್ರುತಿನಿದರ್ಶಿತಸ್ಯ [149]ತಥಾ ಅನವಗಮಾತ್ [150]ಸಾಮಾನ್ಯತೋ ವಿಶೇಷತಶ್ಚ ತದವಗಮಾರ್ಥಂ ಶಾಸ್ತ್ರಮಿತಿ ।

ಅನುವಾದ :- ''ವೇದ-ವೇದಾಂತಗಳಿಗೆ ಜೀವ-ಬ್ರಹ್ಮರ ಐಕ್ಯದಲ್ಲಿ ತಾತ್ಪರ್ಯವಿದೆ'' ಎಂಬುದಾಗಿ ಅಂಗೀಕರಿಸಿದರೆ ಅಧಿಕಾರ್ಯಾದಿಗಳು

---

143 ವಿಷಯಾಂತರ ಇತಿ ಸಾಮಾನ್ಯತಃ ಪ್ರತಿಜ್ಞಾತಂ ತದನುಪಪತ್ತಿಪರಿಹಾರಾಯ ಶ್ರುತ್ಯುದಾಹರಣಪೂರ್ವಕಂ ವಿವೃಣೋತೀತ್ಯರ್ಥಃ । (ಶ್ರೀನಿ ವ್ಯಾಖ್ಯಾ)

144 ಮೂಲೇ 'ಇತಿ ಪೂರ್ವಶ್ರುತೀ'ತ್ಯತ್ರ ಪೂರ್ವಶಬ್ದ ಆದಿಶಬ್ದಾರ್ಥಕಃ । ತೇನ ''ಗುಣಾಃ ಶ್ರುತಾಸ್ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ'' ಇತ್ಯಾದಿಗ್ರಹಣಮ್ । (ಶ್ರೀನಿ ವ್ಯಾಖ್ಯಾ)

145 ಆದ್ಯಾರ್ಧಶ್ಲೋಕೇನೇತಿ । ಶ್ಲೋಕಸ್ಯಾದ್ಯಾರ್ಧಃ । ಆದ್ಯಾರ್ಧಶ್ಲೋಕಃ । ತೇನೇತ್ಯರ್ಥಃ । (ಶ್ರೀನಿ ವ್ಯಾಖ್ಯಾ)

146 ಕಥಮಿತಿ । ಅಜ್ಞಾತತ್ವಾಭಾವಾದಿತಿ ಭಾವಃ । ಅಪ್ರಾಪ್ತೇ ಶಾಸ್ತ್ರಮರ್ಥವದಿತಿ ನ್ಯಾಯಾದಿತಿ ದ್ರಷ್ಟವ್ಯಮ್ । (ಶ್ರೀನಿ ವ್ಯಾಖ್ಯಾ)

147 'ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ' ಇತಿ ಶ್ರುತೇರಯಮರ್ಥಃ । ತನ್ವಾ ಶರೀರೇಣೈವ ನ ತು ಕೀರ್ತಿಮಾತ್ರೇಣ ವಾವೃಧಾನ ವವೃಧಾನ ಹೇ ವಿಷ್ಣೋ ! ತ್ವಂ ಮಾತ್ರಯಾ ಗುಣಾನಾಂ ಪರಿಮಿತೇಃ ಸಕಾಶಾತ್ ಪರೋಽತೀತೋಽಸಿ ಅಪರಿಮಿತಗುಣೋಽಸೀತ್ಯರ್ಥಃ । ಏತಾದೃಶಸ್ಯ ತೇ ಮಹಿತ್ವಂ ಕೇಽಪಿ ನಾಶ್ನುವಂತೀತಿ । (ಶ್ರೀನಿ ವ್ಯಾಖ್ಯಾ)

ಕೊಡುವುದಿಲ್ಲವಾದ್ದರಿಂದ ವೇದ-ವೇದಾಂತಗಳಿಗೆ ಅನಾರಂಭಣೀಯತ್ವ ಬರಬೇಕಾಗುತ್ತದೆ. ಭೇದಪಕ್ಷದಲ್ಲಿ ಮಾತ್ರ ('ವೇದ-ವೇದಾಂತಗಳಿಗೆ ಜೀವ-ಬ್ರಹ್ಮರ ಭೇದದಲ್ಲಿ ತಾತ್ಪರ್ಯವಿದೆ' ಎಂಬುದಾಗಿ ಹೇಳುವ ನಮ್ಮ ಪಕ್ಷದಲ್ಲಿ ಮಾತ್ರ) ಅಧಿಕಾರ್ಯಾದಿಗಳು ಕೂಡುವುದರಿಂದ ವೇದ-ವೇದಾಂತಗಳಿಗೆ ಆರಂಭಣೀಯತ್ವವು ಉಪಪನ್ನವಾಗುತ್ತದೆ ಎಂಬ ವಿಚಾರವನ್ನು ಹಿಂದೆ ''ವಿಷಯಾಂತರೇ'' ಎಂಬ ವಾಕ್ಯದಿಂದ ನಿರೂಪಿಸಿದರು. ಪ್ರಕೃತ ಅದನ್ನೇ ವಿವರಿಸುತ್ತಾರೆ -

**ಮೂಲ :- ಅತಃ ಪರೋ ಮಾತ್ರಯೇತಿ ಪೂರ್ವಶ್ರುತಿನಿದರ್ಶಿತಃ ।**
**ಅನ್ಯಮೀಶಮಿತಿ ಶ್ರುತ್ಯಾ ಭಿನ್ನಜೀವದೃಶಂ ಗತಃ ।**
**ಭಿನ್ನತ್ವೇನಾತ್ಮಸಾದೃಶ್ಯದೋ ಯದೇತಿ ಶ್ರುತೇಃ ಸದಾ ॥**

ಮೂಲದ ಅರ್ಥ :-ಅತಃ = ಅದ್ವೈತಪಕ್ಷದಲ್ಲಿ ಅಧಿಕಾರ್ಯಾದಿಗಳು ಉಪಪನ್ನವಾಗುವುದಿಲ್ಲವಾದ್ದರಿಂದ, ''**ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ**'' ಇತ್ಯಾದಿಶ್ರುತಿಗಳಿಂದ ಅನಂತಗುಣಾಶ್ರಯಸ್ವರೂಪವುಳ್ಳವನಾಗಿ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆ. ಅವನೇ ಶಾಸ್ತ್ರಕ್ಕೆ ವಿಷಯ.

''**ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ**'' ಎಂದು ಶ್ರುತಿಯಿರುವುದರಿಂದ ಪರಮಾತ್ಮನಿಂದ ಭಿನ್ನನಾಗಿ ಯಾವ ಜೀವನು ತಿಳಿಯಲ್ಪಡುತ್ತಿದ್ದಾನೆಯೋ ಅವನು ಪಡೆದುಕೊಳ್ಳುವ (ಶಾಸ್ತ್ರಾಧ್ಯಯನಾದಿಗಳಿಂದ ಜೀವನು ಸಂಪಾದಿಸುವ) ಸಾಕ್ಷಾತ್ಕಾರಕ್ಕೆ ಪರಮಾತ್ಮನು ವಿಷಯನಾಗುತ್ತಾನೆ. ಹಾಗಾಗಿ ಶಾಸ್ತ್ರಗಳ ಮೂಲಕ ಸಾಕ್ಷಾತ್ಕಾರವನ್ನು ಪಡೆದುಕೊಳ್ಳುವ (ಅಜ್ಞಾನಿ) ಜೀವನೇ ಅಧಿಕಾರಿ.

''**ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ**'' ಎಂದು ಶ್ರುತಿ ಇರುವುದರಿಂದ ತನ್ನ ಸಾಕ್ಷಾತ್ಕಾರವನ್ನು ಸಂಪಾದಿಸಿಕೊಂಡಂತಹ ಜೀವನಿಗೆ ಭಗವಂತನು ತನ್ನ ಸಾದೃಶ್ಯವನ್ನು (ಮೋಕ್ಷವನ್ನು) ಕೊಡುತ್ತಾನೆ. ಆದ್ದರಿಂದ ಮೋಕ್ಷವೇ ಪ್ರಯೋಜನವಾಗಿದೆ.

---

148 ಅತೀಂದ್ರಿಯೇ ತಸ್ಮಿನ್ನುಪದೇಶಾದ್ಯಸಂಭವೇನ ವ್ಯುತ್ಪತ್ತ್ಯಯೋಗಾತ್ ಈಶ್ವರಪದಾದಪಿ ತದಧಿಗತಿರ್ನ ಸಂಭವತೀತ್ಯಾಶಯೇನ ಕಥಂಚಿತ್ ಇತ್ಯುಕ್ತಮ್ । (ಶ್ರೀನಿ)

149 ಈಶ್ವರಪದೇನ ಲೌಕಿಕೈಃ ಅಗಣ್ಯಗುಣಾಶ್ರಯತ್ವಾನವಗಮಾದಿತ್ಯರ್ಥಃ । (ಶ್ರೀನಿ)

150 ಸಾಮಾನ್ಯತ ಇತಿ । ಈಶ್ವರೋಽಗಣ್ಯಗುಣಾಶ್ರಯ ಇತಿ ಸಾಮಾನ್ಯತೋ ಜ್ಞಾನಾನಂದಶಕ್ತ್ಯಾದ್ಯಗಣ್ಯಗುಣವಾನಿತಿ ವಿಶೇಷತಶ್ಚೇತ್ಯರ್ಥಃ । (ಶ್ರೀನಿ)

**ಈ ರೀತಿಯಾಗಿ ಭೇದಪಕ್ಷದಲ್ಲಿ ಅಧಿಕಾರ್ಯಾದಿಗಳನ್ನು ಸೂಚಿಸುತ್ತಿದ್ದಾರೆ ಆಚಾರ್ಯರು.**

ಅದ್ವೈತಪಕ್ಷದಲ್ಲಿ ಅಧಿಕಾರ್ಯಾದಿಗಳು ಉಪಪನ್ನವಾಗುವುದಿಲ್ಲ ಎನ್ನುವುದನ್ನು 'ಅತಃ' ಎಂಬ ಪದದಿಂದ ಪರಾಮರ್ಶ ಮಾಡುತ್ತಿದ್ದಾರೆ ಆಚಾರ್ಯರು. ಹಾಗಾಗಿ 'ಅತಃ' ಎಂದರೆ - 'ಅದ್ವೈತಪಕ್ಷದಲ್ಲಿ ಅಧಿಕಾರ್ಯಾದಿಗಳು ಉಪಪನ್ನವಾಗುವುದಿಲ್ಲವಾದ್ದರಿಂದ' ಎಂದು ಅರ್ಥ.

ಮೂಲದಲ್ಲಿ ''ಅತಃ ಪರೋ ಮಾತ್ರಯೇತಿ ಪೂರ್ವಶ್ರುತಿನಿದರ್ಶಿತಃ।'' ಎಂಬ ಶ್ಲೋಕಾರ್ಧದಿಂದ ಭೇದಪಕ್ಷದಲ್ಲಿ ಶಾಸ್ತ್ರಕ್ಕೆ ಪರಮೇಶ್ವರನು ವಿಷಯನಾಗುತ್ತಾನೆ ಎಂಬುದಾಗಿ ವಿಷಯವನ್ನು ತೋರಿಸುತ್ತಿದ್ದಾರೆ.

ಆದರೆ ಆ ಪರಮೇಶ್ವರನು ಶಾಸ್ತ್ರಕ್ಕೆ ವಿಷಯನಾಗಲು ಹೇಗೆ ಸಾಧ್ಯ ? ಕಾರಣ ಅಜ್ಞಾತವಾದ ವಸ್ತು ಶಾಸ್ತ್ರಕ್ಕೆ ವಿಷಯವಾಗುತ್ತದೆ. ('ಅಪ್ರಾಪ್ತೇ ಶಾಸ್ತ್ರಮರ್ಥವತ್' ಎಂಬುದಾಗಿ ನ್ಯಾಯ ಇರುವುದರಿಂದ ಅಜ್ಞಾತವಾದ ವಸ್ತುವನ್ನು ತಿಳಿಸಿದಾಗ ಮಾತ್ರ ಶಾಸ್ತ್ರವು ಸಾರ್ಥಕವಾಗುತ್ತದೆ.) ಪ್ರಕೃತದಲ್ಲಿ ಪರಮೇಶ್ವರನು ಲೋಕದಲ್ಲಿ ಅಜ್ಞಾತನಾಗಿಲ್ಲ. 'ಈಶ್ವರ' ಪದದಿಂದಲೇ ಎಲ್ಲ ಲೌಕಿಕರಿಂದಲೂ ವಿಜ್ಞಾತನಾಗಿದ್ದಾನೆ. (ಈಶ್ವರನಿದ್ದಾನೆ ಎಂದು ಪಂಡಿತರಿಂದ ಪಾಮರರವರೆಗೆ ಎಲ್ಲರೂ ಒಪ್ಪಿದ್ದಾರೆ.) ಅಂದಮೇಲೆ ವಿಜ್ಞಾತನಾದ ಈಶ್ವರನು ಅಜ್ಞಾತನಾಗದ ಕಾರಣ ಶಾಸ್ತ್ರಕ್ಕೆ ಹೇಗೆ ವಿಷಯನಾಗುತ್ತಾನೆ ? ಎಂದು ಶಂಕೆ ಬಂದರೆ, ಅದಕ್ಕೆ

**''ಪರೋ ಮಾತ್ರಯಾ ಇತಿ ಪೂರ್ವಶ್ರುತಿನಿದರ್ಶಿತಃ''**

ಎಂದು ಆಚಾರ್ಯರು ಹೇಳಿದರು. ಈಶ್ವರ ಇದ್ದಾನೆ ಎಂದು ಎಲ್ಲರೂ ಒಪ್ಪಿದ್ದರೂ ಸಹ (ಕೇವಲ ಈಶ್ವರನ ಸ್ವರೂಪ ಎಲ್ಲರಿಂದ ವಿಜ್ಞಾತವಾಗಿದ್ದರೂ ಸಹ)

**''ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ''**
**''ಗುಣಾಃ ಶ್ರುತಾಸ್ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ''**

ಇತ್ಯಾದಿಶ್ರುತಿಪ್ರತಿಪಾದ್ಯವಾದ ಅನಂತಗುಣಾಶ್ರಯತ್ವರೂಪಸ್ವರೂಪವು ಹಾಗೆ ಎಲ್ಲ ಲೌಕಿಕರಿಂದ ತಿಳಿಯಲ್ಪಟ್ಟಿಲ್ಲವಾದ್ದರಿಂದ (ಈಶ್ವರನು ಅನಂತಗುಣಪರಿಪೂರ್ಣನಾಗಿದ್ದಾನೆ ಎಂದು ಎಲ್ಲರೂ ತಿಳಿದಿಲ್ಲವಾದ್ದರಿಂದ) 'ಈಶ್ವರನು ಅನಂತಗುಣ-

ಪರಿಪೂರ್ಣನಾಗಿದ್ದಾನೆ' ಎಂದು ಸಾಮಾನ್ಯವಾಗಿ ಮತ್ತು 'ಈಶ್ವರನು ಜ್ಞಾನ-ಆನಂದ -ಶಕ್ತಿ ಮೊದಲಾದ ಅನಂತಗುಣಪರಿಪೂರ್ಣನಾಗಿದ್ದಾನೆ' ಎಂದು ವಿಶೇಷವಾಗಿಯೂ ಈಶ್ವರನನ್ನು ತಿಳಿಸುವುದಕ್ಕಾಗಿ ಶಾಸ್ತ್ರವು ಪ್ರವೃತ್ತವಾಗಿದೆ.

ಹಾಗಾಗಿ ಕೇವಲ ಈಶ್ವರಸ್ವರೂಪ ಎಲ್ಲರಿಂದ ವಿಜ್ಞಾತವಾಗಿ ಅಜ್ಞಾತವಾಗದ ಕಾರಣ ಶಾಸ್ತ್ರಕ್ಕೆ ವಿಷಯವಾಗದಿದ್ದರೂ ಸಹ, 'ಪರೋ ಮಾತ್ರಯಾ' ಇತ್ಯಾದಿಶ್ರುತಿಪ್ರತಿಪಾದ್ಯ ಅನಂತಗುಣಾಶ್ರಯತ್ವಸ್ವರೂಪವು ಎಲ್ಲರಿಂದ ವಿಜ್ಞಾತವಾಗದೇ ಅಜ್ಞಾತವಾಗಿರುವ ಕಾರಣ ಅಂತಹ ಅನಂತಗುಣಾಶ್ರಯನಾದ ಈಶ್ವರನು ಭೇದಪಕ್ಷದಲ್ಲಿ ಶಾಸ್ತ್ರಕ್ಕೆ ವಿಷಯನಾಗುತ್ತಾನೆ. ಹೀಗೆ ಭೇದಪಕ್ಷದಲ್ಲಿ ವಿಷಯವು ಉಪಪನ್ನ ಎಂಬುದನ್ನು ಆಚಾರ್ಯರು ತೋರಿಸುತ್ತಿದ್ದಾರೆ.

**ಟೀಕಾ :- [151]ದ್ವಿತೀಯಾರ್ಧೇನ ಅಧಿಕಾರೀ ದರ್ಶಿತಃ । ಸ ಚ ಪರಮಾತ್ಮಕಶ್ಚೇತ್ ಸರ್ವಜ್ಞತಯಾ [152]ನಾಧಿಕಾರೀ ಸ್ಯಾದಿತಿ ಶ್ರುತ್ಯಾ ಭಿನ್ನತ್ವೇನ ಸಮರ್ಥಿತಃ । ಯದ್ಯಪಿ ಅದ್ವೈತಪಕ್ಷೇ ಅಧಿಕಾರ್ಯಾದ್ಯಸಂಭವಸ್ಯೋಕ್ತತ್ವಾತ್ [153]ಭಿನ್ನ ಏವಾಧಿಕಾರೀ ಸಿದ್ಧಃ, ತಥಾಪಿ ಪ್ರಾಕ್ 'ಪ್ರತ್ಯಕ್ಷಾದಿಸಿದ್ಧೋ ಭೇದಃ' [154]ಇತ್ಯುಕ್ತಂ, ತತ್ರ ಪ್ರತ್ಯಕ್ಷಾನುಮಾನೇ [155]ದರ್ಶಿತೇ, [156]ಆಗಮಪ್ರದರ್ಶನಾಯೇದಂ ಶ್ರುತ್ಯುದಾಹರಣಮ್ ।**

---

151 ಭಿನ್ನಜೀವದೃಶಂ ಗತ ಇತಿ ವಿಶೇಷಣಕಥನೇನ ಅಧಿಕಾರೀ ದರ್ಶಿತ ಇತ್ಯರ್ಥಃ ।

152 ಅಜ್ಞ ಏವ ಅಧಿಕಾರೀ ಇತಿ ಭಾವಃ ।

153 ತಥಾ ಚ ಸ ಚ ಪರಮಾತ್ಮಕಶ್ಚ ಸರ್ವಜ್ಞತಯಾ ನಾಧಿಕಾರೀ ಸ್ಯಾದಿತಿ ಶಂಕಾಯಾ ಏವಾಭಾವೇನ 'ಅನ್ಯಮೀಶಂ' ಇತಿ ಶ್ರುತ್ಯುದಾಹರಣಂ ವ್ಯರ್ಥಮಿತಿ ಭಾವಃ । (ಶ್ರೀನಿ)

154 ಆತ್ಮಸ್ವಭಾವಭೇದಸ್ಯ ವಿದೋಷತ್ವೇನ ಚೇತ್ಯತ್ರ ಚಶಬ್ದೇನ ಪ್ರಾಮಾಣಿಕತ್ವಸ್ಯ ಸಮುಚ್ಚಿತತ್ವೇನ ಭೇದಸ್ಯ ಪ್ರತ್ಯಕ್ಷಾದಿಪ್ರಮಾಣಸಿದ್ಧತ್ವಾದಿತ್ಯರ್ಥಃ । (ಶ್ರೀನಿ)

155 ಅಜ್ಞತಾ ಚೇತ್ಯಾದಿನಾ ಜೀವೇಶ್ವರಭೇದೇ ಪ್ರತ್ಯಕ್ಷಾನುಮಾನೇ ದರ್ಶಿತೇ ಇತ್ಯರ್ಥಃ । (ಶ್ರೀನಿ)

156 ಅನ್ಯಮೀಶಮಿತಿ ಶ್ರುತ್ಯಾ ಸ್ಫುಟಂ ಭೇದಸ್ಯೋಕ್ತತ್ವಾದಿತ್ಯರ್ಥಃ ।

**ಅನುವಾದ :- ''ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ''** ಎಂದು ಶ್ರುತಿಯಿರುವುದರಿಂದ ಪರಮಾತ್ಮನಿಂದ ಭಿನ್ನನಾಗಿ ಯಾವ ಜೀವನು ತಿಳಿಯಲ್ಪಡುತ್ತಿದ್ದಾನೆಯೋ ಅವನು ಪಡೆದುಕೊಳ್ಳುವ (ಶಾಸ್ತ್ರಾಧ್ಯಯನಾದಿಗಳಿಂದ ಜೀವನು ಸಂಪಾದಿಸುವ) ಸಾಕ್ಷಾತ್ಕಾರಕ್ಕೆ ಪರಮಾತ್ಮನು ವಿಷಯನಾಗುತ್ತಾನೆ ಎನ್ನುವುದು ಇಲ್ಲಿಯ ಮೂಲಾರ್ಥ.

ಇಲ್ಲಿ ಆಚಾರ್ಯರು

**ಅನ್ಯಮೀಶಮಿತಿ ಶ್ರುತ್ಯಾ ಭಿನ್ನಜೀವದೃಶಂ ಗತಃ ।**

ಎಂಬ ದ್ವಿತೀಯಾರ್ಧದಿಂದ 'ಭಿನ್ನಜೀವದೃಶಂ ಗತಃ' ಎಂದು ವಿಶೇಷಣ ಕೊಡುವುದರಿಂದ ಭೇದಪಕ್ಷದಲ್ಲಿ ಶಾಸ್ತ್ರಕ್ಕೆ ಅಧಿಕಾರಿಯನ್ನು ತೋರಿಸುತ್ತಿದ್ದಾರೆ. ಜೀವನೇ ಅಧಿಕಾರಿ ಎಂದು ಹೇಳುತ್ತಿದ್ದಾರೆ. ಆದರೆ ಆ ಜೀವನು ಪರಮಾತ್ಮನಿಂದ ಅಭಿನ್ನನಾಗುವುದಾದರೆ ಪರಮಾತ್ಮನಂತೆ ಅವನೂ ಸರ್ವಜ್ಞನಾಗುವುದರಿಂದ ಅವನು ಶಾಸ್ತ್ರಕ್ಕೆ ಅಧಿಕಾರಿಯಾಗಲಾರ. (ಅಜ್ಞಾನಿಯು ಶಾಸ್ತ್ರಕ್ಕೆ ಅಧಿಕಾರಿಯಾಗಬಲ್ಲನು. ಜೀವನು ಸರ್ವಜ್ಞನಾದರೆ ಅವನು ಶಾಸ್ತ್ರಕ್ಕೆ ಅಧಿಕಾರಿಯಾಗುವುದಿಲ್ಲ.) ಅದಕ್ಕಾಗಿ ಆಚಾರ್ಯರು ಹೇಳಿದರು- ''ಅನ್ಯಮೀಶಂ'' ಎಂದು.

ಇಲ್ಲಿ ಆಚಾರ್ಯರು -

**ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ।**

ಎಂಬ ಶ್ರುತಿಯನ್ನು ಉದಾಹರಿಸುವ ಮೂಲಕ ಈಶ್ವರನು ಜೀವನಿಂದ ಭಿನ್ನನಾಗಿದ್ದಾನೆ ಎಂದು ಸಮರ್ಥಿಸುತ್ತಿದ್ದಾರೆ. ಹಾಗಾಗಿ ಜೀವನು ಪರಮಾತ್ಮನಿಂದ ಅಭಿನ್ನನಾಗಿಲ್ಲವಾದ್ದರಿಂದ ಅಜ್ಞಾನಿಯಾಗಬಹುದು. ಅಜ್ಞಾನಿಯಾದ್ದರಿಂದ ಅವನು ಶಾಸ್ತ್ರಕ್ಕೆ ಅಧಿಕಾರಿಯಾಗುತ್ತಾನೆ ಎಂದು ಭಾವ.

ಯದ್ಯಪಿ ''ಅದ್ವೈತಪಕ್ಷದಲ್ಲಿ ಅಧಿಕಾರ್ಯಾದಿಗಳು ಸಂಭವಿಸುವುದಿಲ್ಲ'' ಎಂದು ಹಿಂದೆ ಹೇಳಿದ್ದರಿಂದ ಪರಮಾತ್ಮನಿಂದ ಭಿನ್ನನಾದವನೇ ಅಧಿಕಾರಿ ಎಂದು ಸಿದ್ಧನಾಗುತ್ತಾನೆ. ಹಾಗಾಗಿ ''ಜೀವನು ಪರಮಾತ್ಮನಿಂದ ಅಭಿನ್ನನಾದರೆ ಸರ್ವಜ್ಞನಾಗುವ ಕಾರಣ ಅಧಿಕಾರಿಯಾಗುವುದಿಲ್ಲ'' ಎಂಬ ಶಂಕೆಯೇ ಇಲ್ಲವಾದ್ದರಿಂದ ''ಅನ್ಯಮೀಶಂ'' ಎಂಬ ಶ್ರುತಿಯನ್ನು ಉದಾಹರಣ ಮಾಡಿದ್ದು ವ್ಯರ್ಥವೇ.

ತಥಾಪಿ ಹಿಂದೆ -

**ಆತ್ಮಸ್ವಭಾವಭೇದಸ್ಯ ವಿದೋಷತ್ವೇನ ಚಾಖಿಲಃ ।**

ಎನ್ನುವಲ್ಲಿ ಚಶಬ್ದದಿಂದ ಪ್ರಾಮಾಣಿಕತ್ವವನ್ನೂ ಸಮುಚ್ಚಯ ಮಾಡಿದ್ದರಿಂದ, ಭೇದವು ಪ್ರತ್ಯಕ್ಷಾದಿಸಿದ್ಧವಾಗಿದೆ (ಪ್ರತ್ಯಕ್ಷ-ಅನುಮಾನ-ಆಗಮುಗಳಿಂದ ಸಿದ್ಧವಾಗಿದೆ) ಎಂದು ಹೇಳಿದರು. ಅಲ್ಲಿ-

**ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ ।**
**ಅನ್ಯತ್ವಂ ಸ್ವಾತ್ಮನಸ್ತಸ್ಮಾತ್ ಸರ್ವೈರೇವಾನುಭೂಯತೇ ॥**

**ಅಜ್ಞತಾ ಚಾಲ್ಪಶಕ್ತಿತ್ವಂ ದುಃಖಿತ್ವಂ ಸ್ವಲ್ಪಕರ್ತೃತಾ ।**
**ಸರ್ವಜ್ಞತ್ವಾದೀಶಗುಣವಿರುದ್ಧಾ ಹ್ಯನುಭೂತಿಗಾಃ ॥**

ಇತ್ಯಾದಿಯಾಗಿ ಭೇದವು ಪ್ರತ್ಯಕ್ಷ-ಅನುಮಾನಗಳಿಂದ ಸಿದ್ಧವಾಗಿದೆ ಎಂದು ಸಮರ್ಥಿಸಿದರು. ಪ್ರಕೃತ ಭೇದವು ಆಗಮಸಿದ್ಧವೂ ಆಗಿದೆ ಎಂದು ತೋರಿಸಲು (ಭೇದವಿಷಯದಲ್ಲಿ ಆಗಮಪ್ರಮಾಣವನ್ನು ಉದಾಹರಿಸುವುದಕ್ಕಾಗಿ) ''ಅನ್ಯಮೀಶಂ'' ಎಂಬ ಶ್ರುತಿಯನ್ನು ಉದಾಹರಣ ಮಾಡುತ್ತಿದ್ದಾರೆ. ಆದ್ದರಿಂದ ವೈಯ್ಯರ್ಥ್ಯದೋಷ ಇಲ್ಲ ಎಂದು ಭಾವ.

**ಟೀಕಾ :- ಭಿನ್ನತ್ವೇನ ಇತ್ಯನೇನ ಪ್ರಯೋಜನಂ ದರ್ಶಿತಮ್ । ತತ್ರ ಭಿನ್ನತ್ವೇನ ಇತಿ ಸ್ವರೂಪಸಂಕೀರ್ತನಮ್ । [157]ಸಾದೃಶ್ಯೋಕ್ತ್ಯಾ ಭೇದಸ್ಯ ಲಬ್ಧತ್ವಾತ್ । [158]ಸದಾ ಇತಿ ಸಾದೃಶ್ಯವಿಶೇಷಣಮ್ । ಪ್ರಯೋಜನೇ [159]ವಿಪ್ರತಿಪತ್ತೇಃ 'ಯದಾ ಪಶ್ಯಃ' ಇತಿ ಶ್ರುತಿರುದಾಹೃತಾ ।**

---

157 ಸಾದೃಶ್ಯಸ್ಯ ಭೇದವ್ಯಾಪ್ತತ್ವೇನ ವ್ಯಾಪ್ಯೋಕ್ತ್ಯಾ ವ್ಯಾಪಕಸ್ಯ ಭೇದಸ್ಯ ಲಬ್ಧತ್ವೇನ ತಚ್ಛರೀರಾಂತರ್ಗತತ್ವಾಭಾವಾತ್ ಧೂಮವತ್ತ್ವೋಕ್ತ್ಯಾ ಲಬ್ಧಸ್ಯ ವಹ್ನೇಃ ಧೂಮಶರೀರಾಂತರ್ಗತತ್ವಾಭಾವವತ್ ಇತ್ಯರ್ಥಃ । (ಶ್ರೀನಿ)

158 ಅಭಿವ್ಯಕ್ತಾನಂದತ್ವಾದಿರೂಪಮೋಕ್ಷಾದಿಸಾದೃಶ್ಯಸ್ಯ ಸದಾತನತ್ವರೂಪಂ ವಿಶೇಷಣಂ ಸದೇತ್ಯನೇನೋಕ್ತಮಿತ್ಯರ್ಥಃ । (ಶ್ರೀನಿ)

159 ಏಕವಿಂಶತಿದುಃಖಧ್ವಂಸ ಏವ ಮೋಕ್ಷ ಇತಿ ಕೇಚಿದಾಹುಃ । ಆತ್ಮಹಾನಿರಿತ್ಯನ್ಯೇ । ಸಂತತೋರ್ಧ್ವಗತಿರಿತ್ಯನ್ಯೇ । ಇತ್ಯೇವಂ ವಿಪ್ರತಿಪತ್ತೇಃ ಸ್ವಾಭಿಮತಮೋಕ್ಷರೂಪ-ಪ್ರಯೋಜನಸ್ಯ ಪ್ರಾಮಾಣಿಕತ್ವಸೂಚನಾಯ ಯದಾ ಪಶ್ಯ ಇತಿ ಶ್ರುತಿರುದಾಹೃತೇತ್ಯರ್ಥಃ। (ಶ್ರೀನಿ)

**ಅನುವಾದ :-** **''ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ''** ಎಂದು ಶ್ರುತಿ ಇರುವುದರಿಂದ ತನ್ನ ಸಾಕ್ಷಾತ್ಕಾರವನ್ನು ಸಂಪಾದಿಸಿಕೊಂಡಂತಹ ಜೀವನಿಗೆ ಭಗವಂತನು ತನ್ನ ಸಾದೃಶ್ಯವನ್ನು (ಮೋಕ್ಷವನ್ನು) ಕೊಡುತ್ತಾನೆ ಎನ್ನುವುದು ಇಲ್ಲಿಯ ಮೂಲಾರ್ಥವಾಗಿದೆ.

ಇಲ್ಲಿ **''ಭಿನ್ನತ್ವೇನಾತ್ಮಸಾದೃಶ್ಯದಃ''** ಎಂಬ ತೃತೀಯಾರ್ಧದಿಂದ ಭೇದಪಕ್ಷದಲ್ಲಿ ಮೋಕ್ಷರೂಪವಾದ ಪ್ರಯೋಜನವನ್ನು ತೋರಿಸುತ್ತಿದ್ದಾರೆ ಆಚಾರ್ಯರು. (ಜ್ಞಾನಾನಂದಾದಿರೂಪಭಗವತ್ಸಾದೃಶ್ಯಾತ್ಮಾನಂದವ್ಯಕ್ತಿಯೇ ಮೋಕ್ಷವಾದ್ದರಿಂದ 'ಆತ್ಮಸಾದೃಶ್ಯದಃ' ಎಂಬ ಪದದಿಂದ ಮೋಕ್ಷರೂಪಪ್ರಯೋಜನವನ್ನು ತಿಳಿಸುತ್ತಿದ್ದಾರೆ ಎಂದು ಭಾವ।)

**'ಭಿನ್ನತ್ವೇನ ಆತ್ಮಸಾದೃಶ್ಯದಃ'** ಎಂಬ ಮೂಲದಲ್ಲಿ ಭಿನ್ನತ್ವದಿಂದ (ಸಹಿತವಾದ) ಘಟಿತವಾದ ಯಾವ ಆತ್ಮಸಾದೃಶ್ಯವಿದೆಯೋ ಅದನ್ನು ಕೊಡುವವನು ಎಂಬುದಾಗಿ 'ಭಿನ್ನತ್ವೇನ' ಎನ್ನುವುದು ಸಾದೃಶ್ಯರೂಪಪ್ರಯೋಜನಶರೀರದಲ್ಲಿ ಅಂತರ್ಗತವಾಗಿದೆ ಎಂದು ತೋರುತ್ತದೆ. ಆದರೆ ಅಲ್ಲಿ 'ಭಿನ್ನತ್ವೇನ' ಎನ್ನುವುದು ಸ್ವರೂಪಸಂಕೀರ್ತನ-ವಾಗಿದೆ. ಹೊರತು ಸಾದೃಶ್ಯರೂಪಪ್ರಯೋಜನಶರೀರದಲ್ಲಿ ಅಂತರ್ಗತವಾಗಿಲ್ಲ. ಏಕೆಂದರೆ, ಸಾದೃಶ್ಯವು ಭೇದದಿಂದ ವ್ಯಾಪ್ತವಾಗಿರುವುದರಿಂದ (ಯತ್ರ ಸಾದೃಶ್ಯಂ ತತ್ರ ಭೇದಃ ಎಂದು ವ್ಯಾಪ್ತಿ ಇರುವುದರಿಂದ) ಪ್ರಕೃತ ವ್ಯಾಪ್ಯವಾದ ಸಾದೃಶ್ಯವನ್ನು ಹೇಳಿದರೆ ವ್ಯಾಪಕವಾದ ಭೇದವು ಲಬ್ಧವೇ ಆಗುವುದರಿಂದ, ಭಿನ್ನತ್ವವು ಸಾದೃಶ್ಯರೂಪಪ್ರಯೋಜನಶರೀರದಲ್ಲಿ ಅಂತರ್ಗತವಾಗಬೇಕಾದದ್ದಿಲ್ಲ. ಹಾಗಾದರೆ- ''ಯತ್ರ ಸಾದೃಶ್ಯಂ ತತ್ರ ಭೇದಃ'' ''ಯತ್ರ ಭೇದಾಭಾವಃ ತತ್ರ ಸಾದೃಶ್ಯಾಭಾವಃ'' ಎಂಬುದಾಗಿ ಭಿನ್ನತ್ವದಿಂದ ಉಪಪದ್ಯಮಾನವಾದ ಯಾವ ಆತ್ಮಸಾದೃಶ್ಯವಿದೆಯೋ ಅದನ್ನು ಕೊಡುವವನು ಎಂದು ಮೂಲದ ಅರ್ಥ ತಿಳಿಯುವುದು.

ಮೂಲದಲ್ಲಿ 'ಸದಾ' ಎನ್ನುವುದು ಸಾದೃಶ್ಯಕ್ಕೆ ವಿಶೇಷಣವಾಗಿದೆ. ಆನಂದಾಭಿವ್ಯಕ್ತಿರೂಪವಾದ ಮೋಕ್ಷವು (ಆತ್ಮಸಾದೃಶ್ಯವು) ಸದಾ=ಸದಾತನವಾಗಿದೆ ಎಂದು ಅಭಿಪ್ರಾಯ.

ಇಲ್ಲಿ ಏಕವಿಂಶತಿದುಃಖಧ್ವಂಸವೇ ಮೋಕ್ಷ ಎಂದು ಕೆಲವರು ಹೇಳಿದರೆ, ಆತ್ಮಹಾನಿಯೇ ಮೋಕ್ಷ ಎಂದು ಹಲವರು ಹೇಳುತ್ತಾರೆ. ಸಂತತಊರ್ಧ್ವಗತಿಯೇ ಮೋಕ್ಷ ಎಂದು ಕೆಲವು ವಾದಿಗಳು ಅಭಿಪ್ರಾಯಪಡುತ್ತಾರೆ. ಈ ರೀತಿಯಾಗಿ ಮೋಕ್ಷಸ್ವರೂಪವಿಚಾರದಲ್ಲಿ ವಿಪ್ರತಿಪತ್ತಿ ಇರುವುದರಿಂದ, ಆನಂದಾಭಿವ್ಯಕ್ತಿ ರೂಪವಾದ ಸ್ವಾಭಿಮತಮೋಕ್ಷವು ಪ್ರಾಮಾಣಿಕವಾಗಿದೆ ಎಂದು ಸೂಚಿಸುವುದಕ್ಕಾಗಿ 'ಯದಾ ಪಶ್ಯಃ' ಎಂಬ ಶ್ರುತಿಯನ್ನು ಉದಾಹರಿಸುತ್ತಿದ್ದಾರೆ ಆಚಾರ್ಯರು.

**ಅವತಾರಿಕೆ** :- ಈ ರೀತಿಯಾಗಿ ಆಚಾರ್ಯರು ಭೇದಪಕ್ಷದಲ್ಲಿ ಅಧಿಕಾರಿ-ವಿಷಯ-ಪ್ರಯೋಜನಗಳನ್ನು ಹೇಗೆ ತಿಳಿಸಿದರು ಎಂದು ನಿರೂಪಿಸಿ, ಪ್ರಕೃತ ಆಚಾರ್ಯರು ಭೇದಪಕ್ಷದಲ್ಲಿ ಸಂಬಂಧವನ್ನೂ ತಿಳಿಸಿದ್ದಾರೆ ಎನ್ನುವುದನ್ನು ನಿರೂಪಿಸುತ್ತಾರೆ -

**ಟೀಕಾ :- ಜೀವದೃಶಂ ಗತ ಇತ್ಯನೇನ [160]ಅಧಿಕಾರಿವಿಷಯಯೋಃ ಸಂಬಂಧೋ ದರ್ಶಿತಃ । ದೃಶಂ ಶಾಸ್ತ್ರಸಾಧ್ಯಾಮಿತಿ ಶೇಷಃ । ತೇನ ಶಾಸ್ತ್ರೇಣ ಅಧಿಕಾರ್ಯಾದೇಃ[161] । [162]ಸಾದೃಶ್ಯದ ಇತ್ಯನೇನ ವಿಷಯಪ್ರಯೋಜನಯೋಃ । ತತ್ರಾಪಿ ಜೀವಸ್ಯೇತಿ ಶೇಷಃ । [163]ತೇನ ಅಧಿಕಾರಿಪ್ರಯೋಜನಯೋರಪೀತಿ ವಿಷಯಾದ್ಯುಪಪನ್ನಮಿತಿ ವಾಕ್ಯಶೇಷಃ । ತೇನ ಅತ ಇತ್ಯಸ್ಯ ಸಂಬಂಧಃ ।**

**ಏವಮದ್ವೈತಮತೇ ಶಾಸ್ತ್ರಸ್ಯಾನಾರಂಭಣೀಯತ್ವಪ್ರಸಂಗಾನ್ನಾದ್ವೈತಮತಂ ಸಂಭವತೀತಿ ಯುಕ್ತಮೇವ ನಾರಾಯಣಸ್ಯಾಗಣ್ಯಗುಣವತ್ತ್ವಮುಪಪಾದಿತಮ್ ।**

---

160 ಜ್ಞಾತೃಜ್ಞೇಯಭಾವರೂಪಸಂಬಂಧೋ ದರ್ಶಿತ ಇತ್ಯರ್ಥಃ । (ಶ್ರೀನಿ)

161 ಆದಿಪದೇನ ವಿಷಯಗ್ರಹಣಮ್ । ಸಂಬಂಧೋ ದರ್ಶಿತ ಇತ್ಯನುವರ್ತತೇ । ತತ್ರ ಶಾಸ್ತ್ರಸ್ಯ ಅಧಿಕಾರಿಣಾ ಪಾಠ್ಯಪಾಠಕಭಾವರೂಪಃ ಸಂಬಂಧಃ । ಶಾಸ್ತ್ರಸ್ಯ ವಿಷಯಸ್ಯ ಚ ಜ್ಞಾಪ್ಯಜ್ಞಾಪಕಭಾವರೂಪಃ ಸಂಬಂಧೋ ದರ್ಶಿತ ಇತ್ಯರ್ಥಃ । (ಶ್ರೀನಿ)

162 ಆತ್ಮಸಾದೃಶ್ಯಪ್ರದತ್ವೋಕ್ತ್ಯಾ ವಿಷಯಪ್ರಯೋಜನಯೋಃ ದಾತೃದೇಯಭಾವರೂಪಃ ಸಂಬಂಧೋ ದರ್ಶಿತ ಇತ್ಯರ್ಥಃ ।

163 ತೇನೇತಿ । ಜೀವಸಾದೃಶ್ಯಪ್ರದತ್ವವಚನೇನ ಅಧಿಕಾರಿಪ್ರಯೋಜನಯೋಃ ಪ್ರಾಪ್ಯಪ್ರಾಪ್ಯಭಾವರೂಪಸಂಬಂಧೋ ದರ್ಶಿತ ಇತ್ಯರ್ಥಃ । (ಶ್ರೀನಿ)

**ಅನುವಾದ :-** ''ಜೀವದೃಶಂ ಗತಃ'' ಎಂಬ ವಾಕ್ಯದಿಂದ ಆಚಾರ್ಯರು ಭೇದಪಕ್ಷದಲ್ಲಿ ಅಧಿಕಾರಿ-ವಿಷಯಗಳಲ್ಲಿ ಸಂಬಂಧವನ್ನು ತೋರಿಸುತ್ತಿದ್ದಾರೆ. ಅಂದರೆ (ಜೀವನು ಭಗವಂತನನ್ನು ತಿಳಿಯುತ್ತಾನೆ) ಜೀವನು ಸಂಪಾದಿಸುವ ಸಾಕ್ಷಾತ್ಕಾರದಲ್ಲಿ ಭಗವಂತನು ವಿಷಯನಾಗುತ್ತಾನೆ ಎಂದು ಹೇಳುವ ಮೂಲಕ ಅಧಿಕಾರಿ-ವಿಷಯಗಳಲ್ಲಿ (ಜೀವ-ಪರಮಾತ್ಮರಲ್ಲಿ) ಜ್ಞಾತೃ-ಜ್ಞೇಯಭಾವಸಂಬಂಧವನ್ನು ತೋರಿಸುತ್ತಿದ್ದಾರೆ. ಅಂದರೆ ಜೀವನು ಜ್ಞಾತೃವಾದರೆ, ಭಗವಂತನು ಜ್ಞೇಯನಾಗಿದ್ದಾನೆ ಎಂದು ತಿಳಿಸುತ್ತಿದ್ದಾರೆ ಎಂದು ಅಭಿಪ್ರಾಯ.

ಮೂಲದಲ್ಲಿ 'ಜೀವದೃಶಂ' ಎನ್ನುವಲ್ಲಿ 'ಶಾಸ್ತ್ರಸಾಧ್ಯಾಂ' ಎಂದು ಶೇಷ ಮಾಡಿಕೊಳ್ಳಬೇಕು. ಆದರಿಂದ (ಜೀವನು ಸಂಪಾದಿಸುವ, ಶಾಸ್ತ್ರಸಾಧ್ಯವಾದ ಸಾಕ್ಷಾತ್ಕಾರಕ್ಕೆ ಈಶ್ವರನು ವಿಷಯನಾಗುತ್ತಾನೆ ಎಂದು ಹೇಳುವುದರಿಂದ) ಶಾಸ್ತ್ರದಿಂದ ಅಧಿಕಾರಿ-ವಿಷಯಗಳಿಗೆ ಸಂಬಂಧವನ್ನು ಸೂಚಿಸುತ್ತಿದ್ದಾರೆ. ಅಂದರೆ ಶಾಸ್ತ್ರಕ್ಕೂ ಅಧಿ ಕಾರಿಗೂ ಪಾಠ್ಯ-ಪಾಠಕಭಾವ ಸಂಬಂಧವನ್ನು ಹೇಳುತ್ತಿದ್ದಾರೆ. (ಶಾಸ್ತ್ರವು ಪಾಠ್ಯವಾದರೆ, ಅಧಿಕಾರಿಯು ಪಾಠಕನಾಗಿದ್ದಾನೆ.) ಮತ್ತು ಶಾಸ್ತ್ರಕ್ಕೂ ವಿಷಯಕ್ಕೂ ಜ್ಞಾಪ್ಯ-ಜ್ಞಾಪಕಭಾವ ಸಂಬಂಧವನ್ನು ಸೂಚಿಸುತ್ತಿದ್ದಾರೆ. (ಶಾಸ್ತ್ರವು ಜ್ಞಾಪಕವಾದರೆ, ವಿಷಯವು ಜ್ಞಾಪ್ಯವಾಗಿದೆ.)

ಮೂಲದಲ್ಲಿ 'ಸಾದೃಶ್ಯದಃ' ಎನ್ನುವಲ್ಲಿ 'ಜೀವಸ್ಯ' ಎಂದು ಶೇಷ ಮಾಡಿಕೊಳ್ಳಬೇಕು. ''ಜೀವಸ್ಯ ಸಾದೃಶ್ಯದಃ'' ''ಜೀವನಿಗೆ ಸಾದೃಶ್ಯ(ಮೋಕ್ಷ) ಕೊಡುತ್ತಾನೆ'' ಎಂದು ಪೂರ್ಣ ಅನ್ವಯ ಮಾಡಿಕೊಳ್ಳಬೇಕು. ಈ ರೀತಿ ಹೇಳುವುದರಿಂದ (ಭಗವಂತನು ಜೀವನಿಗೆ ತನ್ನ ಸಾದೃಶ್ಯವನ್ನು ಕೊಡುತ್ತಾನೆ ಎಂದು ಹೇಳುವುದರಿಂದ) ವಿಷಯಕ್ಕೂ ಪ್ರಯೋಜನಕ್ಕೂ (ಭಗವಂತ-ಮೋಕ್ಷಗಳಲ್ಲಿ) ದಾತೃ-ದೇಯಭಾವ ಸಂಬಂಧವನ್ನು ಸೂಚಿಸುತ್ತಿದ್ದಾರೆ. ಅಂದರೆ ವಿಷಯನಾದ ಭಗವಂತನು ದಾತೃವಾದರೆ, ಮೋಕ್ಷರೂಪ ಪ್ರಯೋಜನವು ದೇಯವಾಗಿದೆ.

ಇದರಿಂದಾಗಿ ಅಧಿಕಾರಿ-ಪ್ರಯೋಜನಗಳಲ್ಲಿ ಪ್ರಾಪ್ತೃ-ಪ್ರಾಪ್ಯಭಾವ ಸಂಬಂಧವನ್ನೂ ಸೂಚಿಸುತ್ತಿದ್ದಾರೆ. ಅಂದರೆ ಅಧಿಕಾರಿಯಾದ ಜೀವನು ಪ್ರಾಪ್ತೃವಾದರೆ, ಪ್ರಯೋಜನವಾದ ಮೋಕ್ಷವು ಪ್ರಾಪ್ಯವಾಗಿದೆ.

ಈ ರೀತಿಯಾಗಿ ಭೇದಪಕ್ಷದಲ್ಲಿ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧಗಳು ಉಪಪನ್ನವಾಗಿವೆ ಎಂದು ವಾಕ್ಯಶೇಷ ಮಾಡಿಕೊಳ್ಳಬೇಕು.

ಆದ್ದರಿಂದ, ಅದ್ವೈತಮತದಲ್ಲಿ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧಗಳು ಅನುಪಪನ್ನವಾದ ಕಾರಣ ಶಾಸ್ತ್ರಕ್ಕೆ ಅನಾರಂಭಣೀಯತ್ವ ಬರಬೇಕಾದ ಪ್ರಸಂಗ ಬರುವುದರಿಂದ ಅದ್ವೈತಮತವು ಸಮಂಜಸವಲ್ಲ. ಭೇದಪಕ್ಷದಲ್ಲಿ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧಗಳು ಉಪಪನ್ನವಾಗುವ ಕಾರಣ ಶಾಸ್ತ್ರವು ಆರಂಭಣೀಯವೇ ಆಗುತ್ತದೆ. ಹಾಗಾಗಿ

**ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।**

ಎಂಬುದಾಗಿ ನಾರಾಯಣನಿಗೆ ಅಗಣ್ಯಗುಣಾಶ್ರಯತ್ವವನ್ನು ಉಪಪಾದನೆ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಟೀಕಾ :- ಕಿಮಸ್ಯ ಪ್ರಯೋಜನಮ್ ? ಇತ್ಯತ ಆಹ -**

**ಮೂಲ : ಮಾಯಾವಾದತಮೋವ್ಯಾಪ್ತಮಿತಿ ತತ್ತ್ವದೃಶಾ ಜಗತ್ ।**
**ಭಾತಂ ಸರ್ವಜ್ಞಸೂರ್ಯೇಣ ಪ್ರೀತಯೇ ಶ್ರೀಪತೇಸ್ಸದಾ ॥**

**ಅನುವಾದ :-** ನಾರಾಯಣನು ಅಗಣ್ಯಗುಣಾಶ್ರಯನಾಗಿದ್ದಾನೆ ಎಂಬುದಾಗಿ ಉಪಪಾದನೆ ಮಾಡಿದಿರಿ. ಅದರಿಂದ ನಿಮಗೆ (ಆಚಾರ್ಯರಿಗೆ) ಏನು ಪ್ರಯೋಜನ ? ಎಂದು ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲಃ- ಮಾಯಾವಾದತಮೋವ್ಯಾಪ್ತಮಿತಿ ತತ್ತ್ವದೃಶಾ ಜಗತ್ ।**
**ಭಾತಂ ಸರ್ವಜ್ಞಸೂರ್ಯೇಣ ಪ್ರೀತಯೇ ಶ್ರೀಪತೇಸ್ಸದಾ ॥**

ಮೂಲದಅರ್ಥ :- ಜಗತ್ತು ಅಂಧಕಾರದಿಂದ ವ್ಯಾಪ್ತವಾಗಿರುವಾಗ ಸೂರ್ಯನು ಆ ಅಂಧಕಾರವನ್ನು ನಾಶ ಮಾಡಿ ಜಗತ್ತನ್ನು ಯಾವ ರೀತಿ ಪ್ರಕಾಶಗೊಳಿಸುತ್ತಾನೆಯೋ, ಅದೇ ರೀತಿ ಮಾಯಾವಾದಮತವೆಂಬ ಅಂಧಕಾರದಿಂದ ಜಗತ್ತು ವ್ಯಾಪ್ತವಾಗಿತ್ತು, ಸರ್ವಜ್ಞಾಚಾರ್ಯರೆಂಬ ಸೂರ್ಯನು ಅಂತಹ ಮಾಯಾವಾದಮತವೆಂಬ ಅಂಧಕಾರವನ್ನು ನಾಶ ಮಾಡಿ ಉತ್ತಮವಾದ ತತ್ತ್ವಜ್ಞಾನ ಎಂಬ ರಶ್ಮಿಗಳಿಂದ ಜಗತ್ತನ್ನು ಪ್ರಕಾಶಗೊಳಿಸಿದ್ದಾರೆ.

ಅದು ಯಾವ ಪ್ರಯೋಜನಕ್ಕಾಗಿ ಮಾಡಿದ್ದು ? ಶ್ರೀಮದಾಚಾರ್ಯರು ಏಕಾಂತಭಕ್ತರಾದ ಕಾರಣ ಕೇವಲ ಶ್ರೀಪತಿಯಾದ ಭಗವಂತನ ಪ್ರೀತಿಗಾಗಿ ಮಾತ್ರ ಮಾಡಿದ್ದು. ಅಂದರೆ ಇಡೀ ಪ್ರಕರಣದಿಂದ ಭಗವಂತನಿಗೆ ಅಗಣ್ಯಗುಣಾಶ್ರಯತ್ವವನ್ನು

ಉಪಪಾದನೆ ಮಾಡಿದ್ದಕ್ಕೆ ಆಚಾರ್ಯರು ಅಪೇಕ್ಷಿಸುವ ಪ್ರಯೋಜನ ಎಂದರೆ ಅದು ಕೇವಲ ಭಗವಂತನ ಪ್ರೀತಿ ಮಾತ್ರ . ಕೇವಲ ವಿಷ್ಣುಪ್ರೀತಿಗಾಗಿ ನಾನು ಮಾಡಿದ್ದೇನೆ. ಆದರಿಂದ ಭಗವಂತ ಸಂತುಷ್ಟನಾದರೆ ನನ್ನ ಪ್ರಯತ್ನ ಸಾರ್ಥಕ ಎನ್ನುವುದು ಆಚಾರ್ಯರ ಅಂತರಂಗ.

**ಟೀಕಾ :- ಏವಂ ಸಮಾಪಿತಪ್ರಕರಣೋಽಪಿ[164] ಭಗವಾನಾಚಾರ್ಯೋಽಂತೇಽಪಿ ಪರಮೇಶ್ವರಪ್ರಣಾಮಸ್ತವನೇ [165]ವಿಧತ್ತೇ -**

**ಮೂಲ -**

**ನಮೋಽ[166]ಮಂದನಿಜಾನಂದಸಾಂದ್ರಸುಂದರಮೂರ್ತಯೇ।**
**ಇಂದಿರಾಪತಯೇ ನಿತ್ಯಾನಂದಭೋಜನದಾಯಿನೇ ॥**

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇಷು ದಶಪ್ರಕರಣೇಷು ತೃತೀಯಂ ಉಪಾಧಿಖಂಡನಂ ಸಂಪೂರ್ಣಮ್ ॥

**ಟೀಕಾ :- ಆತ್ಮಸಾದೃಶ್ಯದ ಇತ್ಯುಕ್ತಮ್ । [167]ನ ಚಾಯಂ ಪುರುಷಾರ್ಥಃ, ಇತ್ಯೇತತ್ಪರಿಹಾರಾಯ ಆದ್ಯಂ ವಿಶೇಷಣಮ್ । ನಾನಂದಃ [168]ಸ್ವರೂಪೇಣ ಪುರುಷಾರ್ಥಃ ಇತ್ಯತೋ ನಿತ್ಯಾನಂದೇತಿ ವಿಶೇಷಣಮ್ । ಭೋಜನಂ ಭೋಗಃ ಅನುಭವ ಇತಿ ಯಾವತ್ ।**

**ಅನುವಾದ :-** ಈ ರೀತಿಯಾಗಿ ತಾವು ರಚಿಸಿದ ಉಪಾಧಿಖಂಡನ ಪ್ರಕರಣವು ನಿರ್ವಿಘ್ನವಾಗಿ ಪರಿಸಮಾಪ್ತವಾಗಿದ್ದರೂ ಸಹ (ನಿರ್ವಿಘ್ನ ಪರಿಸಮಾಪ್ತಿಗಾಗಿ

---

164 ಪ್ರಕರಣಸ್ಯ ನಿರ್ವಿಘ್ನೇನ ಪರಿಸಮಾಪ್ತತ್ವಾತ್ ಪುನಃ ಪ್ರಣಾಮೋ ಭಕ್ತಿವಶಾದೇವೇತಿ ಜ್ಞಾಪನಾಯ ಸಮಾಪಿತಪ್ರಕರಣೋಽಪೀತ್ಯುಕ್ತಮಿತಿ ಜ್ಞಾತವ್ಯಮ್ । (ಶ್ರೀನಿ)

165 ವಿಪೂರ್ವೋ ದಧಾತಿಃ ಕರೋತ್ಯರ್ಥೇ । ತಥಾ ಚ ಕರೋತೀತ್ಯರ್ಥಃ ।

166 ಅಮಂದೋಽನಲ್ಪಃ ಪೂರ್ಣ ಇತಿ ಯಾವತ್ । ನಿಜಃ ಸ್ವಾಭಾವಿಕೋ ಯ ಆನಂದಃ ತೇನ ಸಾಂದ್ರಾ ನಿಬಿಡಾ ಮೂರ್ತಿರ್ದೇಹಃ ತದುಪೇತಾಯ ಇತ್ಯರ್ಥಃ ।

167 ಅಯಂ ಜೀವಸ್ಯ ಆತ್ಮಸಾದೃಶ್ಯಲಾಭೋ ನ ಪುರುಷಾರ್ಥಃ । ವಸ್ತುತ್ವಾದಿರೂಪಸಾದೃಶ್ಯಸ್ಯ ಸುಖದುಃಖಪ್ರಾಪ್ತಿಹಾನ್ಯೋರನ್ಯತರತ್ವಾಭಾವಾದಿತಿ ಭಾವಃ। (ಶ್ರೀನಿ)

168 ಸ್ವರೂಪೇಣೇತಿ । ಅನನುಭೂಯಮಾನತಯೇತ್ಯರ್ಥಃ ।

ಮಂಗಳಾಚರಣೆ ಮಾಡಬೇಕಾದ ಅನಿವಾರ್ಯತೆ ಇಲ್ಲದಿದ್ದರೂ ಸಹ) ಪರಮಪೂಜ್ಯರಾದ ಶ್ರೀಮದಾಚಾರ್ಯರು ಭಕ್ತಿಪರವಶರಾಗಿ ಗ್ರಂಥದ ಕೊನೆಯಲ್ಲೂ ಮಂಗಳಾಚರಣೆಯನ್ನು (ಪರಮೇಶ್ವರನ ಪ್ರಣಾಮ-ಸ್ತೋತ್ರಗಳನ್ನು) ಮಾಡುತ್ತಿದ್ದಾರೆ -

**ಮೂಲ - ನಮೋಽಮಂದನಿಜಾನಂದಸಾಂದ್ರಸುಂದರಮೂರ್ತಯೇ।**
**ಇಂದಿರಾಪತಯೇ ನಿತ್ಯಾನಂದಭೋಜನದಾಯಿನೇ ॥**

**ಮೂಲಾರ್ಥ :- ಅಮಂದನಿಜಾನಂದಸಾಂದ್ರಸುಂದರಮೂರ್ತಯೇ = ಅಲ್ಪವಲ್ಲದ (ಪರಿಪೂರ್ಣವಾದ) ಸ್ವಾಭಾವಿಕವಾದ ಆನಂದದಿಂದ ನಿಬಿಡವಾದ ದೇಹವುಳ್ಳ, ನಿತ್ಯಾನಂದಭೋಜನದಾಯಿನೇ = ನಿತ್ಯದಲ್ಲಿಯೂ ಅಭಿವ್ಯಕ್ತವಾದ ಆನಂದಾನುಭವವನ್ನು ಕೊಡುವಂತಹ, ಇಂದಿರಾಪತಯೇ=ಲಕ್ಷ್ಮೀಪತಿಯಾದ ಪರಮಾತ್ಮನಿಗೆ ನಮಃ = ನಮಸ್ಕಾರವು.**

**ಅನುವಾದ :-** ಈ ಹಿಂದೆ ''ಆತ್ಮಸಾದೃಶ್ಯದಃ'' ಎಂದು ಹೇಳಿದರು. ಅಂದರೆ ಭಗವಂತನು ಜೀವನಿಗೆ ಸ್ವಾತ್ಮಸಾದೃಶ್ಯವನ್ನು ಕೊಡುತ್ತಾನೆ ಎಂದು ತಿಳಿಸಿದರು. ಅದರಿಂದ ಜೀವನಿಗೆ ಆತ್ಮಸಾದೃಶ್ಯಲಾಭವು ಪುರುಷಾರ್ಥವಾಗಿದೆ ಎಂದು ಹೇಳಿದಂತಾಗುತ್ತದೆ. ಆದರೆ ಜೀವನಿಗೆ ಆಗುವ ಆತ್ಮಸಾದೃಶ್ಯಲಾಭವು ಹೇಗೆ ಪುರುಷಾರ್ಥವಾಗುತ್ತದೆ ? (ಲೋಕದಲ್ಲಿ ಸುಖಪ್ರಾಪ್ತಿ-ದುಃಖಹಾನಿ ಇವುಗಳು ಪುರುಷಾರ್ಥವಾಗಿ ಕಂಡಿದೆ. ಪ್ರಕೃತ ಆತ್ಮಸಾದೃಶ್ಯಲಾಭವು ಸುಖಪ್ರಾಪ್ತಿ-ದುಃಖಹಾನಿ ರೂಪವಾಗಿಲ್ಲವಾದ್ದರಿಂದ ಕೇವಲ ಆತ್ಮಸಾದೃಶ್ಯಲಾಭವು ಹೇಗೆ ಪುರುಷಾರ್ಥವಾಗುತ್ತದೆ ? ಎಂದು ಪ್ರಶ್ನಾಭಿಪ್ರಾಯ.)

ಈ ಪ್ರಶ್ನೆಗೆ ಉತ್ತರರೂಪವಾಗಿ ಆಚಾರ್ಯರು -

**''ಅಮಂದನಿಜಾನಂದಸಾಂದ್ರಸುಂದರಮೂರ್ತಯೇ''**

ಎಂಬುದಾಗಿ ಭಗವಂತನಿಗೆ ಮೊದಲನೇ ವಿಶೇಷಣ ಕೊಟ್ಟಿದ್ದಾರೆ. ''ಅಲ್ಪವಲ್ಲದ (ಪರಿಪೂರ್ಣವಾದ) ಸ್ವಾಭಾವಿಕವಾದ ಆನಂದದಿಂದ ನಿಬಿಡವಾದ ದೇಹವುಳ್ಳವನು'' ಎಂಬುದಾಗಿ ಭಗವಂತನ ದೇಹವು ಆನಂದಾತ್ಮಕವಾಗಿದೆ ಎಂದು ಹೇಳುವುದರಿಂದ ಅಂತಹ ಆನಂದಾತ್ಮಕದೇಹದಿಂದ ಅಭಿನ್ನನಾದ ಭಗವಂತನಿಗೂ ಆನಂದಾತ್ಮಕತ್ವವನ್ನೇ ಹೇಳಿದಂತಾಗುವುದರಿಂದ, ಅಂತಹ ಆನಂದಾತ್ಮಕನಾದ ಭಗವಂತನು ತನ್ನ

ಸಾದೃಶ್ಯವನ್ನು ಜೀವನಿಗೆ ಕೊಟ್ಟರೆ ಜೀವನಿಗೂ ಆನಂದಾತ್ಮಕತ್ವವು ಪ್ರಾಪ್ತವಾಗುತ್ತದೆ. ಹೀಗಾಗಿ ಆತ್ಮಸಾದೃಶ್ಯಲಾಭವು (ಆನಂದಾತ್ಮಕತ್ವವು) ಸುಖಪ್ರಾಪ್ತಿರೂಪವಾದ್ದರಿಂದ ಪುರುಷಾರ್ಥವಾಗೇ ಆಗುತ್ತದೆ ಎಂದು ಅಭಿಪ್ರಾಯ.

ಜೀವನಿಗೆ ಆತ್ಮಸಾದೃಶ್ಯಲಾಭವು (ಆನಂದಾತ್ಮಕತ್ವವು) ಪ್ರಾಪ್ತವಾದರೂ ಸಹ ಆ ಆನಂದವು ಸ್ವರೂಪೇಣ (ಅನುಭವಕ್ಕೆ ಬಾರದೇ ತಾನು ಇದ್ದಮಾತ್ರಕ್ಕೆ) ಪುರುಷಾರ್ಥವಾಗುವುದಿಲ್ಲ. ಆದಕ್ಕಾಗಿ ಆಚಾರ್ಯರು -

''**ನಿತ್ಯಾನಂದಭೋಜನದಾಯಿನೇ**''

ಎಂಬ ಎರಡನೇ ವಿಶೇಷಣ ನೀಡಿದ್ದಾರೆ. ''ನಿತ್ಯದಲ್ಲಿಯೂ ಅಭಿವ್ಯಕ್ತವಾದ ಆನಂದಾನುಭವವನ್ನು ಕೊಡುವಂತಹವನು ಭಗವಂತ'' ಎಂದು ಹೇಳುವ ಮೂಲಕ ಜೀವನಿಗೆ ಕೇವಲ ಆನಂದಾತ್ಮಕತ್ವವನ್ನು ಕೊಟ್ಟಿಲ್ಲ, ಕಿಂತು ಆ ಆನಂದದ ಅನುಭವವನ್ನೂ ಕೊಡುತ್ತಾನೆ ಎಂದು ಹೇಳಿ, ಸ್ವರೂಪೇಣ ಆನಂದವು ಪುರುಷಾರ್ಥವಾಗದಿದ್ದರೂ ಆನಂದಾನುಭವವು ಪುರುಷಾರ್ಥ ಆಗೇ ಆಗುತ್ತದೆ ಎಂದು ತಿಳಿಸುತ್ತಿದ್ದಾರೆ.

**ಅವತಾರಿಕೆ :-** ಈ ರೀತಿಯಾಗಿ ಸರ್ವಜ್ಞಕಲ್ಪರಾದ ಶ್ರೀಮಟ್ಟೀಕಾಕೃತ್ಪಾದರು ತಮ್ಮ ತತ್ವಪ್ರಕಾಶಿಕಾಟೀಕಾಗ್ರಂಥವನ್ನು ಸಮಾಪ್ತಿಗೊಳಿಸಿದವರಾಗಿ, ಗ್ರಂಥದ ಕೊನೆಯಲ್ಲಿಯೂ ಮಂಗಳಾಚರಣೆ ಮಾಡುತ್ತಾರೆ -

**ಟೀಕಾ :-**

**ಸದಾ [169]ಸುರಶಿರೋರತ್ನಪ್ರಭಾಮೋಷಿನಖತ್ವಿಷಿ ।**
**[170]ಕಮಲಾಕಮಿತುಃ ಪಾದಯುಗಲೇ ರತಿರಸ್ತು ಮೇ ॥**

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತತತ್ತ್ವಪ್ರಕಾಶಿಕಾವಿವರಣಂ ಶ್ರೀಮಜ್ಜಯತೀರ್ಥಭಿಕ್ಷುವಿರಚಿತಂ ಸಂಪೂರ್ಣಮ್ ॥

---

169 ಸುರಾಣಾಂ ಶಿರಾಂಸಿ ಸುರಶಿರಾಂಸಿ, ಸುರಶಿರಸ್ಸು ಸ್ಥಿತಾನಿ ರತ್ನಾನಿ ಸುರಶಿರೋರತ್ನಾನಿ, ಸುರಶಿರೋರತ್ನಾನಾಂ ಪ್ರಭಾ ಸುರಶಿರೋರತ್ನಪ್ರಭಾ, ಸುರಶಿರೋರತ್ನಪ್ರಭಾಂ ಮುಷ್ಣಾತಿ (ತಿರಸ್ಕರೋತಿ) ಇತಿ ಸುರಶಿರೋರತ್ನಪ್ರಭಾಮೋಷಿಣೀ, ನಖಾನಾಂ ತ್ವಿಟ್ ನಖತ್ವಿಟ್, ಸುರಶಿರೋರತ್ನಪ್ರಭಾಮೋಷಿಣೀ ನಖತ್ವಿಟ್ ಯಸ್ಯ ತತ್ ಸುರಶಿರೋರತ್ನಪ್ರಭಾ-ಮೋಷಿನಖತ್ವಿಟ್, ತಸ್ಮಿನ್ ಇತ್ಯರ್ಥಃ । (ಶ್ರೀನಿ)

**ಅರ್ಥ :-** ಕಮಲಾಕಮಿತುಃ=ಲಕ್ಷ್ಮೀಪತಿಯಾದ ಭಗವಂತನ ಸುರಶಿರೋರತ್ನ-ಪ್ರಭಾವಮೋಷಿನಖತ್ವಿಷಿ=ದೇವತೆಗಳ ಶಿರಸ್ಸುಗಳಲ್ಲಿ (ತಲೆಯಲ್ಲಿ ಧರಿಸುವ ಕಿರೀಟಗಳಲ್ಲಿ) ಇರುವ ರತ್ನಗಳು, ಆ ರತ್ನಗಳ ಕಾಂತಿ, ಆ ಕಾಂತಿಯನ್ನೂ ಮೀರಿಸುವ (ತಿರಸ್ಕರಿಸುವ) ಉಗುರುಗಳ ಕಾಂತಿಯುಳ್ಳ ಪಾದಯುಗಲೇ = ಎರಡು ಪಾದಗಳಲ್ಲಿ ಮೇ=ನನಗೆ ರತಿಃ=ಆಸಕ್ತಿಯು (ಭಕ್ತಿಯು) ಸದಾ = ಯಾವಾಗಲೂ ಅಸ್ತು = ಇರಲಿ.

**ಅಭಿಪ್ರಾಯ :** ದೇವತೆಗಳು ಉತ್ತಮವಾಗ ಕಿರೀಟಗಳನ್ನು ಧರಿಸಿರುತ್ತಾರೆ. ಅವುಗಳಲ್ಲಿ ಅದ್ಭುತವಾದ ಕಾಂತಿಯುಳ್ಳ ಉತ್ತಮ ರತ್ನಗಳಿವೆ. ಅಂತಹ ರತ್ನಸಹಿತವಾದ ಕಿರೀಟಗಳನ್ನು ಧರಿಸಿ ದೇವತೆಗಳು ಬಂದು ಭಗವಂತನ ಪಾದಗಳಲ್ಲಿ ತಲೆ ಹಚ್ಚಿ ನಮಸ್ಕಾರ ಮಾಡಿದರೆ, ಭಗವಂತನ ಉಗುರುಗಳ ಕಾಂತಿಯು ಆ ದೇವತೆಗಳ ಶಿರೋರತ್ನಗಳ ಕಾಂತಿಯನ್ನೂ ಮೀರಿಸುತ್ತಿತ್ತು. (ನನ್ನ ಕಾಂತಿಯ ಮುಂದೆ ಈ ರತ್ನಗಳ ಕಾಂತಿ ಎಲ್ಲಿಯದು ! ಎಂಬುದಾಗಿ ರತ್ನಗಳ ಕಾಂತಿಯನ್ನೂ ತಿರಸ್ಕರಿಸುತ್ತಿತ್ತು ಭಗವಂತನ ಉಗುರುಗಳ ಕಾಂತಿ.) ಅಂತಹ ಅತ್ಯದ್ಭುತಕಾಂತಿಯುಕ್ತವಾದ ಭಗವಂತನ ಪಾದಕಮಲಗಳಲ್ಲಿ ನನಗೆ ಭಕ್ತಿಯು ಸದಾ ಇರಲಿ ಎಂಬುದಾಗಿ ಶ್ರೀಮಟ್ಟೀಕಾಕೃತ್ಪಾದರು ಪ್ರಾರ್ಥನೆ ಮಾಡುತ್ತಿದ್ದಾರೆ.

॥ ಇಲ್ಲಿಗೆ ಉಪಾಧಿಖಂಡನಟೀಕಾ ಕನ್ನಡಾನುವಾದವು ಮುಗಿಯಿತು ॥

**ಅನೇನ ಭಾವಿ ಯತ್ಪುಣ್ಯಂ ತದಾಪ್ನೋತು ಗುರುರ್ಮಮ ॥**

॥ ಶ್ರೀಕೃಷ್ಣಾರ್ಪಣಮಸ್ತು ॥

★★★★★

---

170 ಕಮಲಾ ಮಹಾಲಕ್ಷ್ಮೀಃ, ತಸ್ಯಾಃ ಕಮಿತುಃ, ಕಮು ಕಾಂತೌ ಕಾಂತಿರಿಚ್ಛಾ, ತಥಾ ಚ ಕಾಮುಕಸ್ಯೇತ್ಯರ್ಥಃ । ಪತ್ಯುರಿತಿ ಯಾವತ್ । (ಶ್ರೀನಿ)



ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವಾಭಾವಿಕವಾಗಿ ಐಕ್ಯವೇ ಇದ್ದರೂ ಸಹ ಔಪಾಧಿಕವಾದ (ಉಪಾಧಿಯಿಂದ ಹುಟ್ಟುವ) ಭೇದವೂ ತಾತ್ಕಾಲಿಕವಾಗಿ ಇದೆ ಎನ್ನುತ್ತಾರೆ ಅದ್ವೈತವಾದಿಗಳು.

ಆದರೆ ಜೀವ-ಬ್ರಹ್ಮರಲ್ಲಿ ಹಾಗೂ ಜೀವರಲ್ಲಿ ಸ್ವಾಭಾವಿಕವಾಗಿ ಭೇದವೇ ಇರುವುದು. ಸ್ವಾಭಾವಿಕವಾಗಿ ಇದ್ದ ಭೇದವನ್ನೇ ಅಂತಃಕರಣಾದಿ ಉಪಾಧಿಗಳು ತಿಳಿಸುತ್ತವೆಯೇ ಹೊರತು ಹೊಸದಾದ (ಮೊದಲು ಇಲ್ಲದ) ಭೇದವನ್ನು ಹುಟ್ಟಿಸುವುದಿಲ್ಲ ಎಂಬುದನ್ನು ಸಮರ್ಥಿಸಲು ಹೊರಟದ್ದು ಈ ಉಪಾಧಿಖಂಡನ ಪ್ರಕರಣ.

ಉಪಾಧಿಯು ಜೀವ-ಬ್ರಹ್ಮಭೇದಕ್ಕೆ ನಿಮಿತ್ತವಲ್ಲ ಎಂಬುದಾಗಿ ಉಪಾಧಿಗೆ ಭೇದಜನಕತ್ವವನ್ನು ಖಂಡಿಸುವುದರಿಂದ ಈ ಗ್ರಂಥಕ್ಕೆ ''ಉಪಾಧಿಖಂಡನ'' ಎಂದು ಹೆಸರು ಸಾರ್ಥಕವಾಗಿದೆ.

ಖಂಡನತ್ರಯದ ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಸಹಾಯಕವಾಗಲಿ ಎಂಬ ದೃಷ್ಟಿಯಿಂದ ಖಂಡನತ್ರಯಕ್ಕೆ ಕನ್ನಡ ಅನುವಾದಕಾರ್ಯವನ್ನು ಕೈಗೆತ್ತಿಕೊಂಡು, ಅದರ ಮೊದಲ ಹಂತವಾಗಿ 'ಮಾಯಾವಾದಖಂಡನ' ಗ್ರಂಥಕ್ಕೆ ಕನ್ನಡ ಅನುವಾದ ಪ್ರಕಟವಾಗಿದೆ. ಪ್ರಕೃತ ಎರಡನೇ ಹಂತವಾಗಿ 'ಉಪಾಧಿಖಂಡನ' ಗ್ರಂಥಕ್ಕೆ ಕನ್ನಡ ಅನುವಾದ ಸಿದ್ಧವಾಗಿದೆ.